## ಪರಿಸರಪ್ರಿಯರಿಗಾಗಿ ನವಕರ್ನಾಟಕದಿಂದ ವನಸಂಪತ್ತಿನ ಬಗ್ಗೆ
## ಶ್ರೀ ಅಜ್ಜಂಪುರ ಕೃಷ್ಣಸ್ವಾಮಿಯವರು ರಚಿಸಿರುವ ಎರಡು ಅಮೂಲ್ಯ ಪುಸ್ತಕಗಳು




₹ 300

← ನೀವು ಅರಣ್ಯಗಳ ಬಗ್ಗೆ ತಿಳಿಯಲು ಉತ್ಸುಕರಾಗಿದ್ದೀರಾ? ನಮಗೆ ಅರಣ್ಯಗಳಿಂದ ಉಪಯೋಗವೇನು? ಅಶೋಕ ಚಕ್ರವರ್ತಿ ನೆರಳಿಗಾಗಿ ಸಾಲುಮರಗಳನ್ನು ನೆಡಿಸಿದ್ದನಂತೆ. ಮಮತೆಯಿಂದ ಗಿಡ ನೆಟ್ಟು ನೀರುಣಿಸಿ ಪೋಷಿಸಿದ ಸಾಲುಮರದ ತಿಮ್ಮಕ್ಕ ನಮ್ಮ ಕಣ್ಣ ಮುಂದೆಯೇ ಇದ್ದಾರೆ. ಕಾಡಿಲ್ಲದೆ ನಾಡಿಲ್ಲ ! ಶ್ರೀಗಂಧ–ಬೀಟೆ–ತೇಗ ಮುಂತಾದ ದೀರ್ಘ ಬಾಳಿಕೆ ಬರುವ, ಹೆಚ್ಚಾಗಿ ಪೀಠೋಪಕರಣ – ಗೃಹನಿರ್ಮಾಣಕ್ಕೆ ಬಳಕೆಯಾಗುವ ಮರಜಾತಿಗಳ ಬಗೆಗೆ ಮಾಹಿತಿಯಿದೆ. ಹಣದ ಹೊಳೆಯನ್ನೇ ಹರಿಸುವ ಇವನ್ನು ಕಾಡ್ಗಿಚ್ಚಿನಿಂದ ರಕ್ಷಿಸಿ, ಬೆಳೆಸಿ ಹೇಗೆ ಉಪಯೋಗಿಸಬಹುದು ಮತ್ತು ಕಾಡಿನ ಉತ್ಪನ್ನಗಳನ್ನೇ ನಂಬಿ ಬದುಕುವ ಜನರಿಗೆ ಹೇಗೆ ಉಪಯುಕ್ತವಾಗುವುದೆಂದೂ ವಿವರಣೆ ಇದೆ. ಮರಗಳೊಂದಿಗೆ ಮೃಗ–ಪಕ್ಷಿಗಳ ಅವಲಂಬನೆಯೂ ಮುಖ್ಯ ವಿಚಾರ. ನಮ್ಮಲ್ಲಿ ಇಷ್ಟೊಂದು ಬಗೆಯ ಮರಜಾತಿಗಳಿವೆಯೇ ಎಂದು ನೀವು ಆಶ್ಚರ್ಯದಿಂದ ಹುಬ್ಬೇರಿಸುತ್ತೀರಿ ! ಕೊಡಲಿ ರೂಪುಗೊಳ್ಳುವ ಮುಂಚೆ ಕಾಡಿನಲ್ಲಿ ಮರಗಳು ಎಷ್ಟು ದಟ್ಟವಾಗಿ ಬೆಳೆದಿದ್ದುವೆಂದರೆ ಸೂರ್ಯಕಿರಣಗಳೇ ನಡುಹಗಲಲ್ಲೂ ನೆಲವನ್ನು ಮುಟ್ಟುತ್ತಿದ್ದಿಲ್ಲವಂತೆ ! ಇಗೋ ಇಲ್ಲಿದೆ ಕಾಡಿನ ಮರಗಳ ಸಂಪೂರ್ಣ ಪರಿಚಯ.

ಈ ಕೃತಿಯಲ್ಲಿ ಮರದ ಲಕ್ಷಣಗಳು, ಸ್ವಾಭಾವಿಕ ಪುನರುತ್ಪನ್ನ, ಕೃತಕ ಪುನರುತ್ಪನ್ನದ ಸಾಧ್ಯತೆಯನ್ನು ವಿವರಿಸಲಾಗಿದೆ. ಗ್ರಾಮೀಣರ ಮತ್ತು ರೈತ ಬಾಂಧವರ ದಿನನಿತ್ಯದ ಬೇಡಿಕೆಗಳಾದ ಉರುವಲು, ಮೇವು, ಗೊಬ್ಬರ, ಔಷಧಿ, ಸಾಂಬಾರ, ಖಾದ್ಯ ವಸ್ತುಗಳನ್ನು ನಿರಂತರವಾಗಿ ಒದಗಿಸುವ ವೃಕ್ಷ ಸಂಪತ್ತಿನ ಪರಿಚಯ ಎಲ್ಲರಿಗೂ ಅವಶ್ಯಕ. ವೃಕ್ಷ ಸಂಪತ್ತಿನ ಜೊತೆಗೆ ವನ್ಯಮೃಗ, ಪಕ್ಷಿ, ಹೂಗಳ ಪರಿಚಯವನ್ನು ಸವಿಸ್ತಾರವಾಗಿ ಮಾಡಿಕೊಡಲಾಗಿದೆ. ಮನಮೋಹಕ ವರ್ಣಛಾಯಾಚಿತ್ರಗಳು ಮನಸ್ಸಿಗೆ ಮುದ ನೀಡುತ್ತವೆ. ಪ್ರಕೃತಿಪ್ರಿಯರಿಗೊಂದು ಅತ್ಯುತ್ತಮ ಹಾಗೂ ಸಂಗ್ರಹಯೋಗ್ಯ ಕೃತಿ. →




₹ 300

ಮೂರು ವರ್ಷದ 'ಹೊಸತು' ಚಂದಾದಾರರಿಗೆ
20% ಸೋಡಿ. ಇತರರಿಗೆ 10% ಸೋಡಿ.
ಅಂಚೆ/ಕೊರಿಯರ್ ವೆಚ್ಚ ರೂ. 40/- ಪ್ರತ್ಯೇಕ
ಎರಡೂ ಪುಸ್ತಕಗಳನ್ನು ಒಟ್ಟಿಗೆ ಕೊಂಡಾಗ
ಅಂಚೆ/ಕೊರಿಯರ್ ವೆಚ್ಚ ಉಚಿತ

ಆನ್‌ಲೈನ್ ಮೂಲಕವೂ ಲಭ್ಯ



@

www.navakarnataka.com

ಹಣವನ್ನು ಡಿ.ಡಿ., ಎಂ.ಒ. ಮೂಲಕ ಕಳಿಸಿ ಅಥವಾ ನಮ್ಮ ಪುಸ್ತಕ ಮಳಿಗೆಗೆ ಭೇಟಿ ನೀಡಿ




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು - 560 001. ಫೋನ್ : 30578022, 22203580 ಫ್ಯಾಕ್ಸ್ : 30578023
e-mail : navakarnataka@gmail.com http://navakarnataka.blogspot.in

ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಗುಲ್ಬರ್ಗಾ ✆ 224302

# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ತನು, ಸ್ಮಿತಾ ಕೌಶಿಕ್, ರವಿ ಹೆಗ್ಗಡಿ, ಷಣ್ಮುಖ
ಕಮಲಂ ಅರಸು, ರಾಂಚಂದ್ರ ಕೊಪ್ಪಲು, ಗೋಪಿ
**ಮುಖಪುಟದ ಛಾಯಾಚಿತ್ರ :** ಶ್ರೀಶೈಲ ಹೊಸಮನಿ, ಹುನಗುಂದ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ನಮ್ಮ ರಾಜ್ಯದ ದೀರ್ಘಕಾಲೀನ ಹಿತದೃಷ್ಟಿಯಿಂದ ಪಾರ್ಲಿಮೆಂಟ್ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷವು ಅನುಭವಿಸಿದ ಸೋಲು ಅಷ್ಟೇನೂ ಮಾರಕವಲ್ಲ, ಆದರೆ ಸರ್ವೋಚ್ಚ ನ್ಯಾಯಾಲಯವು ಶಾಲೆಗಳಲ್ಲಿ ಭಾಷಾಮಾಧ್ಯಮವನ್ನು ಕುರಿತು ನೀಡಿರುವ ತೀರ್ಪು ಬಹಳ ಆಘಾತಕರವಾದದ್ದು. ಲೋಕಸಭೆಯಲ್ಲಿ ಕಾಂಗ್ರೆಸ್‌ನವರು ೨೦ ಮಂದಿ ಕೂತರೂ ಒಂದೇ, ಭಾಜಪದ ೨೦ ಮಂದಿ ಕೂತರೂ ಒಂದೇ. ಶಿಕ್ಷಣದಲ್ಲಿ ಯಾವ ನೀತಿಯು ಹೆಚ್ಚು ಫಲ ನೀಡುತ್ತದೆಂಬುದು ಎರಡು ಪಕ್ಷಗಳಿಗೂ ಆಸಕ್ತಿಯ ವಿಷಯವಲ್ಲ. ಎಲ್ಲಿ ಹೆಚ್ಚು ಹಣವನ್ನು ಹಿರಿದುಕೊಂಡು ಜೇಬು ತುಂಬಿಸಿಕೊಳ್ಳಬಹುದೆಂಬುದು ಅವರಿಗೆ ಮುಖ್ಯವಾಗಿಬಿಟ್ಟಿದೆ. ಸರ್ವೋಚ್ಚ ನ್ಯಾಯಾಲಯದ ಶುದ್ಧ ಅತಾರ್ಕಿಕ ತೀರ್ಮಾನದ ಬಗ್ಗೆ ಯಡಿಯೂರಪ್ಪನವರ ಪಕ್ಷ ಏನಾದರೂ ಅಭಿಪ್ರಾಯ ವ್ಯಕ್ತಪಡಿಸಿದೆಯೆ ? ಅಥವಾ ಡಾ॥ ಪರಮೇಶ್ವರ ಆ ಬಗ್ಗೆ ಹೊಲಿದ ಬಾಯಿ ಬಿಚ್ಚಿ 'ಹಾಗಲ್ಲ, ಹೀಗೆ' ಎಂದಿರುವುದುಂಟೆ ? ಸದರಿ ತೀರ್ಪು ಹೊರಬಂದ ನಂತರ ಖಾಸಗಿ ಆಂಗ್ಲಮಾಧ್ಯಮ ಶಾಲೆಗಳ ವಕೀಲರು ಹೇಳಿದರಂತೆ, 'ಇಂದು ಶರ್ಮ ಬದುಕಿದ್ದಿದ್ದರೆ ಬಹಳ ಸಂತೋಷಿಸುತ್ತಿದ್ದರು' ಎಂದು. ಸಹಜವೇ. ಏಕೆಂದರೆ, ಈ ಮಹಾನ್ ಶಿಕ್ಷಣ ತಜ್ಞರು ಆಂಗ್ಲಭಾಷಾ ಮಾಧ್ಯಮದ ಶಾಲೆಗಳು ಗಂಗಾಮಾತೆಗೆ ಸಮನೆಂದು ಅಪಲಪಿಸಿದ್ದರು. ಆ ಶ್ರೇಷ್ಠ ನದಿಗೆ ಹಿಂದುಳಿದ ಕುಟುಂಬಗಳ ಮಕ್ಕಳನ್ನು ಮೀಯಲು ಬಿಡಬಾರದೆಂದು ಆ ಮಹಾತ್ಮ ಆಗ್ರಹಿಸಿದ್ದರು. ಈ "ಹಿಂದುಳಿದ ಮಕ್ಕಳು ಚರಂಡಿ ನೀರು ಇದ್ದಂತೆ, ಅವು ಪುಣ್ಯ ಗಂಗಾನದಿಯನ್ನು ಕಲುಷಿತಗೊಳಿಸುತ್ತವೆ" ಎಂಬ ದುರಹಂಕಾರದ ಮಾತನ್ನಾಡಿದರೂ ಸಾಮಾನ್ಯ ಜನರು ಅದಕ್ಕೆ ಸಾಕಷ್ಟು ಪ್ರತಿರೋಧ ವ್ಯಕ್ತಪಡಿಸಲಿಲ್ಲ ಮತ್ತು ಕಾಂಗ್ರೆಸ್ ಹಾಗೂ ಭಾಜಪ ತುಟಿಪಿಟಕ್ಕೆನ್ನಲಿಲ್ಲ. ಆ ಪಕ್ಷಗಳಿಗೆ "ಚರಂಡಿ ಜನರ" ಮತಗಳು ಬಿದ್ದರೆ ಸಾಕು, ಆ ಜನರ ವಿದ್ಯಾಭ್ಯಾಸ ಹೇಗಿದ್ದರೇನಂತೆ ! ಎರಡೂ ಪಕ್ಷಗಳ "ನಾಯಕರು" ಮತ್ತು ಅವರ "ಹಿಂಬಾಲಕರು" ಶಿಕ್ಷಣದ ಅಂಗಡಿಗಳನ್ನು ನಡೆಸುತ್ತಿದ್ದಾರೆ. ಸರ್ವೋಚ್ಚ ನ್ಯಾಯಾಲಯದ ತೀರ್ಪು ಈ ಅಂಗಡಿಗಳ ಲಾಭದ ಪ್ರಮಾಣವನ್ನು ಹೆಚ್ಚಿಸುತ್ತದೆ. ಹೀಗಿರುವಾಗ ಅದನ್ನೇಕೆ ಆ ಪಕ್ಷಗಳು ವಿರೋಧಿಸಿಯಾವು ! ಜನಹಿತ ಹಾಳಾಗಲಿ, ಜನಹಿತದ ಮಾತನಾಡುತ್ತಾ ಮತ ಗಳಿಸಿ ಅಧಿಕಾರ ದೊರಕಿಸಿಕೊಂಡರೆ ಅವು ಧನ್ಯ !

ಏನಿದು ಸರ್ವೋಚ್ಚ ನ್ಯಾಯಾಲಯದ ತೀರ್ಪು ? ಹತ್ತು ವರ್ಷಗಳ ಕಾಲ ವಿಚಾರಣೆ ನಡೆದಿರಲಿಲ್ಲ. ಶೀಘ್ರವಾಗಿ ಅದನ್ನು ನಡೆಸಬೇಕೆಂದು ನಮ್ಮ ರಾಜ್ಯದ ಸರ್ಕಾರ ಆಗ್ರಹಿಸಲಿಲ್ಲ. ಸರ್ಕಾರವು ಭಾಜಪದ್ದಾಗಿತ್ತು, ಕಾಂಗ್ರೆಸ್ಸಿನದೂ ಆಗಿತ್ತು. ಬಹುಶಃ ಈಗಿನ ಅಡ್ವೋಕೇಟ್ ಜನರಲ್ ಪ್ರೊ॥ ರವಿವರ್ಮ ಕುಮಾರ್ ಅವರು ತಗಾದೆ ಮಾಡಿ ವಿಚಾರಣೆಯನ್ನು ಶೀಘ್ರವಾಗಿ ನಡೆಸುವಂತೆ ಕೋರಿರಬೇಕು. ಅದಕ್ಕೇ ವಿಚಾರಣೆ ನಡೆಸಿ ಅವಹೇಳನಕರವಾದ ತೀರ್ಪನ್ನು ನ್ಯಾಯಾಲಯವು ನೀಡಿದೆ. ಮುಖ್ಯಮಂತ್ರಿ ಶ್ರೀ. ಸಿದ್ದರಾಮಯ್ಯನವರು ಜರುಗಿಸಿದ ಒಂದು ಸಭೆಯಲ್ಲಿ ಭಾಜಪದ ಪ್ರತಿನಿಧಿ ಹೇಳಿದರು, "ಹಿಂದೆ ನೇಮಕಗೊಂಡಿದ್ದ ವಕೀಲ ಪಿ. ಪಿ. ರಾವ್ ವಾದ ಮಂಡಿಸಿದ್ದರೆ ನಮಗೆ ಒಳ್ಳೆಯ ತೀರ್ಪು ದಕ್ಕುತ್ತಿತ್ತು, ಅವರನ್ನು ತೆಗೆದುಹಾಕಿ ಪ್ರೊ॥ ರವಿವರ್ಮ ಕುಮಾರ್ ಅವರೇ ವಾದ ಮಂಡಿಸಿದ್ದರಿಂದ ನಮಗೆ ಪ್ರತಿಕೂಲವಾದ ತೀರ್ಪು ಬಂದಿದೆ" ಎಂದು. ಇದಕ್ಕಿಂತಲೂ ಬಾಲಿಶವಾದ ಮಾತನ್ನು ಊಹಿಸಿಕೊಳ್ಳಲು ಸಾಧ್ಯವಿಲ್ಲ. ಅದನ್ನು ಹೇಳಿದವರು ಹಿಂದೆ ಶಿಕ್ಷಣ ಸಚಿವರಾಗಿದ್ದವರು. ಅವರು ಆಗಲೇ ಪಿ. ಪಿ. ರಾವ್ ಅವರಿಗೆ ಹೇಳಿ ವಿಚಾರಣೆ ನಡೆಸಲು ತ್ವರೆಗೊಳಿಸಬಹುದಿತ್ತು ಮತ್ತು "ಒಳ್ಳೆಯ" ತೀರ್ಪು ಪಡೆಯಬಹುದಿತ್ತು, ಅಲ್ಲವೆ ? ಅಂದರೆ ಶಿಕ್ಷಣ ಮತ್ತು ಶಿಕ್ಷಣದ ವ್ಯಾಪಾರ, ಇವುಗಳ ನಡುವೆ ಯಾವುದಕ್ಕೆ ಅವರು ಆದ್ಯತೆ

(೬ನೇ ಪುಟಕ್ಕೆ)



# ಸಂಪಾದಕೀಯ





ಸಂಪುಟ-೧೫ ಸಂಚಿಕೆ-೧೧ ಜೂನ್ ೨೦೧೪

■ *ಗೌರವ ಸಂಪಾದಕ*

ಜಿ. ರಾಮಕೃಷ್ಣ

■ *ಸಂಪಾದಕ*

ಸಿದ್ದನಗೌಡ ಪಾಟೀಲ

■ *ಸಹಸಂಪಾದಕರು*

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

■ *ವ್ಯವಸ್ಥಾಪಕ*

ಎ. ಆರ್. ಉಡುಪ

■ *ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

■ *ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು೧೬೮, ೧೧ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

■ *ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@gmail.com
hosathu@gmail.com
hosathu.nkp@gmail.com
URL : www.navakarnataka.com
http : //navakarnataka.blogspot.in
http : //hosathumonthly.blogspot.in


## ಉತ್ಸಾಹವಿರಲಿ, ಉನ್ಮಾದ ಬೇಡ

೧೬ನೇ ಲೋಕಸಭಾ ಚುನಾವಣೆ ದೇಶಕ್ಕೆ ಹೊಸ ಸರಕಾರವನ್ನು ಆಯ್ಕೆ ಮಾಡಿದೆ. ನಿರೀಕ್ಷೆ ಮೀರಿ ಬಿ.ಜೆ.ಪಿ. ಏಕಾಂಗಿಯಾಗಿ ಅಧಿಕಾರ ಮಾಡಬಹುದಾದಷ್ಟು ಸ್ಥಾನ ಗಳಿಸಿದೆ. ಬಿ.ಜೆ.ಪಿ. ಕುರಿತಾಗಲೀ ನರೇಂದ್ರ ಮೋದಿ ಬಗೆಗಾಗಲೀ ಏನೇ ಅಭಿಪ್ರಾಯಗಳಿದ್ದರೂ ಪ್ರಜಾಸತ್ತೆಯ ವ್ಯವಸ್ಥೆಯಲ್ಲಿ ಜನಾದೇಶಕ್ಕೆ ಮನ್ನಣೆ ಕೊಡಲೇಬೇಕು. ಬಿ.ಜೆ.ಪಿ.ಗೆ ದೊರೆತ ಈ ವಿಜಯದ ಹಿನ್ನೆಲೆ ಏನೇ ಇರಲಿ ಜನಾಭಿಪ್ರಾಯವನ್ನು ಗೌರವಿಸಬೇಕು. ಈ ಆಶಯಗಳೊಂದಿಗೇ, ಪಕ್ಷ ಯಾವುದೇ ಇರಲಿ ಹೊಸ ಸರಕಾರದ ಕುರಿತು ಜನರ ನಿರೀಕ್ಷೆಗಳನ್ನು ಅರಿಯುವುದು ಮುಖ್ಯ. ನರೇಂದ್ರ ಮೋದಿಯವರಾಗಲೀ ಅವರ ಪಕ್ಷವಾಗಲೀ ಚುನಾವಣಾ ಪೂರ್ವದಲ್ಲಿ ಏನೇ ಹೇಳಿದ್ದರೂ ಅವು ಒಂದು ಪಕ್ಷದ ಅಭಿಪ್ರಾಯಗಳು. ಆದರೆ ಒಂದು ಆಡಳಿತ ಪಕ್ಷವಾದ ಮೇಲೆ, ಅಧಿಕಾರದ  ಚುಕ್ಕಾಣಿ ಹಿಡಿದ ಮೇಲೆ ಅವರು ದೇಶದ, ಸಮಗ್ರ ಜನತೆಯ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಬಿ.ಜೆ.ಪಿ. ಶೇಕಡ ೩೧ ಮತ ಪಡೆದು ಅಧಿಕಾರಕ್ಕೆ ಬಂದಿದೆ. ಆದರೆ ಅಧಿಕಾರಕ್ಕೆ ಬಂದ ಮೇಲೆ ದೇಶದ ಸಮಸ್ತ ಜನತೆಯ ಹಿತ ಕಾಪಾಡುವುದು ಪ್ರಧಾನಿಯಾದವರ ಜವಾಬ್ದಾರಿ ಮತ್ತು ಕರ್ತವ್ಯ. ೨೦೦೨ರ ಗುಜರಾತ್ ಗಲಭೆಗಳ ಕಪ್ಪು ಛಾಯೆ ನರೇಂದ್ರ ಮೋದಿಯವರ ಮೇಲಿದೆ. ಆ ಕಾರಣಕ್ಕೇ  ಬಿ.ಜೆ.ಪಿ.ಗೆ ಬೆಂಬಲಿಸಿದವರಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿರುವ ಈ ದೇಶದ ಜನತೆಯಲ್ಲಿ ಒಂದು ಆತಂಕವಿದೆ. ಆ ಆತಂಕವನ್ನು ದೂರ ಮಾಡುವುದು ಹೊಸ ಸರಕಾರದ ನಾಯಕತ್ವದ ಜವಾಬ್ದಾರಿ. ಬಹುಮತದಿಂದ ಆಯ್ಕೆ ಆಗಿದ್ದಕ್ಕೆ ಉತ್ಸಾಹವಿರಲಿ, ಉನ್ಮಾದ ಬೇಡ ಎಂದಷ್ಟೇ ಈ ಸಂದರ್ಭದಲ್ಲಿ ಹೇಳಬಹುದು. ಉನ್ಮಾದ ವಿವೇಕವನ್ನು ಮರೆಮಾಚುತ್ತದೆ. ಆಡಳಿತಕ್ಕೆ ದೇಶದ ಸೌಹಾರ್ದ ಬದುಕು, ಒಕ್ಕೂಟ ವ್ಯವಸ್ಥೆಯ ರಕ್ಷಣೆ ಮುಖ್ಯವಾಗಬೇಕು. ಅಭಿವೃದ್ಧಿ ಈ ಎರಡೂ ಅಂಶಗಳನ್ನು ಒಳಗೊಂಡೇ ಆಗಬೇಕು. ಪ್ರಶ್ನಾತೀತವಾದ ಬಹುಮತ ಸರ್ವಾಧಿಕಾರಿ ಮನೋವೃತ್ತಿಯತ್ತ ವಾಲುತ್ತಿರುತ್ತದೆ. ಸ್ಥಿರವಾದ ಸರಕಾರ ಜನಪರವಾಗಿಯೂ ಇರಬೇಕಾಗುತ್ತದೆ. ಇಲ್ಲವಾದರೆ ಸ್ಥಿರತೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತದೆ. ಚುನಾವಣಾ ಪೂರ್ವದಲ್ಲಿ ಪ್ರಧಾನಿ ಅಭ್ಯರ್ಥಿಯಾಗಿದ್ದ ಮೋದಿಯವರು ತಾವು ಅಲ್ಪಸಂಖ್ಯಾತ ವಿರೋಧಿಗಳಲ್ಲ ಎಂದು ಹೇಳಿದ್ದು ಕೇವಲ ಚುನಾವಣಾ ತಂತ್ರವಾಗಬಾರದು. ಅದು ಅವರ ಆಡಳಿತದ ಆಶಯವಾಗಬೇಕು. ಅದಕ್ಕಾಗಿ ಮೋದಿಯವರು ತಮ್ಮ ಪಕ್ಷ ಮತ್ತು ಸಂಘಪರಿವಾರದವರ ಮೇಲೆ ನಿಯಂತ್ರಣ ಸಾಧಿಸಬೇಕು. ಈಗಾಗಲೇ ಅನಾರೋಗ್ಯಕರವಾದ ಹೇಳಿಕೆಗಳು ಸಂಘಪರಿವಾರದ ಮೂಲಗಳಿಂದ ಬರುತ್ತಿವೆ. ಸಾಮಾಜಿಕ ಸೌಹಾರ್ದತೆಗೆ, ಧಕ್ಕೆ ತರುವ ಇಂತಹ ಹೇಳಿಕೆಗಳು ಸಾಮಾಜಿಕ ಸಂಘರ್ಷಕ್ಕೆ ಕಾರಣವಾಗುತ್ತವೆ. ಸಂಘರ್ಷಮಯ ವಾತಾವರಣದಲ್ಲಿ ಯಾವ ಅಭಿವೃದ್ಧಿಯೂ ಸಾಧ್ಯವಾಗದು. ಹೊಸ ಸಂಸತ್‌ಗೆ ಆಯ್ಕೆಯಾದ ಒಟ್ಟು ೫೪೩ ಸಂಸದರಲ್ಲಿ ೧೮೬ ಜನರ ಮೇಲೆ ಗಂಭೀರವಾದ ಕ್ರಿಮಿನಲ್ ಆಪಾದನೆಗಳಿವೆ. ಅವರಲ್ಲಿ ೯೮ ಜನ ಬಿ.ಜೆ.ಪಿ. ಸಂಸದರೇ ಇದ್ದಾರೆ. ಅಪರಾಧಿಗಳಿಗೆ ಅಧಿಕಾರ ದೊರೆತರೆ ಅನಾಹುತಗಳು ಹೆಚ್ಚುತ್ತವೆ. ಅವರನ್ನು ನಿಯಂತ್ರಿಸುವುದು ಆಡಳಿತ ಪಕ್ಷದ ಮೊದಲ ಕರ್ತವ್ಯವಾಗಬೇಕು.

ಬಿ.ಜೆ.ಪಿ.ಗೆ ದೊರೆತ ಈ ಬೆಂಬಲದ ಹಿಂದೆ ಜನತೆಯ ಬದುಕಿಗೆ ಸಂಬಂಧಿಸಿದ ಕೋಟ್ಯಾಂತರ ಜನತೆಯ ನಿರೀಕ್ಷೆಗಳಿವೆ ಎಂಬುದನ್ನು ಈ ಹೊಸ ಸರಕಾರ ಮನಗಾಣಬೇಕು. ಅಭಿವೃದ್ಧಿಯಲ್ಲಿ ಹಿಂದೆ ಬಿದ್ದರೆ ಸುಧಾರಿಸಿಕೊಳ್ಳಬಹುದು. ಆದರೆ ಸೌಹಾರ್ದ ಕದಡಿ ಮನಸ್ಸುಗಳು ಒಡೆದುಹೋದರೆ ಅದನ್ನು ಸುಧಾರಿಸುವುದು ಕಷ್ಟ. ಭಾರತದಂಥ ಬಹುಸಂಸ್ಕೃತಿಯ ದೇಶದಲ್ಲಿ ಏಕತೆಯನ್ನು ಕಾಪಾಡಿಕೊಂಡು, ದೇಶವನ್ನು ಅಭಿವೃದ್ಧಿ ಪಥದಲ್ಲಿ ಮುನ್ನಡೆಸಿಕೊಂಡು ಹೋಗುವುದು ಆಡಳಿತಗಾರರ ಆದ್ಯತೆಯಾಗಬೇಕು. ಯಾವ ಪೂರ್ವಗ್ರಹಗಳಿಲ್ಲದೇ ಇಷ್ಟನ್ನು ಮಾತ್ರ ಹೊಸ ಸರಕಾರದಿಂದ ನಿರೀಕ್ಷಿಸುವುದು ದೇಶದ ಜನತೆಯ ಹಕ್ಕು.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಮರ್ಥ ವಿರೋಧ ಪಕ್ಷದ ಪಾತ್ರ ಮುಖ್ಯ. ಆದರೆ ಕಳೆದ ಹತ್ತು ವರ್ಷಗಳಿಂದ ಆಡಳಿತದ ಚುಕ್ಕಾಣಿ ಹಿಡಿದಿದ್ದ ಕಾಂಗ್ರೆಸ್ ನಾಯಕತ್ವದ ಯು.ಪಿ.ಎ.ಕೂಟ ತನ್ನ ಭ್ರಷ್ಟಾಚಾರ, ಬೆಲೆ ಏರಿಕೆ, ಕಾರ್ಪೊರೇಟ್ ಕಂಪನಿಗಳ ಪರ ನಿಲುವು, ಸಾಮಾನ್ಯ ಜನವಿರೋಧಿ ನೀತಿಗಳಿಂದಾಗಿ ನೆಲಕಚ್ಚಿದೆ. ಕಾಂಗ್ರೆಸ್ ಪಕ್ಷ ಅಧಿಕೃತ ವಿರೋಧ ಪಕ್ಷವಾಗುವ ಅರ್ಹತೆಯನ್ನೂ ಕಳೆದುಕೊಂಡಿದೆ. ಇಂಥ ಸಂದರ್ಭದಲ್ಲಿ ಎಲ್ಲ ಆಡಳಿತೇತರ ಪಕ್ಷಗಳ ಮೇಲೆ ಜನತೆಯ ಹಿತಾಸಕ್ತಿಯನ್ನು ಕಾಯುವ, ಸಂವಿಧಾನದ ಆಶಯಗಳನ್ನು ಕಾಪಾಡುವ ದೊಡ್ಡ ಹೊಣೆಗಾರಿಕೆ ಇದೆ. ಈ ಎಲ್ಲ ಪಕ್ಷಗಳು ಈಗಲಾದರೂ ಒಟ್ಟಾಗಿ ಕಾರ್ಯ ನಿರ್ವಹಿಸುವ ಅನಿವಾರ್ಯತೆ ಇದೆ.

ಚುನಾವಣಾಪೂರ್ವದಲ್ಲಿ ದೆಹಲಿಯಲ್ಲಿ ಸೇರಿದ ಎಡ ಹಾಗೂ ಹನ್ನೊಂದು ಪ್ರಾದೇಶಿಕ ಪಕ್ಷಗಳು ಅಂದು ಮಂಡಿಸಿದ ಕಾರ್ಯಕ್ರಮಾಧಾರಿತ ಪರ್ಯಾಯ ರಾಜಕಾರಣದ ಘೋಷಣೆಯನ್ನು ಮುಂದಕ್ಕೆ ಕೊಂಡೊಯ್ಯುವಲ್ಲಿ ವಿಫಲವಾದವು. ಮುಂಬರುವ ಚುನಾವಣೆಯ ಫಲಿತಾಂಶಗಳು ಅತಂತ್ರ ಸಂಸತ್‌ಗೆ

ಕಾರಣವಾಗುತ್ತವೆ, ಅಂಥ ಸಂದರ್ಭದಲ್ಲಿ ತಾವು ಅದರ ಲಾಭ ಪಡೆಯಬೇಕೆಂಬ ಉದ್ದೇಶದಿಂದ ಪ್ರಾದೇಶಿಕ ಪಕ್ಷಗಳು ಪರ್ಯಾಯ ರಾಜಕೀಯ ವೇದಿಕೆಯನ್ನು ಬಿಟ್ಟು ಏಕಾಂಗಿಯಾಗಿ ಚುನಾವಣೆಗೆ ಹೋದವು. ಪರಿಣಾಮವಾಗಿ ಪರ್ಯಾಯ ವೇದಿಕೆಯ ಬಹುತೇಕ ಪ್ರಾದೇಶಿಕ ಪಕ್ಷಗಳು ತೀವ್ರವಾದ ಹಿನ್ನಡೆಯನ್ನು ಅನುಭವಿಸಿವೆ. ಇದು ಆ ಪಕ್ಷಗಳ ಸಮಯಸಾಧಕತೆಗೆ ಜನತೆ ಕೊಟ್ಟ ತೀರ್ಪು. ಜನಪರ ಚಳುವಳಿಗಳಲ್ಲಿ ಸದಾ ನಿರತರಾಗಿರುವ ಎಡಪಕ್ಷಗಳು ರಾಜಕೀಯ ಹೋರಾಟದಲ್ಲಿ ವಿಫಲವಾಗಿದ್ದನ್ನು ಈ ಚುನಾವಣಾ ಫಲಿತಾಂಶ ಸಾಬೀತುಗೊಳಿಸಿದೆ. ಎಡಪಕ್ಷಗಳು ಆಡಳಿತದಲ್ಲಿದ್ದ ಕೇರಳ ಮತ್ತು ಪಶ್ಚಿಮಬಂಗಾಲದಲ್ಲಿಯೂ ನಿರೀಕ್ಷಿತ ಸ್ಥಾನಗಳನ್ನು ಪಡೆಯದೇ ಇರುವುದು ಗಮನಿಸಬೇಕಾದ ವಿಷಯ. ಇದೇ ಸ್ಥಿತಿ ಮುಂದುವರೆದರೆ ದೇಶದ ಸಂಸತ್‌ನಲ್ಲಿ ಎಡಪಕ್ಷಗಳು ಪ್ರಾತಿನಿಧ್ಯವನ್ನೇ ಕಳೆದುಕೊಳ್ಳುವ ಕಾಲ ದೂರವಿಲ್ಲ. ಮುಂಬರುವ ದಿನಗಳಲ್ಲಾದರೂ ಸಂಸತ್‌ನ ಒಳಗೆ ಹೊರಗೆ ಹೋರಾಟಗಳ ಮೂಲಕ ಬಲವಾಗಿ ಬೆಳೆದು ಜನತೆಯ ಹಿತಾಸಕ್ತಿ ಕಾಪಾಡುವಲ್ಲಿ ಎಡಪಕ್ಷಗಳು ಯಶಸ್ವಿಯಾಗಲೆಂದು ಆಶಿಸಬಹುದು.

ದೇಶದ ಜನತೆ ಭರವಸೆ, ನಿರೀಕ್ಷೆಗಳೊಂದಿಗೆ ಹೊಸ ಸರಕಾರವನ್ನು ಆಯ್ಕೆ ಮಾಡಿದ್ದಾರೆ. ಸಂಸತ್‌ಗೆ ಆಯ್ಕೆಯಾದ ಎಲ್ಲ ಪಕ್ಷಗಳ ಸಂಸದರು ದೇಶದ ಅಭಿವೃದ್ಧಿ, ಸಮೃದ್ಧಿಗಾಗಿ ಶ್ರಮಿಸಲಿ, ಸಂವಿಧಾನದ, ಸಂಸತ್‌ನ ಘನತೆಯನ್ನು ಎತ್ತಿ ಹಿಡಿಯಲಿ ಎಂದು ಅವರೆಲ್ಲರಿಗೂ ಶುಭ ಹಾರೈಸೋಣ.

ಸಿದ್ದನಗೌಡ ಪಾಟೀಲ

## ಉರಿ ಬೇಸಿಗೆಯಲ್ಲಿ ದರ ಏರಿಕೆಯ ಬಿಸಿ

ಚುನಾವಣೆಗಳು ಮುಗಿಯುತ್ತಿದ್ದ ಹಾಗೆಯೇ ಸರಕಾರ ಚುರುಕುಗೊಳ್ಳುತ್ತದೆ. ಚುನಾವಣಾ ಸಂಹಿತೆಯ ನಿರ್ಬಂಧ ಒಂದುಕಡೆಯಾದರೆ, ಮತದಾರರನ್ನು ಎದುರುಹಾಕಿಕೊಳ್ಳದೆ ಇರುವುದು ಇನ್ನೊಂದು ಕಡೆ. ಮತದಾರ ಮತ ಚಲಾಯಿಸಿದ ಮೇಲೆ ಸರಕಾರ ಒಂದೊಂದಾಗಿ ಜನರ ಮೇಲೆ ಹೊರೆ ಹೊರಿಸಲು ಪ್ರಾರಂಭಿಸುತ್ತದೆ. ಇದೊಂದು ಬಗೆಯ ಪರಂಪರೆಯಾಗಿಯೇ ಬಂದಿದೆ. ಕೇಂದ್ರ ಸರಕಾರವಾಗಲಿ, ರಾಜ್ಯ ಸರಕಾರವಾಗಲಿ ಇದಕ್ಕೆ ಹೊರತಾಗಿಲ್ಲ. ಅಧಿಕಾರದ ಗದ್ದುಗೆ ಏರಿ ಒಂದು ವರ್ಷ ಮುಗಿಯುತ್ತಿದ್ದ ಹಾಗೆ ಕಾಂಗ್ರೆಸ್‌ನ ಸಿದ್ದರಾಮಯ್ಯ ಸರಕಾರ ರಾಜ್ಯದ ಜನರಿಗೆ ದರ ಏರಿಕೆಯ ಬಿಸಿ ಮುಟ್ಟಿಸಿದೆ. ಪಾರ್ಲಿಮೆಂಟ್ ಚುನಾವಣೆಗಳು ಸಮೀಪಿಸುತ್ತಿದ್ದುದರಿಂದ ತೆಪ್ಪಗಿದ್ದ ರಾಜ್ಯ ಸರಕಾರ ಅದು ಮುಗಿಯುತ್ತಿದ್ದಂತೆಯೇ ಬಸ್ ಪ್ರಯಾಣ ದರ ಹೆಚ್ಚಿಸಿ ಸಾರ್ವಜನಿಕರಿಗೆ ಆಘಾತ ನೀಡಿತು. ಇದರ ಮೇಲೆ ವಿದ್ಯುತ್ ದರ ಏರಿಸಿ ಷಾಕ್ ನೀಡಿತು. ಇನ್ನು ಕುಡಿಯುವ ನೀರು ಹೆಚ್ಚಳ ದೂರವಿಲ್ಲ. ಬೇಸಿಗೆಯಾದ್ದರಿಂದ ನೀರಿನ ಸರಬರಾಜಿನ ವ್ಯವಸ್ಥೆ ಏರುಪೇರಾಗಿರುವುದರಿಂದ ಸದ್ಯಕ್ಕೆ ದರ ಏರಿಕೆ ಮುಂದೂಡಲಾಗಿದೆ.

ಸರಕಾರ ಹಾಗೂ ಸಂಬಂಧಪಟ್ಟ ಇಲಾಖೆ ಹಾಗೂ ಸಂಸ್ಥೆಗಳ ನಿರ್ವಾಹಕರ ಪ್ರಕಾರ ಅಪಾರವಾದ ನಷ್ಟ ಸಂಭವಿಸುತ್ತಿರುವುದರಿಂದ ಅದನ್ನು ಸರಿದೂಗಿಸಲು ದರ ಏರಿಕೆ ಅನಿವಾರ್ಯ ಎಂದು ಸಮರ್ಥಿಸಿಕೊಳ್ಳಲು ಒಂದಷ್ಟು ಅಂಕಿ-ಅಂಶಗಳನ್ನು ಒದರುತ್ತಾರೆ. ಅಲ್ಲಿಗೆ ಎಲ್ಲ ಮುಗಿದ ಹಾಗೆ. ಹೊರೆ ಮಾತ್ರ ಜನಸಾಮಾನ್ಯರ ಮೇಲೆ. ರಾಜ್ಯದ ರಾಜಧಾನಿ ಬೆಂಗಳೂರು ನಗರದ ಬಸ್ ಪ್ರಯಾಣಿಕರಿಗೆ ಬರೆ ಹಾಕಿದ ಮೇಲೆ ರಾಜ್ಯದ ಸಾರಿಗೆ ವ್ಯವಸ್ಥೆಯ ಸರದಿ. ಐಷಾರಾಮಿ ಬಸ್‌ಗಳ ದರ ಹೆಚ್ಚಿಸಿಲ್ಲ ನಿಜ. ಆದರೆ ಅವುಗಳಲ್ಲಿ ಪ್ರಯಾಣ ಮಾಡುವವರು ಖಂಡಿತ ಶ್ರೀಸಾಮಾನ್ಯರಲ್ಲ. ಇಲ್ಲೂ ತಾರತಮ್ಯದ ಧೋರಣೆ. ಶೇಕಡಾವಾರು ಲೆಕ್ಕದಲ್ಲಿ ದರ ಹೆಚ್ಚಳ ಶೇ. ಲೆಕ್ಕೂ ಕಡಿಮೆ. ಆದರೆ ನಿಜ ದರದಲ್ಲಿ ಪ್ರಯಾಣಿಕರ ಮೇಲೆ ಬೀಳುವ ಹೊರೆ ೧೦ ರೂ.ನಿಂದ ೩೦ ರೂ.ವರೆಗೆ. ಬೆಂಗಳೂರಿನಿಂದ ಮೈಸೂರಿಗೆ ಹೋಗುವ ಪ್ರಯಾಣಿಕರು ೧೨ ರೂ. ತೆತ್ತರೆ ದೂರದ ಮಂಗಳೂರು, ಹುಬ್ಬಳ್ಳಿ, ಬೆಳಗಾವಿಗೆ ಹೋಗುವವರು ೩೦ ರೂ.ನಿಂದ ೩೫ ರೂ.ವರೆಗೆ ತೆರಬೇಕಾಗಿದೆ. ನಷ್ಟ ಭರಿಸಲು ಸೋರಿಕೆ ತಡೆಯಲಾಗಲಿ, ಡೆಡ್‌ಮೈಲೇಜ್ ಕಡಿಮೆ ಮಾಡುವುದಾಗಲಿ, ಖಾಲಿ ಓಡಾಡುವ ಐಷಾರಾಮಿ ಬಸ್‌ಗಳನ್ನು ಸ್ಥಗಿತಗೊಳಿಸಲಾಗಲಿ ಕ್ರಮ ಕೈಗೊಳ್ಳದೆ ಸುಲಭವಾಗಿ ಪ್ರಯಾಣಿಕರ ಮೇಲೆ ಹೆಚ್ಚಿನ ದರ ಹೊರಿಸುವುದು ಜಾಯಮಾನವಾಗಿ ಬಿಟ್ಟಿದೆ. ದರ ಏರಿಕೆಯ ವಿರುದ್ಧ ಪ್ರತಿಭಟನೆಗಳು ನಡೆದರೂ ಈಗ ತಣ್ಣಗಾಗಿವೆ. ಅದರಿಂದಾಗಿಯೇ ಏನೋ ಸರಕಾರವೂ ಕೂಡ ನಿರುಮ್ಮಳವಾಗಿದೆ.

ಇದರ ಬೆನ್ನಲ್ಲೇ ಬಂದದ್ದು ವಿದ್ಯುತ್ ದರ ಏರಿಕೆ. 'ರಾಜ್ಯದ ಬೇಡಿಕೆಗೆ ಅನುಗುಣವಾಗಿ ವಿದ್ಯುತ್ ಪೂರೈಕೆ ಮಾಡಬೇಕಾದರೆ ಹಾಗೂ ವಿದ್ಯುತ್ ವಿತರಣಾ ಕಂಪೆನಿ (ಎಸ್ಕಾಂ) ಉಳಿಯಬೇಕಾದರೆ ವಿದ್ಯುತ್ ದರ ಏರಿಕೆ ಅನಿವಾರ್ಯ' ಎನ್ನುವುದು ಮುಖ್ಯಮಂತ್ರಿ ಸಿದ್ದರಾಮಯ್ಯ ಸಮರ್ಥನೆ. ತಮ್ಮ ಸರಕಾರದ ಒಂದು ವರ್ಷದ ಅವಧಿ ಮುಗಿದ ದಿನ ಅವರು ನೀಡಿದ ಹೇಳಿಕೆ ಇದು. ಇದು ಅವರ ಸಾಧನೆಗಳಲ್ಲಿ ಒಂದೇನೋ! ಚುನಾವಣೆಗೆ ಮುಂಚೆ ಮಾಡಿದ್ದರೆ ಇನ್ನಷ್ಟು ಸೀಟು ಕಳೆದುಕೊಳ್ಳುತ್ತಿದ್ದುದು ಗ್ಯಾರಂಟಿ. ನಗರ ಪ್ರದೇಶಗಳಲ್ಲಿ ಪ್ರತಿ ಯೂನಿಟ್ ಬಳಕೆಗೆ ೨೦ರಿಂದ ೫೦ ಪೈಸೆವರೆಗೆ ಹೆಚ್ಚಿಸಲಾಗಿದೆ. ಪ್ರತಿವರ್ಷವೂ ಸರಕಾರ ಒಂದಲ್ಲ ಒಂದು ನೆಪ ಹೇಳಿ ವಿದ್ಯುತ್ ದರವನ್ನು ಹೆಚ್ಚಿಸುತ್ತಲೇ ಇದೆ. ಈಗ ಹೆಚ್ಚಿಸಿರುವ ದರ



ತಿಂಗಳ ಪತ್ರಿಕೆ
ಹೊಸತು
ನವಕರ್ನಾಟಕ ಪ್ರಕಾಶನ

**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಎಚ್. ಎಸ್. ಗೋಪಾಲ ರಾವ್
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಜಿ. ನಾಗಕುಮಾರ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮುರಳೀಧರ್
ವಿಜಯಾ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ ೦೮೨೪-೨೪೪೧೧೦೯

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ ೦೮೨೧-೨೪೨೪೯೮೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ ೦೮೪೭೨-೨೨೪೩೦೨

ಮೇ ೧ರಿಂದಲೇ ಜಾರಿಗೆ ಬರುತ್ತಿದೆ. ೨೦೦೮ರಿಂದ ನಮ್ಮ ರಾಜ್ಯದಲ್ಲಿ ಏಕಪ್ರಕಾರವಾಗಿ ವಿದ್ಯುತ್‌ದರ ಏರುತ್ತಲೇ ಬಂದಿದೆ. ಅದು ಸರಾಸರಿ ೩೦ ಪೈಸೆಯಲ್ಲಿ ಆಸುಪಾಸಿನಲ್ಲಿ ಪ್ರತಿಯೂನಿಟ್‌ಗೆ ಹೆಚ್ಚುತ್ತಲೇ ಇದೆ. ಲೆಕ್ಕ ಹಾಕಿದರೆ ಈವರೆಗೆ ಆಗಿರುವ ಏರಿಕೆ ಒಟ್ಟು ಒಂದು ಯೂನಿಟ್‌ಗೆ ೧೬೦ ಪೈಸೆ ಆಗುತ್ತದೆ. ವಿದ್ಯುತ್ ಬಿಲ್ ಬಂದಾಗಲೇ ಹೊರೆ ಎಷ್ಟು ಎಂದು ಗೊತ್ತಾಗುವುದು. ವಿದ್ಯುತ್ ಬಳಕೆ ಹೆಚ್ಚಾದಂತೆ ಗ್ರಾಹಕರು ಅಧಿಕ ಹಣ ಪಾವತಿಸಬೇಕಾಗುತ್ತದೆ. ಇದರ ಮೇಲೆ ವಿದ್ಯುತ್ ವಿತರಣಾ ಸಂಸ್ಥೆಗಳು ಒದಗಿಸುತ್ತಿರುವ ವಿದ್ಯುಚ್ಛಕ್ತಿಯ ಗುಣಮಟ್ಟ ಕೂಡ ಕಳಪೆ. ರಾಜಧಾನಿ ಬೆಂಗಳೂರಿನಲ್ಲಿರುವವರಿಗೆ ಲೋಡ್ ಷೆಡ್ಡಿಂಗ್ ತಾಪತ್ರಯ ಇಲ್ಲ. ಹೋದರೂ ಒಂದು ಗಂಟೆ ಮೀರುವುದಿಲ್ಲ. ಆದರೆ ಜಿಲ್ಲೆಗಳಲ್ಲಿ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ದಿನದಲ್ಲಿ ವಿದ್ಯುತ್ ಸರಬರಾಜು ಇರುವುದು ಕೆಲವೇ ಗಂಟೆಗಳು ಮಾತ್ರ. ಶ್ರೀಮಂತರು ಹೇಗೋ ನಿಭಾಯಿಸುತ್ತಾರೆ ಡೀಸೆಲ್ ಇಂಜಿನ್‌ಗಳು, ಯುಪಿಎಸ್ ನೆರವಿನಿಂದ. ಆದರೆ ಬಡಜನರ ಪಾಡು ಕೇಳುವವರು ಯಾರು ? ಸರಕಾರ ಮಾತ್ರ ಭಾಗ್ಯಜ್ಯೋತಿ, ಅದು ಇದು ಎಂದು ಬಡಾಯಿ ಕೊಚ್ಚಿಕೊಳ್ಳುತ್ತದೆ. ದೀಪ ಮಾತ್ರ ಬೆಳಗುವುದಿಲ್ಲ. ಎಲ್ಲ ಕತ್ತಲೆ.

ಇದರ ಮೇಲೆ ಬೆಂಗಳೂರು ಕೆಂಪೇಗೌಡ ವಿಮಾನ ನಿಲ್ದಾಣಕ್ಕೆ ಹೋಗುವವರಿಗೆ ಏಕಾಏಕಿ ಹೆದ್ದಾರಿ ಬಳಕೆ ಶುಲ್ಕದ ದುಬಾರಿ ಏರಿಕೆ. ಮೇ ೩ನೇ ತಾರೀಖಿನ ಮಧ್ಯರಾತ್ರಿಯಿಂದಲೇ ಜಾರಿಗೆ ಬಂದ ಈ ದರ ಏರಿಕೆ ೪೫ ರೂ.ಗಳಿಂದ ರೂ. ೨೩೫ರಷ್ಟು ಹೆಚ್ಚಾಗಿದೆ. ಕಾರು, ಜೀಪಿನಲ್ಲಿ ಪ್ರಯಾಣಿಸುವವರು ಪ್ರತಿಸಲ ೧೧೫ ರೂ. ಪಾವತಿಸಿದರೆ, ಮಿನಿಬಸ್‌ಗಳು ರೂ. ೧೭೫, ಬಸ್ಸು ಮತ್ತು ಟ್ರಕ್ಕುಗಳು ೩೫೫ ರೂ. ಕೊಡಬೇಕು. ಈ ಮಾರ್ಗದಲ್ಲಿ ಇನ್ನೂ ಸರ್ವಿಸ್ ರಸ್ತೆ ಸಿದ್ಧವಾಗಿಲ್ಲದಿರುವುದರಿಂದ ದಿನಂಪ್ರತಿ ರಸ್ತೆ ಉಪಯೋಗಿಸುವ ವಾಹನ ಚಾಲಕರಿಗೆ ದೊಡ್ಡ ಹೊರೆಯಾಗಿದೆ. ಮೊದಲೆರಡು ದಿನ ಉಗ್ರವಾದ ಪ್ರತಿಭಟನೆ ಇತ್ತು, ಟ್ಯಾಕ್ಸಿ ಡ್ರೈವರ್‌ಗಳು ಮತ್ತು ಮಾಲೀಕರುಗಳಿಂದ. ಇತರ ಎಲ್ಲ ಪ್ರತಿಭಟನೆಯಂತೆಯೇ ಇದೂ ಕೂಡ ತಣ್ಣಗಾಯಿತು. ಟ್ಯಾಕ್ಸಿ ಮಾಲೀಕರು ಯಾವ ಮುಲಾಜೂ ಇಲ್ಲದೆ ಈಗ ಶುಲ್ಕವನ್ನು ಪ್ರಯಾಣಿಕರಿಗೆ ವರ್ಗಾಯಿಸಿ ತೆಪ್ಪಗಾಗಿದ್ದಾರೆ. ಪ್ರಯಾಣಿಕರ ಗೋಳು ಕೇಳುವವರು ಯಾರು? ಇದು ಕೇಂದ್ರ ಸರಕಾರ ವಿಧಿಸಿರುವ ಹೊರೆ, ನಾವೇನೂ ಮಾಡುವ ಹಾಗಿಲ್ಲ ಎಂದು ರಾಜ್ಯ ಸರಕಾರ ಕೈಕಟ್ಟಿ ಕುಳಿತಿದೆ. ಈ ಅವಾಂತರದ ಮಧ್ಯೆ ವಿಮಾನ ನಿಲ್ದಾಣದ ಬಳಕೆಯ ಸೆಸ್‌ಕೂಡ ಹೆಚ್ಚಿಸಲಾಗಿದೆ. ಇವೆಲ್ಲ ವಿಮಾನ ನಿಲ್ದಾಣದ ಅಭಿವೃದ್ಧಿಯ ಹೆಸರಿನಲ್ಲಿ ಮಾಡಿರುವಂಥದ್ದು. ಅಂತೂ ಈಗ ವಿಮಾನ ಪ್ರಯಾಣ ಇನ್ನಷ್ಟು ದುಬಾರಿ. ಪೆಟ್ರೋಲ್, ಡೀಸೆಲ್ ದರಗಳ ಬಗ್ಗೆ ಏನೂ ಹೇಳದಿರುವುದೇ ಮೇಲು. ಅದು ಯಾವಾಗಲೂ ಇದ್ದದ್ದೇ. ಬರಬರುತ್ತ ಆಟೋ ಕೂಡ ಗಗನ ಕುಸುಮ.

ಇವೆಲ್ಲ ಒಂದು ರೀತಿಯದಾದರೆ ಈಚೆಗೆ ನಿತ್ಯೋಪಯೋಗಿ ವಸ್ತುಗಳ ಬೆಲೆಗಳು ಲಂಗುಲಗಾಮಿಲ್ಲದೆ ಏರುತ್ತಿವೆ. ಇದಕ್ಕೆ ಉದಾಹರಣೆ ತರಕಾರಿ ಬೆಲೆಗಳಲ್ಲಿ ಆಗಿರುವ ಹೆಚ್ಚಳ. ಬಡಜನರು ಹಣ್ಣು ತರಕಾರಿ ಕೊಳ್ಳುವುದೇ ದುಸ್ತರವಾಗುತ್ತಿದೆ. ಈ ಬೆಲೆ ಏರಿಕೆಯ ಬಿಸಿ ತಿಂಗಳ ಸಂಬಳ ಪಡೆಯುವ ಮಧ್ಯಮ ವರ್ಗದವರಿಗೆ ಬಲವಾಗಿ ತಟ್ಟುತ್ತಿದೆ. ಹತ್ತು ರೂಪಾಯಿಗೆ ಸೊಪ್ಪು ಸೂಡೆ ಕೂಡ ಲಭಿಸದ ದುಃಸ್ಥಿತಿ ಬರುತ್ತಿದೆ. ಕೇಂದ್ರದಲ್ಲಿ ಹೊಸ ಸರಕಾರ ಅಧಿಕಾರ ವಹಿಸಿಕೊಂಡ ಮೇಲೆ ಈ ಬೆಲೆ ಏರಿಕೆಗೆ ಕಡಿವಾಣ ಹಾಕುವುದೇ? ಕಾದು ನೋಡೋಣ. ಹಿಂದುತ್ವವೋ? ಮುಂದುತ್ವವೋ?

*[signature]*

---

***ಈ ತಿಂಗಳು (೩ನೇ ಪುಟದಿಂದ)***

ನೀಡುತ್ತಾರೆಂದು ತಿಳಿದಂತಾಯಿತು, ಅಷ್ಟೆ.

ನಮ್ಮ ರಾಜ್ಯದ ಉಚ್ಚ ನ್ಯಾಯಾಲಯವು "ಶಾಲೆಯಲ್ಲಿ ಮಕ್ಕಳು ಯಾವ ಮಾಧ್ಯಮದಲ್ಲಿ ಶಿಕ್ಷಣ ಪಡೆಯಬೇಕೆಂಬುದನ್ನು ಅವರ ಪೋಷಕರು ತೀರ್ಮಾನಿಸುತ್ತಾರೆ" ಎಂದು ಉಚ್ಚರಿಸಿತ್ತು. ಅದನ್ನು ಹಸನುಗೊಳಿಸುವ ಬದಲು ದೆಹಲಿ ಸರ್ವೋಚ್ಚ ನ್ಯಾಯಾಲಯವು ಇನ್ನಷ್ಟು ಕಸ ಸುರಿದಿದೆ. ಈಗಿನ ತೀರ್ಪಿನ ಸಾರ ಇದು: (ಅ) ಶಾಲೆಗೆ ಸೇರುವ ಮಗುವಿನ ಮಾತೃಭಾಷೆ ಯಾವುದೆಂದರೆ, ಪೋಷಕರು ಯಾವುದೆಂದು ಹೇಳುತ್ತಾರೋ ಅದು; (ಆ) ಮಗುವಿಗೆ ಯಾವ ಭಾಷಾ ಮಾಧ್ಯಮದಲ್ಲಿ ಶಿಕ್ಷಣ ದೊರಕಬೇಕೆಂಬುದನ್ನು ತೀರ್ಮಾನಿಸುವುದು ಪೋಷಕರ ಮೂಲಭೂತ ಹಕ್ಕು, ಅದರಲ್ಲಿ ಸರ್ಕಾರವು ಮೂಗು ತೂರಿಸುವಂತಿಲ್ಲ; (ಇ) ಆಂಗ್ಲಭಾಷಾ ಮಾಧ್ಯಮದ ಪ್ರಾಥಮಿಕ ಶಾಲೆಗಳಲ್ಲಿ ಮಾಧ್ಯಮವನ್ನು ಬದಲಾಯಿಸಬೇಕೆಂದು ಸರ್ಕಾರವು ನಿರ್ದೇಶಿಸುವಂತಿಲ್ಲ.

ಇವಲ್ಲದೆ ಬೇರೆಯೂ ಕೆಲವು ಅಂಶಗಳು ತೀರ್ಪಿನಲ್ಲಿವೆ, ಆದರೆ ಅವನ್ನು ಇಲ್ಲಿ ಪ್ರಸ್ತಾಪಿಸಲಾಗುತ್ತಿಲ್ಲ. ನೋಡಿ, ಹೇಗಿದೆ ಚಮತ್ಕಾರ: ಶಾಲೆಗೆ ನನ್ನ ಮಗುವನ್ನು ಕರೆದುಕೊಂಡು ಹೋಗಿ 'ಇದರ ಮಾತೃಭಾಷೆ ಫ್ರೆಂಚ್' ಎಂದು ಹೇಳಿ ಅದಕ್ಕೆ ಫ್ರೆಂಚ್ ಮಾಧ್ಯಮದಲ್ಲಿ ಶಿಕ್ಷಣ ಕೊಡಿಸುವುದು ನನ್ನ ಮೂಲಭೂತ ಹಕ್ಕು. ಶಾಲೆಯವರು ನನ್ನನ್ನು ತರಾಟೆಗೆ ತೆಗೆದುಕೊಳ್ಳುವಂತಿಲ್ಲ: "ಅಯ್ಯಾ ಪೋಷಕ, ನಿನಗೇ ಫ್ರೆಂಚ್ ಬಾರದು; ನಿನ್ನ ಮಗು ಹೇಗೆ ಅದನ್ನು ಮಾತೃಭಾಷೆಯನ್ನಾಗಿ ಹೊಂದಿತು ? ನಿನ್ನ ಮೂಲಭೂತ ಹಕ್ಕನ್ನು ಸಮರ್ಥಿಸಿಕೊಳ್ಳುತ್ತಾ ನಿನ್ನ ಮಗುವಿನ ಮೂಲಭೂತ ಹಕ್ಕನ್ನು ಹಾಳುಗೆಡಹುವೆಯಲ್ಲಾ, ಅದನ್ನು ಹೇಗೆ ಸಮರ್ಥಿಸಿ ಕೊಳ್ಳುತ್ತೀಯೆ?" ಅದಕ್ಕೆ ನನ್ನ ಉತ್ತರ : "ಅದೆಲ್ಲಾ ನಿಮಗೇಕೆ ? ಸರ್ವೋಚ್ಚ ನ್ಯಾಯಾಲಯ ಹೇಳಿದೆ, ಅದರಂತೆ ನನ್ನ ಮಗುವಿನ ಮಾತೃಭಾಷೆ ಯಾವುದೆಂದು ನಾನು ಘೋಷಿಸುತ್ತಿದ್ದೇನೆ. ಅದನ್ನು ಒಪ್ಪಿಕೊಂಡು ತೆಪ್ಪಗಾಗಿ."

ತಮಾಷೆ ಎನಿಸುತ್ತದೆಯೆ ? ನಮ್ಮ ಸಂವಿಧಾನದಲ್ಲಿ ಡಾ|| ಅಂಬೇಡ್ಕರ್ ನೇತೃತ್ವದ ಕರಡು ತಯಾರಿಸುವ ಮಂಡಲಿಯು ಅದನ್ನು ಹಾಗೆ ಬರೆದಿಟ್ಟಿದೆಯೆ ? ಶೈಕ್ಷಣಿಕ ಮನೋವಿಜ್ಞಾನವು ಮಗುವಿನ ಉತ್ತಮ ಕಲಿಕೆಯ ಸಾಧನವನ್ನಾಗಿ ಯಾವ ಕ್ರಮವನ್ನು ಸೂಚಿಸುತ್ತದೆಯೋ ಅದರಂತೆ ಕಲಿಯುವ ಮೂಲಭೂತ ಹಕ್ಕು ಮಗುವಿಗೆ ಇಲ್ಲವೆ ? 'ಆಕಾಶವು ಏಕೆ ನೀಲಿಯಾಗಿದೆ ?' ಎಂಬುದನ್ನು ಮಗುವಿಗೆ ಅದರ ಮೂರನೆಯ ವಯಸ್ಸಿನಲ್ಲೇ ತಿಳಿಸಿ ಅದರ ಕುತೂಹಲವನ್ನು ಕೆರಳಿಸುವುದು ಕಲಿಕೆಯ ಒಂದು ಭಾಗ ಎಂಬುದನ್ನು ಅಲ್ಲಗಳೆಯುವುದು ಮೂರ್ಖತನ. ಮೂರ್ಖತನವು ಪೋಷಕರ ಮೂಲಭೂತ ಹಕ್ಕು ಆಗಬೇಕಾಗಿಲ್ಲ, ಆಗಕೂಡದು. "ಸುಮ್ಮನಿರು ಮಗು, ನೀನು ಇಂಗ್ಲಿಷ್ ಕಲಿತನಂತರ ನಿನಗೆ ಆಕಾಶ ಏಕೆ ನೀಲಿಯಾಗಿ ಕಾಣುತ್ತದೆಂಬುದನ್ನು ನಿನ್ನ ಶಾಲೆಯು ಇಂಗ್ಲಿಷ್ ಮಾಧ್ಯಮದಲ್ಲಿ ತಿಳಿಸಿಕೊಡುತ್ತದೆ" ಎಂದು ಮಗುವಿಗೆ ಹೇಳುವುದು ಒಂದು ಮಹಾನ್ ಅಪರಾಧ, ಮಗುವಿನ ಧೀಶಕ್ತಿಯನ್ನು ಕೊಲ್ಲುವ ವಿಧಾನ. ಕಲಿಕೆಗೆ ಆರಂಭದಲ್ಲೇ ಪರಭಾಷೆಯ ಕೋಟೆಯನ್ನು ಕಟ್ಟಿ, ಆಮೇಲೆ 'ನಮ್ಮ ಮಗು ನೊಬೆಲ್ ಪ್ರಶಸ್ತಿ ಪಡೆಯುವ ಸಾಮರ್ಥ್ಯ ಗಳಿಸಿಕೊಂಡಿದೆ' ಎಂದು ಬೀಗುವ ಪೋಷಕರಿಗೆ ನ್ಯಾಯಾಲಯವು ಸೂಕ್ತ ತಿಳಿವಳಿಕೆ ನೀಡಬೇಕಾಗಿತ್ತು. ಮೂಲಭೂತ ಹಕ್ಕಿನ ಹೆಸರಿನಲ್ಲಿ ಮಗುವಿನ ಕಲಿಕೆಯ ಸಾಧ್ಯತೆಗಳನ್ನು ನ್ಯಾಯಾಲಯವು ಚಿವುಟಿಹಾಕಿದೆ. ಸರಕಾರವಾಗಲಿ, ನ್ಯಾಯಾಲಯವಾಗಲಿ, ಮೂಲಭೂತ ಹಕ್ಕಿನ ವ್ಯಾಖ್ಯಾನವನ್ನು ನೀಡುವಾಗ ಕಲಿಕೆಯ ಬಗೆಗೆ ಶೈಕ್ಷಣಿಕ ಪ್ರಾಯೋಗಿಕ ಅನುಭವ ಏನು ಹೇಳುತ್ತದೆ ಎಂಬುದನ್ನು ಉಪೇಕ್ಷಿಸಕೂಡದು. ಅದು ಮಗುವಿಗೆ ನಾವು ಮಾಡಬಹುದಾದ ಅನ್ಯಾಯ, ದೇಶದ ಬೌದ್ಧಿಕ ಬೆಳವಣಿಗೆಗೆ ನಾವು ನೀಡುವ ಕೊಡಲಿಪೆಟ್ಟು.

ಹಾಗಿದ್ದರೆ ಇದು ಪಕ್ಷಪಾತವಾಗುವುದಿಲ್ಲವೆ ? "ಕೆಲವು ಮಕ್ಕಳು ಆಂಗ್ಲ ಮಾಧ್ಯಮದ ಮೂಲಕ ಕಲಿತು ಉದ್ಯೋಗ ಪಡೆಯುತ್ತಾರೆ, ಉನ್ನತ ಅಧಿಕಾರ ಸ್ಥಾನಗಳಿಗೆ ಏರುತ್ತಾರೆ, ವಿದೇಶಗಳಿಗೆ ಹೋಗಿ ಶೋಭಿಸುತ್ತಾರೆ; ನಮ್ಮ ಮಕ್ಕಳು ಮಾತ್ರ ಆ ಮಾಧ್ಯಮವನ್ನು ತೊರೆದು ಸದಾಕಾಲ ಹಿಂದುಳಿದೇ ಇರಬೇಕೆ ?" ಈ ಪ್ರಶ್ನೆ ಅಸಹಜವಾದುದಲ್ಲ. ಈ ಪ್ರಶ್ನೆಗೆ ಸಂವಾದಿಯಾದ ಒಂದು ಸನ್ನಿವೇಶವನ್ನು ಊಹಿಸಿಕೊಳ್ಳಿ: ಅಂಗನವಾಡಿಯಲ್ಲಿ ಉದ್ಯೋಗ ಪಡೆದ ಒಬ್ಬಾಕೆ ಒಂದು ಸಂಘಟನೆಗೆ ಸೇರಿಕೊಳ್ಳುತ್ತಾಳೆ,

ಯಾವುದೋ ಅನಿವಾರ್ಯವಾದ ಸಂದರ್ಭದಲ್ಲಿ ಮುಷ್ಕರ ಹೂಡುತ್ತಾಳೆ. ಆಗ ನಮ್ಮ ಘನವಾದ ಜನತಾ ನ್ಯಾಯಾಲಯ ಹೇಳುತ್ತದೆ, "ಅದು ಕೂಡದು, ಮುಷ್ಕರ ಹೂಡಬಾರದು. ಜಪಾನಿನಲ್ಲಿ ಯಾರೂ ಹಾಗೆ ಮುಷ್ಕರ ಹೂಡುವುದಿಲ್ಲ, ಗೊತ್ತೆ? ಅದರಿಂದಲೇ ಜಪಾನ್ ಅಭಿವೃದ್ಧಿ ಸಾಧಿಸಿದೆ" ಎಂದು. ಅಂಗನವಾಡಿ ಕಾರ್ಯಕರ್ತೆಯು ಗಟ್ಟಿಯಾಗಿ ನಕ್ಕು ಹೇಳುತ್ತಾಳೆ: "ಆಯಿತು ಸ್ವಾಮಿ, ಜಪಾನಿನವರಿಗೂ ಹೇಳಿಬಿಡಿ, ನಾಳೆಯಿಂದ ಅನಿವಾರ್ಯವಾದಾಗ ಮುಷ್ಕರ ಹೂಡಿ, ಎಂದು. ನಿಮ್ಮ ಜಪಾನಿನಲ್ಲಿ ಎಲ್ಲ ಮಕ್ಕಳೂ ಜಪಾನಿ ಭಾಷೆಯಲ್ಲಿ ಕಲಿಯುತ್ತಾರಂತೆ, ಹೌದೆ? ನಮ್ಮಲ್ಲೇಕೆ ಅದನ್ನು ನೀವು ಅನುಸರಿಸುವುದಿಲ್ಲ ಹೇಳಿ."

೧೯೬೪ರಷ್ಟು ಹಿಂದೆಯೇ ಕೊಠಾರಿ ಶಿಕ್ಷಣ ಆಯೋಗವು ಹೇಳಿತ್ತು, "ಎಲ್ಲ ಶಾಲೆಗಳಲ್ಲೂ ಎಲ್ಲರಿಗೂ ಸಮಾನ ಶಿಕ್ಷಣ ನೀಡಬೇಕು; ಮಕ್ಕಳನ್ನು ಅವರ ವಾಸಸ್ಥಳಕ್ಕೆ ಅತಿ ಹತ್ತಿರದಲ್ಲಿರುವ ಶಾಲೆಗೆ ಸೇರಿಸಬೇಕು," ಎಂದು. ಹಾಗೆ ಮಾಡಿದ್ದರೆ ಮಾಧ್ಯಮದ ಪಿಡುಗು ಇರುತ್ತಿರಲಿಲ್ಲ. ಶಿಕ್ಷಣದ ವ್ಯಾಪಾರೀಕರಣದಿಂದಾಗಿ ಶಿಕ್ಷಣದಲ್ಲಿ ಮಕ್ಕಳ ಶ್ರೇಣೀಕರಣ ನಡೆದಿದೆ. ಅಲ್ಲೂ ವಿಶೇಷ ಸವಲತ್ತುಗಳನ್ನೊಳಗೊಂಡ ಒಂದು ಬಣವನ್ನು ಬೆಳೆಸಲಾಗಿದೆ. ಅದು ಶಿಕ್ಷಣ ನೀತಿ ಆಗಕೂಡದೆಂದು ಹೇಳುವ ಬದಲು ನ್ಯಾಯಾಲಯವು "ಪೋಷಕರ ಮೂಲಭೂತ ಹಕ್ಕು" ಎಂಬ ಮಾತನ್ನಾಡಿದೆ, ಕಲಿಕೆಯ ವೈಜ್ಞಾನಿಕ ಆಯಾಮವನ್ನು ನಗಣ್ಯವೆನಿಸಿಬಿಟ್ಟಿದೆ, ಮಕ್ಕಳಲ್ಲಿ ಗಂಗೆ – ಚರಂಡಿ ಎಂಬ ಪ್ರತ್ಯೇಕತೆಗೆ ಸೊಪ್ಪು ಹಾಕಿದೆ. ಇದು ಅಪೇಕ್ಷಣೀಯ ಅಲ್ಲ; ಬದಲಾಗಿ, ಅದು ಅತ್ಯಂತ ಆಕ್ಷೇಪಾರ್ಹವಾದದ್ದು. ಶಿಕ್ಷಣದ ವ್ಯಾಪಾರಿಗಳು ತೀರ್ಪಿಗೆ "ಸೈ, ಜೈ" ಹೇಳಿದ್ದಾರೆಂಬ ಕಾರಣಕ್ಕೆ ಅದು ಮಾನ್ಯವಾಗುವುದಿಲ್ಲ. ತೀರ್ಪನ್ನು ತಿರಸ್ಕರಿಸಿ, ಜನಪರವಾದ ಸಮಾನ ಶಿಕ್ಷಣ ಹಕ್ಕಿಗಾಗಿ ಯತ್ನಿಸಿ ವಿಜಯಿಯಾಗಬೇಕಾದ್ದು ಸರ್ಕಾರದ ಕರ್ತವ್ಯ.

ಅದನ್ನು ಮಾಡುವುದಾದರೂ ಹೇಗೆ? ಅದಕ್ಕೆ ಎರಡು ಹಾದಿಗಳಿವೆ: (ಅ) ಸರ್ವೋಚ್ಚ ನ್ಯಾಯಾಲಯಕ್ಕೆ, ಮಕ್ಕಳು ಕಲಿಕೆಯ ಉತ್ಕೃಷ್ಟ ಮಟ್ಟದಲ್ಲಿ ಕಲಿಯುವುದು ಅವರ ಮೂಲಭೂತ ಹಕ್ಕು, ಪೋಷಕರಿಂದಾಗಿ ಮಕ್ಕಳು ಆ ಕಲಿಕೆಯ ಹಕ್ಕನ್ನು ಕಳೆದುಕೊಳ್ಳುವಂತಿಲ್ಲ, ಎಂದು ಮನವರಿಕೆ ಮಾಡಿಕೊಡುವುದು. ಅಂದರೆ, ಈಗಿನ ತೀರ್ಪನ್ನು ಪ್ರಶ್ನಿಸಿ ಮರುಪರಿಶೀಲನೆಗಾಗಿ ಮನವಿ ಸಲ್ಲಿಸುವುದು. ಜಾಗತೀಕರಣದ ಹಿನ್ನೆಲೆಯಲ್ಲಿ ತೀವ್ರವಾಗಿ ಹೆಚ್ಚಿರುವ ಶಿಕ್ಷಣದ ವ್ಯಾಪಾರೀಕರಣವನ್ನು ನ್ಯಾಯಾಲಯವು ತಡೆಯಲು ಮುಂದಾಗದಿರಬಹುದು, ತನ್ನ "ಪೋಷಕರ ಮೂಲಭೂತ ಹಕ್ಕು" ಎಂಬುದನ್ನು ಬದಲಾಯಿಸಲು ಸಿದ್ಧವಿಲ್ಲದಿರಬಹುದು. ಅಂತಹ ಸಂದರ್ಭದಲ್ಲಿ ಇನ್ನೊಂದು ಕ್ರಮವನ್ನು ಅನುಸರಿಸಬೇಕು. (ಆ) ಪಾರ್ಲಿಮೆಂಟಿನಲ್ಲಿ ಒಂದು ನಿರ್ಣಯವನ್ನು ಮಂಡಿಸಿ, ಎಲ್ಲ ಪಕ್ಷಗಳ ಬೆಂಬಲ ಪಡೆದು, ಸಂವಿಧಾನಕ್ಕೆ ಒಂದು ಸೂಕ್ತ ತಿದ್ದುಪಡಿಯನ್ನು ತಂದು ಮಕ್ಕಳ ಕಲಿಕೆಯ ಹಕ್ಕನ್ನು ಊರ್ಜಿತಗೊಳಿಸುವುದು. ಮೋದಿ ಸರ್ಕಾರವು ಇಂತಹ ಕ್ರಮವನ್ನು ಅಂಗೀಕರಿಸುತ್ತದೆಯೋ, ಅಥವಾ ಶಿಕ್ಷಣದಲ್ಲಿ ವ್ಯಾಪಾರೀಕರಣ ಮತ್ತು ಶ್ರೇಣೀಕರಣವನ್ನು ಪುಷ್ಟಿಗೊಳಿಸುತ್ತದೆಯೋ? ಉತ್ತರಭಾರತದ ಶಾಲೆಗಳಲ್ಲಿರುವ ಹಿಂದಿ ಮಾಧ್ಯಮವನ್ನಂತೂ ನಮ್ಮ ಶಾಲೆಗಳಲ್ಲಿ ಹೇರಲಾಗುವುದಿಲ್ಲ, ಆದ್ದರಿಂದ ರಾಜ್ಯಭಾಷೆಯಾದ ಕನ್ನಡವು ಶಾಲೆಗಳಲ್ಲಿ ಕಲಿಕಾ ಮಾಧ್ಯಮವಾಗಬೇಕು. ಭಾಜಪದ ಕಟ್ಟಾ ಸಮರ್ಥಕರೂ ಕನ್ನಡದ 'ಹೋರಾಟಗಾರರೂ' ಆದ ಮಾನ್ಯ ಡಾ॥ ಎಂ. ಚಿದಾನಂದಮೂರ್ತಿ ಮುಂತಾದ ತಜ್ಞರು ಪಾರ್ಲಿಮೆಂಟಿನಲ್ಲಿ ಇಂತಹ ಮಸೂದೆಯೊಂದನ್ನು ಅಂಗೀಕರಿಸುವಂತೆ ಭಾಜಪದ ಸದಸ್ಯರನ್ನು ಪ್ರೇರೇಪಿಸಬೇಕು, ರಾಜ್ಯ ಸರ್ಕಾರವು ಬೇರೆಲ್ಲ ರಾಜ್ಯ ಸರ್ಕಾರಗಳನ್ನೂ ಸಂಪರ್ಕಿಸಿ ಈ ಮಾದರಿಯ ಮಸೂದೆಯನ್ನು ಮಂಡಿಸಿ ಅಂಗೀಕಾರ ದೊರಕಿಸಿಕೊಳ್ಳಲು ಮುಂದಾಗಬೇಕು. ಇದಕ್ಕೆ ಭಾಜಪ ಮತ್ತು ಕಾಂಗ್ರೆಸ್ ಕೈಜೋಡಿಸಬೇಕು. ಶಿಕ್ಷಣದ ವ್ಯಾಪಾರೀಕರಣ ಮತ್ತು ಶಿಕ್ಷಣದಲ್ಲಿ ಶ್ರೇಣೀಕರಣ ಬೇಡವೆನ್ನುವುದು ಆ ಪಕ್ಷಗಳ ಬದ್ಧ ನಿಲುವಾದರೆ ಮಸೂದೆಯ ಅಂಗೀಕಾರಕ್ಕೆ ತಡೆಯೊಡ್ಡುವವರು ಯಾರೂ ಇರುವುದಿಲ್ಲ. ಮೋದಿ ಪಕ್ಷದಲ್ಲಿ ಮಾತು ಮತ್ತು ಕೃತಿಯ ನಡುವೆ ಅಂತರವಿದೆಯೇ ಇಲ್ಲವೇ ಎಂಬುದಕ್ಕೆ ಇದೊಂದು ಪರೀಕ್ಷೆ. ಶಿಕ್ಷಣದ ವಿಧಾನವನ್ನು ತೀರ್ಮಾನಿಸಬೇಕಾದ್ದು ಶೈಕ್ಷಣಿಕ ಮನೋವಿಜ್ಞಾನವೇ ವಿನಾ ಸಂವಿಧಾನವನ್ನು ಯಾಂತ್ರಿಕವಾಗಿ ಅರ್ಥೈಸುವವರಲ್ಲ, ಹಾಗಾಗಕೂಡದು.

* * *

ಇಂಗ್ಲಿಷ್ ನಿಘಂಟುಗಳಲ್ಲಿ ದಾಖಲಾಗಿರುವಂತೆ 'ಕ್ರೋನಿ' (crony) ಎಂದರೆ ಆಪ್ತಸ್ನೇಹಿತ, ಆಪ್ತವಲಯದವನು, ಎಂದರ್ಥ. ಆ ಪದವು ಈಚಿನ ವರ್ಷಗಳಲ್ಲಿ ನಮ್ಮ ರಾಜಕೀಯ ಮತ್ತು ಆರ್ಥಿಕ ವಲಯಗಳಲ್ಲಿ ಬಹುವಾಗಿ ಬಳಕೆಗೆ ಬಂದಿದೆ. ನಮ್ಮ ದೇಶದ ಇಂದಿನ ಸಂದರ್ಭದಲ್ಲಿ ಪ್ರಭುತ್ವ ಮತ್ತು ಬಂಡವಾಳಶಾಹಿಯ ನಡುವಣ ಸಂಬಂಧವನ್ನು ನಿಖರವಾಗಿ ಸೂಚಿಸುವಾಗ "ಕ್ರೋನಿ ಕ್ಯಾಪಿಟಲಿಸಂ" ಎಂಬ ವಿವರಣೆಯನ್ನು ನೀಡಲಾಗುತ್ತಿದೆ. ಮನಮೋಹನ ಸಿಂಗ್ ಸರ್ಕಾರದ ಭ್ರಷ್ಟಾಚಾರ, ಗುಜರಾತಿನಲ್ಲಿ ಮೋದಿ ಸರ್ಕಾರದ ಆಡಂಬರ, ಗುಡಗಾಂವ್‌ನಲ್ಲಿ ಮಾರುತಿ ಕಂಪನಿಯ ದೌರ್ಜನ್ಯದ ಸಮರ್ಥನೆಗಾಗಿ ಹರಿಯಾಣ ಸರ್ಕಾರದ ಪೊಲೀಸ್ ಬೆಂಬಲ, ಇಂತಹ ಪ್ರಸಂಗಗಳು ಬಂಡವಾಳಶಾಹಿಯ ಮೂಲ ಲಕ್ಷಣಗಳನ್ನು ಅಪಾರವಾಗಿ ಬದಲಾಯಿಸಿದೆ. ಸಾಮಾನ್ಯತಃ ಬಂಡವಾಳಶಾಹಿಯ ಉತ್ಪಾದನೆ ಮತ್ತು ವಿತರಣೆಯ ವ್ಯವಸ್ಥೆಯಲ್ಲಿ ಮಾರುಕಟ್ಟೆಯ ಪಾತ್ರ ಅನಿಶ್ಚಿತವಾದ್ದು. ಬಂಡವಳಿಗನು ಲಾಭ ಗಳಿಸಿ ಬೆಳೆಯಬಹುದು, ನಷ್ಟ ಅನುಭವಿಸಿ ಮುಳುಗಲೂಬಹುದು. ಅವನ ಹೂಡಿಕೆಗೆ ಯಾವಾಗಲೂ ಕೇಡು ಅಥವಾ ನಷ್ಟದ ಸಂಭವ ಇರುತ್ತದೆ. ಮಾರುಕಟ್ಟೆಯ ಬಗೆಗಿನ ಅಂದಾಜು ತಲೆಕೆಳಗಾದಾಗ, ಉತ್ಪಾದನೆಗೆ ಅಗತ್ಯವಾದ ಕಚ್ಚಾ ಸಾಮಗ್ರಿಗಳ ಸರಬರಾಜು ಕುಂಠಿತವಾದಾಗ ಅಥವಾ ಅದರ ಬೆಲೆಯಲ್ಲಿ ಏರುಪೇರಾದಾಗ, ದಾಸ್ತಾನು ಕರಗದೆ ಶೇಖರಣೆಗೊಂಡಾಗ, ಇಂತಹ ಅಪಾಯದ ಸಂಭವವಿದೆ. ಅಂದರೆ, ಬಂಡವಳಿಗನ ವ್ಯವಹಾರವು ಒಂದು ಸಾಹಸದ ಉದ್ಯಮ. ಅದರಲ್ಲಿ ಮಿಗುತಾಯ ಮೌಲ್ಯವೆಂಬುದು ಬಂಡವಳಿಗನಿಗೆ ಸ್ಥಿರವಾದ ಊರುಗೋಲು. ೧೯೯೦ರ ದಶಕದಲ್ಲಿ ಜಾರಿಗೆ ಬಂದ ಜಾಗತೀಕರಣ ಮತ್ತು ಉದಾರೀಕರಣದ ಭರಾಟೆಯಿಂದಾಗಿ ನಮ್ಮ ದೇಶದ ಬಂಡವಾಳಶಾಹಿಯು ಒಂದು ಗುಣಾತ್ಮಕ (ಅಥವಾ, ದುರ್ಗುಣಾತ್ಮಕ) ಬದಲಾವಣೆಯನ್ನು ಕಂಡಿತು. ಮುಂಚೆಯೂ ಆ ಪ್ರವೃತ್ತಿ ಇದ್ದಿತು, ಆದರೆ ಆಮೇಲೆ ಅದೇ ಪ್ರಧಾನ ಪ್ರವೃತ್ತಿಯಾಯಿತು. ಇದಕ್ಕೆ ಸರ್ಕಾರದ ನೀತಿ ನಿರೂಪಕರು, ನೀತಿಯ ಅನುಷ್ಠಾನದ ಜವಾಬ್ದಾರಿ ಹೊರುವ ಸಚಿವರು ಮತ್ತು ಅಧಿಕಾರಿಗಳು, ನ್ಯಾಯಾಂಗದ ಬದಲಾದ ದೃಷ್ಟಿಕೋನ, ಬ್ಯಾಂಕುಗಳು ಅನೌಪಚಾರಿಕವಾಗಿ ಬಂಡವಳಿಗರ ಸ್ವಾಧೀನಕ್ಕೆ ಬಂದಿದ್ದು, ಬಂಡವಳಿಗರಲ್ಲಿ ವರ್ಧಿಸಿದ ಲಾಭಕೋರತನ ಮತ್ತು ವ್ಯವಹಾರಗಳಲ್ಲಿ ಅತಿಭೀಕರ ಅನೈತಿಕತೆ, ವಿದೇಶಿ ಬಂಡವಾಳ ಮತ್ತು ಮಾರುಕಟ್ಟೆಯ ಪಾತ್ರ, ಎಲ್ಲವೂ ಏಕಪ್ರಕಾರವಾಗಿ ಕಾರಣಗಳಾಗಿವೆ. ಒಂದೇ ಮಾತಿನಲ್ಲಿ ಸರಳವಾಗಿ ಹೇಳುವುದಾದರೆ ಜೆ. ಆರ್. ಡಿ. ಟಾಟಾ ಮತ್ತು ರತನ್ ಟಾಟಾ, ಜಿ. ಡಿ. ಬಿರ್ಲಾ ಮತ್ತು ಕುಮಾರ ಮಂಗಳಂ ಬಿರ್ಲಾ, ಎಲ್ಲರೂ ಬಂಡವಳಿಗರೇ ಆದರೂ ಜೆ.ಆರ್.ಡಿ.ಗಿಂತಲೂ ರತನ್ ಭಿನ್ನ, ಜಿ. ಡಿ. ಗಿಂತಲೂ ಕುಮಾರಮಂಗಳಂ ಭಿನ್ನ. ನರೇಂದ್ರ (ಈಗ ನರಮೇಧೇಂದ್ರ ಎನ್ನುವಂತಿಲ್ಲ?) ಮೋದಿ ಇಲ್ಲದಿದ್ದರೆ ಗುಜರಾತಿನಲ್ಲಿ ಅದಾನಿಗೆ ಮೂರು ಸಾವಿರ ಎಕರೆ ಭೂಮಿಯು ಕವಡೆ ಕಾಸಿಗೆ ದೊರೆಯಲು ಸಾಧ್ಯವಾಗುತ್ತಿರಲಿಲ್ಲ. ಪ್ರಭುತ್ವದ ಪ್ರತಿನಿಧಿಯಾದ ಮೋದಿಗೆ ಅದಾನಿ ವಿಶೇಷವಾಗಿ "ಆಪ್ತ"ನೆನಿಸಿಬಿಟ್ಟಿದ್ದಾನೆ. ಆದ್ದರಿಂದ ಅವನ ಬಂಡವಾಳ ಹೂಡಿಕೆಯು ನಷ್ಟದ ಬಾಬ್ತು ಆಗುವ ಸಾಧ್ಯತೆ ಇಲ್ಲ. ಹಿಂದಿನ ಕೇಂದ್ರ ಸಚಿವ ವೀರಪ್ಪ ಮೊಯ್ಲಿಗೆ ಮುಖೇಶ್ ಅಂಬಾನಿ "ಆಪ್ತ"ನಾಗಿರದಿದ್ದರೆ ಅನಿಲದ ಅವ್ಯವಹಾರದಲ್ಲಿ ಆತನಿಗೆ ೪೫,೦೦೦ ಕೋಟಿ ರೂಪಾಯಿಗಳ ಲಾಭ ಸಲೀಸಾಗಿ ದೊರೆಯುತ್ತಿರಲಿಲ್ಲ. ಕೇಂದ್ರ ಮಂತ್ರಿ ಎ. ರಾಜ ಇಲ್ಲದಿರುತ್ತಿದ್ದರೆ ವೋಡಫೋನ್‌ಗೆ ೧೧೦೦ ಕೋಟಿ ತೆರಿಗೆ (ಅಥವಾ ೧೧,೦೦೦ ಕೋಟಿಯೋ?) ಉಳಿಸಿಕೊಳ್ಳಲಾಗುತ್ತಿರಲಿಲ್ಲ. ಬಳ್ಳಾರಿಯ ರೆಡ್ಡಿ ಬಂಧುಗಳಿಗೆ ಸುಷ್ಮಾ ಸ್ವರಾಜ್ ಅವರ ಆಶೀರ್ವಾದವಿಲ್ಲದಿರುತ್ತಿದ್ದರೆ ರೆಡ್ಡಿಯು ವೆಂಕಟೇಶ್ವರನಿಗೆ ೪೦ ಕೋಟಿ ರೂ. ಕಿರೀಟ ಕೊಡಲಾಗುತ್ತಿರಲಿಲ್ಲ. ಅಂತೆಯೇ, ಚೀಣಾದಲ್ಲಿ ಭಾರತದ ಕಬ್ಬಿಣದ ಅದುರಿನ ಪರ್ವತದ ನಿರ್ಮಾಣವೂ ಸಾಧ್ಯವಾಗುತ್ತಿರಲಿಲ್ಲ. ಇಲ್ಲಿ

ಮಾರುವವನು ಮತ್ತು ಅಲ್ಲಿ ಕೊಳ್ಳುವವನು, ಇಬ್ಬರೂ ಸುಲಭದಲ್ಲಿ ಲಾಭ ಪಡೆದುಕೊಂಡರು. ಇವರೆಲ್ಲಾ ಪಡೆದಿದ್ದು ಮತ್ತು ಮಾರಿದ್ದು ಸಾರ್ವಜನಿಕ ಸಂಪತ್ತು. ಹರಿಯಾಣದ ಮುಖ್ಯಮಂತ್ರಿಯ ಪೂರ್ಣ ಬೆಂಬಲ ಇಲ್ಲದೆ ರಾಬರ್ಟ್ ವಾದ್ರಾಗೆ ಅಷ್ಟೊಂದು ಭೂಮಿ ಅಷ್ಟು ಕಡಿಮೆ ಬೆಲೆಗೆ ದಕ್ಕುತ್ತಿರಲಿಲ್ಲ. ಈ ಬಂಡವಳಿಗರಿಗೆ ಮಿಗುತಾಯ ಮೌಲ್ಯವು ಹಿಂದಿನ ಸ್ವರೂಪದ್ದಲ್ಲ; ಹರಿದುಬರುವುದೆಲ್ಲಾ ಮಿಗುತಾಯವೇ ಆಗಿರುತ್ತದೆ. ಅಂದರೆ, ಅಹ್ಲುವಾಲಿಯ – ಚಿದಂಬರಂ – ಮನಮೋಹನ ಸಿಂಗ್, ಇವರೆಲ್ಲರ "ಆಪ್ತತೆ" ಇಲ್ಲದಿದ್ದರೆ ಜಾಗತೀಕರಣದಡಿ ಸುಲಭದಲ್ಲಿ ಲಾಭ ಮಾಡಿಕೊಂಡವರು ಹಾಗೆ ಮಾಡಲಾಗುತ್ತಿರಲಿಲ್ಲ. ಸಹಾರಾ, ವಿಜಯ ಮಲ್ಯ, ಮುಂತಾದವರು ಬ್ಯಾಂಕುಗಳಿಗೆ ನೀರುತಿದ್ದಿರುವ ಹಾಗೆ ನಾನು – ನೀವು ಮಾಡಲಾಗುವುದಿಲ್ಲ. ಏಕೆಂದರೆ ನಾವು ಆ ಅಸಹ್ಯವಾದ "ಆಪ್ತತೆ" ಬೆಳೆಸಿಕೊಂಡಿಲ್ಲ. ಅತಿಸರಳವಾಗಿ ನಿರೂಪಿಸುವುದಾದರೆ, ಬಂಡವಾಳಶಾಹಿಯ ಲೂಟಿಗೆ ಕೆಲವಾದರೂ ಪ್ರತಿಬಂಧಕಗಳಿವೆ, ಆದರೆ "ಕ್ರೋನಿ" ಬಂಡವಾಳಶಾಹಿಯ ಲೂಟಿಕೋರತನಕ್ಕೆ ಯಾವ ನಿರ್ಬಂಧವೂ ಇಲ್ಲ, ಎಲ್ಲೆಯೂ ಇಲ್ಲ. ಹೀಗಾಗಿ, ಅಂಬಾನಿ ೨೭ ಮಹಡಿಗಳ ಮನೆ ಕಟ್ಟಿಕೊಳ್ಳುತ್ತಾನೆ, ಮಲ್ಯ ಏರೋಪ್ಲೇನುಗಳನ್ನು ಕೊಂಡುಕೊಳ್ಳುತ್ತಾನೆ. ದೇಶದ ಜನರ ಪಾಲಿಗೆ ಈ "ಕ್ರೋನಿ" ಬಂಡವಾಳಶಾಹಿಯು ಏನನ್ನೂ ಬಿಡುವುದಿಲ್ಲ: ಕಾಡು, ನೀರು, ನೆಲ, ಖನಿಜ, ಕಲ್ಲು, ಕಣಿವೆ, ಎಲ್ಲವೂ ಅವರದೇ! ಪ್ರಭುತ್ವದ ಪ್ರತಿನಿಧಿಗಳು ದೇಶದ ಸಂಪತ್ತನ್ನು ಬೇಕಾಬಿಟ್ಟಿಯಾಗಿ ಜನರಿಂದ ಸೆಳೆದು ಖಾಸಗಿ "ಆಪ್ತರಿಗೆ" ಬಳುವಳಿಯಾಗಿ ಕೊಡುತ್ತಾರೆ. ಆದ್ದರಿಂದ ಈ ಬಂಡವಳಿಗರಿಗೆ ದಿವಾಳಿಯಾಗುವ ಭಯವೇನೂ ಇಲ್ಲ. ಬಂಡವಾಳಶಾಹಿಯ ಅತಿನೀಚ ಹಂತದಲ್ಲಿ ಕಾಣಿಸಿಕೊಳ್ಳುವುದು "ಕ್ರೋನಿ" ಬಂಡವಾಳಶಾಹಿ; ಅಲ್ಲಿಂದ ಮುಂದಿನ ನೆಗೆತ ನೇರವಾಗಿ ಫ್ಯಾಸಿಸ್ಟ್ ದುರುಳತನಕ್ಕೆ.

"ಕ್ರೋನಿ" ಬಂಡವಾಳಶಾಹಿಯ ಇನ್ನೊಂದು ಲಕ್ಷಣವೆಂದರೆ ಕಚ್ಚಾಸಾಮಗ್ರಿಯನ್ನು ರೂಢಿಸಿಕೊಂಡು ತಾಂತ್ರಿಕ ಜ್ಞಾನದ ಸಹಾಯದಿಂದ ಮೌಲ್ಯವರ್ಧನೆಯ ಹಾದಿಯಲ್ಲಿ ಸಾಗದಿರುವುದು. ಜೆ. ಆರ್. ಡಿ. ಟಾಟಾ ಉಕ್ಕು ತಯಾರಿಕೆಯಲ್ಲಿ ನಿರತರಾಗಿದ್ದರು; ಆದರೆ ನವೀನ ಪಟ್ನಾಯಕ್ ಅದಿರನ್ನೆಲ್ಲಾ ಪಾಸ್ಕೋಗೆ ಮಾರಿ ಒಡಿಶಾದ "ಅಭಿವೃದ್ಧಿ" ಮಾಡುತ್ತಾರೆ !!

ಈ "ಕ್ರೋನಿ" ಪದ್ಧತಿಯಲ್ಲಿ ಇನ್ನೊಂದು ಘೋರ ವಿಪರ್ಯಾಸವಿದೆ. ಪ್ರಭುತ್ವ ಮತ್ತು ಅದರ ಪ್ರತಿನಿಧಿಗಳು ವಿಶೇಷ ಸೌಲಭ್ಯಗಳನ್ನು ಸುರಿಯಲು ಕೆಲವು ಬಂಡವಳಿಗರನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಹೀಗಾಗಿ ಬಂಡವಳಿಗರನ್ನು ಪ್ರಭುತ್ವವು ಶ್ರೇಣೀಕರಿಸುತ್ತದೆ, ಹಲವರು ಸಾಮಾನ್ಯ ಬಂಡವಳಿಗರಾಗುತ್ತಾರೆ, ಅವರಿಗಿಂತ ಕಡಿಮೆ ಸಂಖ್ಯೆಯವರು ಪ್ರಭುತ್ವಕ್ಕೆ "ಆಪ್ತ"ರಾಗುತ್ತಾರೆ. ಅಂದರೆ, ನಾರಾಯಣಮೂರ್ತಿಗಳಿಗೆ ಸುಲಭವಾಗಿ ಲಭ್ಯವಾಗುವಷ್ಟು ಭೂಮಿಯು ಬೇರೆ ಮಾಹಿತಿ ತಂತ್ರಜ್ಞಾನದ ಉದ್ಯಮಿಗಳಿಗೆ ಸಿಗುವುದಿಲ್ಲ. ಇಂತಹ ತಾರತಮ್ಯವು ಆಳುವ ವರ್ಗದವರಿಗೆ ಅನುಕೂಲಕರ. ಒಂದು ಉದಾಹರಣೆ ನೋಡಿ: ಮಾನ್ಯ ಮೋದಿಯವರ ನೇತೃತ್ವದಲ್ಲಿ ಅವರ ಪಕ್ಷವು ಇತ್ತೀಚಿನ ಚುನಾವಣೆಯಲ್ಲಿ ಜಾಹಿರಾತುಗಳಿಗಾಗಿ ೧೦,೦೦೦ ಕೋಟಿ ರೂ.ಗಳನ್ನು ಖರ್ಚು ಮಾಡಿತೆಂದಿಟ್ಟುಕೊಳ್ಳೋಣ. ಅದು ಬಂದದ್ದು ಎಲ್ಲಿಂದ? ೧೦ ಲಕ್ಷ ಕೊಟ್ಟವರಿದ್ದಾರೆ, ೧೦ ಮತ್ತು ೧೦೦ ಕೋಟಿ ಕೊಟ್ಟವರೂ ಇದ್ದಾರೆ. ನೂರು ಕೊಟ್ಟವರು ಬರುವ ದಿನಗಳಲ್ಲಿ ಪ್ರಭುತ್ವಕ್ಕೆ ಹೆಚ್ಚು "ಆಪ್ತರು." ಆದ್ದರಿಂದ ಅವರು ಕೊಟ್ಟ ನೂರು ಕೋಟಿಗೆ ಹತ್ತರಷ್ಟನ್ನು ಕೆಲವೇ ತಿಂಗಳುಗಳಲ್ಲಿ ಹಿಂದಕ್ಕೆ ಪಡೆಯುತ್ತಾರೆ. ಅಂದರೆ, ಅವರು ಪ್ರಭುತ್ವದ 'ಕ್ರೋನಿ'ಗಳಾಗುತ್ತಾರೆ. ಆದ್ದರಿಂದ "ಕ್ರೋನಿತ್ವವು" ಪರಸ್ಪರವಾದ್ದು. ಪ್ರಭುತ್ವ ಮತ್ತು ಬಂಡವಳಿಗ ಅನ್ಯೋನ್ಯವಾಗಿ ಪರಸ್ಪರರನ್ನು ಆಶ್ರಯಿಸಿ ಬೆಳೆಯುವುದು ಇದರ ಫಲ. ದೂರೀಕರಿಸಲ್ಪಟ್ಟ ಬಂಡವಳಿಗರು ಪ್ರಭುತ್ವದ ಮೇಲೆ ತಿರುಗಿ ಬೀಳಬೇಕಲ್ಲವೆ? ಅದನ್ನು ಕಾದುನೋಡೋಣ.

✶ ✶ ✶

ಚಿದಂಬರಂ ಜಾಣರು. ಚೆಟ್ಟಿಯಾರ್ ಅಷ್ಟೂ ಜಾಣನಾಗದಿದ್ದರೆ ಹೇಗೆ! ತಾನು ಚುನಾವಣೆಗೆ ನಿಲ್ಲದೆ ಮಗನನ್ನು ನಿಲ್ಲಿಸಿದರು. ತಾವು ಕರ್ನಾಟಕದ ಶಾಸನಸಭೆಯಿಂದ ರಾಜ್ಯಸಭೆಗೆ ಹೋಗಬೇಕಂತೆ! ಈತನಿಗೆ ನಾಚಿಕೆ ಎಂಬುದೇನಾದರೂ ಉಂಟೆ? ರಾಜ್ಯಸಭೆಗೆ ಆಯ್ಕೆಯಾಗಲು ಎಷ್ಟು ಹಣ ಖರ್ಚು ಮಾಡಲಿದ್ದಾರೆ? ಚುನಾವಣಾ ಆಯೋಗದ ಅಧ್ಯಕ್ಷ ಸಂಪತ್ ಇದಕ್ಕೆ ಉತ್ತರ ಕಂಡುಕೊಳ್ಳಬೇಕು. ನಮ್ಮ ರಾಜ್ಯದ ಕಾಂಗ್ರೆಸ್ ಶಾಸಕರಿಗೆ ಸ್ವಾಭಿಮಾನವು ಎಳ್ಳಿನಷ್ಟಾದರೂ ಇದ್ದರೆ 'ನೀನು ರಾಜ್ಯಸಭೆಗೆ ಹೋಗುವುದು ಬೇಡ, ಶಿವಗಂಗೆಯಲ್ಲೇ ತಣ್ಣಗೆ ಕುಳಿತಿರು' ಎಂದು ಹೇಳಬೇಕು. ಇನ್ನೊಂದು ವಿಚಾರ: ಈತ ಅರ್ಥಮಂತ್ರಿಯಾಗಿ ಅನರ್ಥಗಳಿಗೆ ಕಾರಣನಾಗುತ್ತಿದ್ದಾಗ ಅದನ್ನು ಟೀಕಿಸಿದವರಿಗೆಲ್ಲಾ ಈತನದು ಒಂದೇ ಉತ್ತರ ಇರುತ್ತಿತ್ತು. "ನಮಗೆ ಜನಾದೇಶವಿದೆ, ಆದ್ದರಿಂದ ನಮಗೆ ಬೇಕಾದ ನೀತಿಗಳನ್ನು ನಾವು ರೂಪಿಸಿಕೊಳ್ಳುತ್ತೇವೆ. ಅದು ನಿಮಗೆ ಹಿಡಿಸದಿದ್ದರೆ ಮುಂದಿನ ಚುನಾವಣೆಯಲ್ಲಿ ಗೆದ್ದು ನಿಮಗೆ ಸರಿಕಾಣುವ ನೀತಿ ಅನುಸರಿಸಿ." ಮೋದಿ ಪಕ್ಷವು ಇದನ್ನು ಅಕ್ಷರಶಃ ಪಾಲಿಸಿದರೆ ಅಧ್ಯಕ್ಷೀಯ ಮಾದರಿ ಸರ್ಕಾರವನ್ನು ನಮ್ಮ ದೇಶದ ಮೇಲೆ ಹೊರಿಸಬಹುದು. ಚಿದಂಬರಂ ಮಾತಿನ ಅನಾಹುತ ಅರ್ಥವಾಗುತ್ತದಲ್ಲವೆ?

✶ ✶ ✶

ಚೀನಾ ಅಂತರರಾಷ್ಟ್ರೀಯವಾಗಿ ತುಳಿತಕ್ಕೊಳಪಟ್ಟ ಜನಗಳಿಗೆ ಮತ್ತು ದೇಶಗಳಿಗೆ ಎಂತಹ ಮತ್ತು ಎಷ್ಟು ಸಹಾಯಹಸ್ತ ಚಾಚಿದೆ ಎಂಬುದು ರಾಜ್ಯಶಾಸ್ತ್ರದ ವಿದ್ಯಾರ್ಥಿಗಳಿಗೆ ಒಂದು ಸಂಶೋಧನಾ ವಿಷಯ ಆಗಬಲ್ಲದು. ಪುಟ್ಟ ವಿಯೆಟ್ನಾಂ ಅಗಾಧ ಶಕ್ತಿಯ ಅಮೆರಿಕಾವನ್ನು ಎದುರಿಸುತ್ತಿದ್ದ ೧೯೭೦ರ ದಶಕದಲ್ಲಿ ವಿಯೆಟ್ನಾಂಗೆ ಶಸ್ತ್ರಾಸ್ತ್ರಗಳನ್ನು ಒಯ್ಯಲು ತನ್ನ ಭೂಮಿಯನ್ನು ಹಾದುಹೋಗಲು ಸೋವಿಯೆತ್ ಒಕ್ಕೂಟಕ್ಕೆ ನಿರ್ಬಂಧ ಹೇರಿದ್ದ ದೇಶ ಅದು. ಅಮೆರಿಕಾ ಶರಣಾದ ನಂತರ ವಿಯೆಟ್ನಾಂ ಮೇಲೆ ಎರಗಿಹೋದದ್ದು ಚೀನಾ. ವಿಶ್ವಸಂಸ್ಥೆಯ ಭದ್ರತಾ ಮಂಡಲಿಯಲ್ಲಿ ಚೀನಾ ಯಾವ ಆಕ್ರಮಣವನ್ನು ವಿರೋಧಿಸಿ ತನ್ನ ಮತ ಚಲಾಯಿಸಿದೆ ಎಂಬ ಪಟ್ಟಿ ಮಾಡಿದರೆ ಕಾಗದದ ಹಾಳೆ ಖಾಲಿಯಾಗಿಯೇ ಉಳಿಯುತ್ತದೋ ಏನೋ! ಪ್ರಸ್ತುತ, ಚೀನಾ ದಕ್ಷಿಣ ಸಾಗರದಲ್ಲಿ ತೈಲದ ಬಾವಿಗಳನ್ನು ಕೊರೆಯಲು ನುಗ್ಗಿದೆ. ಅದು ಪಾರಂಪರಿಕವಾಗಿ ತನ್ನ ಪ್ರದೇಶ ಎಂದು ವಿಯೆಟ್ನಾಂ ಹೇಳಿದೆ, ಆದರೆ ಅದಕ್ಕೆ ಉತ್ತರವಾಗಿ ಚೀನಾ ಒಮ್ಮೆಲೆ ಐದಾರು ಯುದ್ಧ ಹಡಗುಗಳನ್ನು ಆ ಪ್ರದೇಶಕ್ಕೆ ರವಾನಿಸಿದೆ. ಒಂದು ಸಮಾಜವಾದಿ ರಾಷ್ಟ್ರವು ಇನ್ನೊಂದು ಸಮಾಜವಾದಿ ರಾಷ್ಟ್ರದೊಡನೆ ಹೊಂದಬೇಕಾದ ಸೌಹಾರ್ದ ಮತ್ತು ಭ್ರಾತೃತ್ವಕ್ಕೆ ಇದು ಮಾದರಿಯೆ? ಅಥವಾ ಚೀನ ತಾನು ಸಮಾಜವಾದಿಯಲ್ಲವೆಂದು ಹೇಳಿದೆಯೆ? ಸಂಪತ್ತಿನ ವರ್ಧನೆಯೊಂದನ್ನು ಮಾತ್ರವೇ ಮಾಪಕವನ್ನಾಗಿ ಪರಿಗಣಿಸಲು ಸಾಧ್ಯವಿಲ್ಲ. ಆದರೆ ಚೀನಾಕ್ಕೆ ತಿಳಿವಳಿಕೆ ಹೇಳುವವರಾರು! ಇದನ್ನು ನೋಡಿಯಾದ ಮೇಲಾದರೂ ನಮ್ಮ ದೇಶದಲ್ಲಿ ತಮ್ಮನ್ನು ತಾವು 'ಮಾವೋವಾದಿಗಳು' ಎಂದು ಕರೆದುಕೊಳ್ಳುವವರು ಬೇರೊಂದು ಹೆಸರು ಹುಡುಕಿಕೊಳ್ಳುವುದು ಒಳ್ಳೆಯದು. ವಿಯೆಟ್ನಾಂ ಪರವಾಗಿ ಈಗ ದನಿಯೆತ್ತಲು ಮುಂದಾಗುತ್ತಿರುವ ಅಮೆರಿಕಾದ ವರ್ತನೆಯನ್ನು ವಿಯೆಟ್ನಾಂ ಎಚ್ಚರದಿಂದ ಗಮನಿಸಬೇಕು ಮತ್ತು ಗಮನಿಸುತ್ತದೆ. "ಅತ್ತಲೂ ಇಲ್ಲ, ಇತ್ತಲೂ ಇಲ್ಲ" ಎಂಬ ಬುದ್ಧಿವಂತಿಕೆಯ ಭಾವವನ್ನು ಭಾರತವು ಪ್ರದರ್ಶಿಸದಿರುವುದು ರಾಜಕೀಯ ನೈತಿಕತೆ ಎನಿಸಿಕೊಳ್ಳುತ್ತದೆ.

✶ ✶ ✶

ಚೌ ಎನ್ ಲೈ ಚೀಣಾದ ಪ್ರಧಾನಿಯಾಗಿದ್ದರು. ಆತನಿಗೆ ಇಂಗ್ಲಿಷ್ ಮತ್ತು ಫ್ರೆಂಚ್ ಚೆನ್ನಾಗಿ ಬರುತ್ತಿತ್ತು. ಆದರೆ ವಿದೇಶಗಳೊಡನೆ ಎಲ್ಲ ಚರ್ಚೆಗಳಿಗೂ ಭಾಷಾಂತರಕಾರರನ್ನು ಕರೆದುಕೊಂಡು ಹೋಗುತ್ತಿದ್ದುದು ಆತನ ರೂಢಿ. ಅನುವಾದದಲ್ಲಿ ಎಡವಿದರೆ ಚೌ ಎನ್ ಲೈ ಭಾಷಾಂತರಕಾರರನ್ನು ಕೂಡಲೆ ತಿದ್ದುತ್ತಿದ್ದುದು ಉಂಟು. ಬರುವ ದಿನಗಳಲ್ಲಿ ನಮ್ಮ ರಾಜ್ಯದ ಮುಖ್ಯಮಂತ್ರಿಗಳು ದೆಹಲಿಗೆ ಹೋಗುವಾಗ ಹಿಂದಿ–ಕನ್ನಡ ಭಾಷಾಂತರಕಾರರನ್ನು ಜೊತೆಯಲ್ಲಿ ಕರೆದುಕೊಂಡು ಹೋಗಬೇಕು. ಮಾನ್ಯ ಪ್ರಧಾನಿ ಮೋದಿಯವರಿಗೆ ಇಂಗ್ಲಿಷ್ ಬರುತ್ತದೋ ಇಲ್ಲವೋ ಎಂಬುದು ಅಪ್ರಸ್ತುತ. ಅವರಂತೂ ಹಿಂದಿಯಲ್ಲೇ ಮಾತನಾಡುತ್ತಾರೆ. ಅವರೊಡನೆ ಸಂಭಾಷಿಸುವಾಗ ಶ್ರೀ. ಸಿದ್ದರಾಮಯ್ಯನವರು ಕನ್ನಡವನ್ನೇ ಬಳಸಬೇಕು ಮತ್ತು ಭಾಷಾಂತರಕಾರರ ಮುಖಾಂತರವೇ ಸಂವಹನ ಸಾಧಿಸಬೇಕು. ಕನ್ನಡಕ್ಕಾಗಿ ಇಷ್ಟನ್ನೂ

ಮಾಡದಿದ್ದರೆ ಅದು ಹಿಂದಿ ಹೇರಿಕೆಗೆ ಅನುಮತಿ ನೀಡಿದಂತಾಗುತ್ತದೆ. ಕನ್ನಡಕ್ಕೆ ಇಷ್ಟು ಮಾನ್ಯತೆ ದಕ್ಕಿಸಿಕೊಡದವರು ಖಂಡಿತವಾಗಿಯೂ ಸರ್ವೋಚ್ಚ ನ್ಯಾಯಾಲಯದ ಕೆಟ್ಟ ತೀರ್ಪನ್ನು ಪ್ರಶ್ನಿಸುವ ಅರ್ಹತೆಯನ್ನು ಕಳೆದುಕೊಳ್ಳುತ್ತಾರೆ.

* * *

ಚುನಾವಣೆ ಫಲಿತಾಂಶಗಳು ಹೊರಬಿದ್ದ ಮೇಲೆ ಗೆದ್ದವರ ಸಂಭ್ರಮ ಸೋತವರ ಆತ್ಮಾವಲೋಕನ ಒಂದು ಸಂಪ್ರದಾಯವಾಗಿ ಬಿಟ್ಟಿದೆ. ಈ ಸಲ ಅತ್ಯಧಿಕ ಸ್ಥಾನಗಳನ್ನು ಪಡೆದುಕೊಂಡಿರುವ ಭಾಜಪದ ಎನ್‌ಡಿಎ ಬಾಜಾಭಜಂತ್ರಿ ಎಲ್ಲ ಮುಗಿದು ಈಗ ಸರಕಾರದ ರಚನೆಯ ಕಸರತ್ತಿನಲ್ಲಿ ಮುಳುಗಿದೆ. ೨೦೧೪ರ ಚುನಾವಣೆ ಒಂದು ಬಗೆಯ ಮೈಲಿಗಲ್ಲು. ಸ್ವಾತಂತ್ರ್ಯಾನಂತರದ ೬೭ ವರ್ಷಗಳಲ್ಲಿ ಅರ್ಧ ಶತಮಾನಕ್ಕೂ ಹೆಚ್ಚು ಕಾಲ ಆಡಳಿತ ನಡೆಸಿದ ಕಾಂಗ್ರೆಸ್ ಪಕ್ಷ ವಿರೋಧ ಪಕ್ಷದ ಸ್ಥಾನವನ್ನೂ ಗಳಿಸಲಾಗದಷ್ಟು ಅಲ್ಪಸಂಖ್ಯೆಯ ಸ್ಥಾನಗಳನ್ನು ಪಡೆದುಕೊಂಡು ಹೀನಾಯವಾದ ಸೋಲನ್ನನುಭವಿಸಿದೆ. ಅಮ್ಮ ಮಗನ ನಾಯಕತ್ವದ ಈ ಪಕ್ಷಕ್ಕೆ ಈಗ ಮಗಳ ಕಾಯಕಲ್ಪ ನೀಡುವ ಪ್ರಯತ್ನ ನಡೆದಿದೆ. ಕಾಂಗ್ರೆಸ್ ನೆಹರೂ–ಗಾಂಧಿ ಕುಟುಂಬಕ್ಕೆ ಇನ್ನಷ್ಟು ಕಾಲ ಅಂಟಿಕೊಂಡಿರುವುದು ಖಚಿತ. ಇದು ಕಾಂಗ್ರೆಸ್ಸಿನ ಹಣೆಬರಹ. ಹೇಗೆ ಮತ್ತೆ ಏಳುತ್ತದೋ ನೋಡಬೇಕು. ಇನ್ನು ಉಳಿದ ಪಕ್ಷಗಳಂತೂ ತೀರ ನೆಲಕಚ್ಚಿವೆ. ಉತ್ತರ ಪ್ರದೇಶದಲ್ಲಿ ದಲಿತ ನಾಯಕಿ ಮಾಯಾವತಿ ಶೂನ್ಯ ಸಂಪಾದಿಸಿದರೆ, ಆಡಳಿತದಲ್ಲಿರುವ ಮುಲಾಯಂ ಸಿಂಗ್ ಪಕ್ಷ ಕಡಿಮೆ ಸಂಖ್ಯೆಯಲ್ಲಿ ಜಯ ಗಳಿಸಿ ಆತ್ಮಾವಲೋಕನದಲ್ಲಿ ಮುಳುಗಿದೆ. ಇವರ ಸಂದರ್ಭ ಸಾಧಕತನಕ್ಕೆ ಸರಿಯಾದ ಪೆಟ್ಟು ಬಿದ್ದಿದೆ. ಇನ್ನು ಬಿಹಾರದಲ್ಲಿ ನಿತೀಶ್ ಕುಮಾರ್ ಇವರೂ ಒಬ್ಬ ಪ್ರಧಾನಿ ಆಕಾಂಕ್ಷಿ. ಅವರ ಜೆ.ಡಿ.ಯು ಪಕ್ಷ ಭಾಜಪದ ಜೊತೆ ಬಹುಕಾಲ ಮೈತ್ರಿಯಿಂದಿದ್ದು ಈಚೆಗೆ ಕಳಚಿಕೊಂಡಿತು. ಈಗ ಅದು ರಾಜ್ಯದಲ್ಲಿ ಅಧಿಕಾರವನ್ನೇ ಕಳೆದುಕೊಳ್ಳುವ ಸ್ಥಿತಿ ಮುಟ್ಟಿದೆ. ಸೋಲಿಗೆ ಹೊಣೆ ಹೊತ್ತು ನಿತೀಶ್ ರಾಜಿನಾಮೆ ಸಲ್ಲಿಸಿದ್ದರು. ಇನ್ನು ದಕ್ಷಿಣಕ್ಕೆ ಬಂದರೆ, ಕರ್ನಾಟಕದಲ್ಲಿ ಕಾಂಗ್ರೆಸ್ ನಿರೀಕ್ಷಿತ ಸ್ಥಾನಗಳನ್ನು ಪಡೆಯದೇ ವಿಫಲವಾಗಿದೆ. ಯಾವತ್ತಿನಂತೆ ಪರಸ್ಪರ ದೂಷಣೆ, ಆರೋಪಗಳು ಕೇಳಿಬರುತ್ತಿವೆ. ಒಳಜಗಳಕ್ಕೆ ಕಾಂಗ್ರೆಸ್ ಹೆಸರುವಾಸಿ. ಮುಖ್ಯಮಂತ್ರಿ ಸಿದ್ದರಾಮಯ್ಯಗೆ ಈಗ ಮುಜುಗರ. ಅವರ ಬಾಗಿಲಲ್ಲೇ ಕಾಯುತ್ತಿದ್ದಾರೆ ಪರಮೇಶ್ವರ. ಮುಂದೆ ಏನಾಗುತ್ತದೋ. ತಮಿಳುನಾಡಿನಲ್ಲಂತೂ ಜಯಲಲಿತ ಜಯಭೇರಿ ಕರುಣಾನಿಧಿ ಕುಟುಂಬವನ್ನು ಬೇರು ಸಹಿತ ಕಿತ್ತುಹಾಕಿದೆ. ಇಳಿವಯಸ್ಸಿನಲ್ಲಿ ಮಕ್ಕಳ ಕಚ್ಚಾಟದಲ್ಲಿ ಮುಳುಗಿದ ಅವರ ಡಿಎಂಕೆ ಪಕ್ಷ ತಲೆ ಎತ್ತದ ಹಾಗೆ ಒಂದು ಸ್ಥಾನವೂ ಇಲ್ಲದೆ ಪರಿತಪಿಸುತ್ತಿದೆ. ರಾಜಿನಾಮೆ ನಾಟಕ ನಡೆದದ್ದೂ ಆಯಿತು. ಅಂದಹಾಗೆ ಟೆಲಿಕಾಂ ಹಗರಣದ ಎ. ರಾಜ ಸ್ಪರ್ಧಿಸಿ ಮಣ್ಣು ಮುಕ್ಕಿದ್ದೂ ಆಯಿತು. ಇದುವರೆಗೆ ಅಂದರೆ ಸ್ವಾತಂತ್ರ್ಯಾನಂತರದಿಂದ ಲೋಕಸಭೆಯಲ್ಲಿ ಪ್ರಮುಖ ಪಕ್ಷವಾಗಿ ಕಾರ್ಯ ನಿರ್ವಹಿಸುತ್ತಿದ್ದ ಕಮ್ಯುನಿಸ್ಟ್ ಪಕ್ಷ ಈ ಸಲ ಅತ್ಯಂತ ಕಡಿಮೆ ಸ್ಥಾನ ಗಳಿಸಿದೆ. ಎರಡಂಕಿ ತಲುಪುವುದೂ ಕಷ್ಟವಾಗಿದೆ ಅದಕ್ಕೆ. ಅಂತೂ ಈ ಸಲದ ಪಾರ್ಲಿಮೆಂಟ್ ಚುನಾವಣೆಯ ಫಲಿತಾಂಶಗಳು ಎಲ್ಲ ಲೆಕ್ಕಾಚಾರಗಳನ್ನು ತಲೆಕೆಳಗು ಮಾಡಿದೆ. ಮಾಧ್ಯಮಗಳ ಚುನಾವಣೋತ್ತರ ಸಮೀಕ್ಷೆಗಳನ್ನು ಧೂಳೀಪಟ ಮಾಡಿದೆ.

* * *

ರಾಜ್ಯದಲ್ಲಿ ಸಿದ್ದರಾಮಯ್ಯ ಸರಕಾರ ಒಂದು ವರ್ಷ ಮುಗಿಸಿದೆ. ಅದೇ ಒಂದು ಸಾಧನೆ. ಏಕೆಂದರೆ ಅವರ ಕುರ್ಚಿ ಸುಭದ್ರವೇನಲ್ಲ. ಕಾಂಗ್ರೆಸ್ ಅಧಿಕ ಸ್ಥಾನಗಳನ್ನು ಪಡೆದುಕೊಂಡಿದ್ದರೂ ಐದು ವರ್ಷ ಆಡಳಿತ ನಡೆಸಿದರೂ ಸಿದ್ದರಾಮಯ್ಯ ಅಳಿವು ಉಳಿವು ಅನಿರೀಕ್ಷಿತ. ಕಾಂಗ್ರೆಸ್ ಮುಖ್ಯಮಂತ್ರಿಗಳು ಈಚೆಗೆ ಐದು ವರ್ಷ ಮುಗಿಸಿರುವುದು ಅಪರೂಪ. ಎಲ್ಲ ಹೈಕಮಾಂಡಿನ ಮರ್ಜಿಗೆ ಬಿಟ್ಟಿದ್ದು. ಅಧಿಕಾರಕ್ಕೇರಿದಾಗಲೇ ಒಳಜಗಳ ಶುರುವಾಗಿತ್ತು. ಈಗಲೂ ಪರಮೇಶ್ವರ, ಮಲ್ಲಿಕಾರ್ಜುನ ಖರ್ಗೆ ಮುಖ್ಯಮಂತ್ರಿ ಗಾದಿ ಅಲಂಕರಿಸಲು ಸಿದ್ಧರಾಗಿದ್ದಾರೆ. ಒತ್ತಾಯಕ್ಕೆ ಮಣಿದು ಡಿ. ಕೆ. ಶಿವಕುಮಾರ್ ಅವರನ್ನು ಸಂಪುಟಕ್ಕೆ ಸೇರಿಸಿಕೊಂಡ ಸಿದ್ದರಾಮಯ್ಯ ಇನ್ನೆಷ್ಟು ದಿನ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರನ್ನು ದೂರ ಇರಿಸಿಯಾರು ?

ಅಂತೂ ಒಂದು ವರ್ಷ ಮುಗಿಸಿದ ಸಿದ್ದರಾಮಯ್ಯ ಧನ್ಯರು. ಅನ್ನಭಾಗ್ಯ, ವಸತಿಭಾಗ್ಯ, ಕ್ಷೀರಭಾಗ್ಯ ಹೀಗೆ ಹಲವು ಭಾಗ್ಯಗಳನ್ನು ನೀಡಿದ್ದರೂ ಕರ್ನಾಟಕದಲ್ಲಿ ಪಾರ್ಲಿಮೆಂಟಿಗೆ ನಿರೀಕ್ಷಿಸಿದಷ್ಟು ಸ್ಥಾನ ಗಳಿಸುವ ಭಾಗ್ಯ ಬರಲಿಲ್ಲ. ರೈತರಿಗೆ ಬಡ್ಡಿರಹಿತ ಸಾಲ, ಹಾಲು ಉತ್ಪಾದಕರಿಗೆ ಪ್ರೋತ್ಸಾಹಧನ, ಸಾಲಮನ್ನಾ ಮೊದಲಾದ ಯೋಜನೆಗಳನ್ನು ಜಾರಿಗೆ ತಂದಿದ್ದರೂ ಅದು ರೈತರನ್ನು ತಲುಪದೇ ಹೋಗಿದೆ. ಇದರ ಕುರಿತು ಮಾಹಿತಿ ಸಂಗ್ರಹವಾಗಬೇಕು. ಅಧಿಕಾರಕ್ಕೆ ಬಂದ ಮೇಲೆ ಕೂಡಲೇ ಜಾರಿಗೆ ತಂದದ್ದು ಬಿಪಿಎಲ್ ಕಾರ್ಡ್‌ದಾರರಿಗೆ ಕಿಲೋಗೆ ಒಂದು ರೂಪಾಯಿ ಯಂತೆ ಅಕ್ಕಿ. ಇದರ ಫಲಾನುಭವಿಗಳು ನಿಜವಾಗಿ ಅದರ ಪ್ರಯೋಜನ ಪಡೆದುಕೊಂಡಿದ್ದಾರೆಯೆ ಎಂಬುದಕ್ಕೆ ಆಧಾರವಾಗಿ ಅಂಕಿಅಂಶಗಳಿಲ್ಲ. ಇದರಲ್ಲಿ ಸೋರಿಕೆ ಎಷ್ಟೋ ಹೇಳುವ ಹಾಗಿಲ್ಲ. ಒಂದು ರೂಪಾಯಿಗೆ ಅಕ್ಕಿ ಪಡೆದುಕೊಂಡು ಮಾರಿಕೊಳ್ಳುವವರಿಗೇನೂ ಕಡಿಮೆ ಇಲ್ಲ.

ರಾಜ್ಯದಲ್ಲಿ ಬರಗಾಲದ ಪರಿಸ್ಥಿತಿ ಹಲವು ಜಿಲ್ಲೆಗಳಲ್ಲಿ ತಲೆದೋರಿರುವುದರಿಂದ ಸಿದ್ದರಾಮಯ್ಯ ಬಾಜಾಭಜಂತ್ರಿಯಿಂದ ಒಂದು ವರ್ಷದ ಅಧಿಕಾರಾವಧಿಯ ಸಂಭ್ರಮ ಆಚರಿಸುತ್ತಿಲ್ಲ. ಇದನ್ನು ಅವರೇ ಹೇಳಿಕೊಂಡಿದ್ದಾರೆ. ಪಾಪ ಅದರಲ್ಲೂ ಅವರು ವಂಚಿತರು. ಇದರ ಮೇಲೆ ಚುನಾವಣೆಯ ಸೋಲು ಬೇರೆ. ತಮ್ಮ ಸಾಧನೆಗಳ ಕುರಿತು ಪುಸ್ತಕಗಳನ್ನು ಹೊರತಂದಿದ್ದಾರೆ. ಪತ್ರಿಕೆಗಳಲ್ಲಿ ಮೂರು ಮೂರು ದಿನ ಪುಟಗಟ್ಟಲೆ ಜಾಹಿರಾತುಗಳನ್ನು ಪ್ರಕಟಿಸಿದ್ದಾರೆ. ತೆರಿಗೆದಾರರ ಹಣ ತಾನೆ, ಹಲವು ಲಕ್ಷ ರೂಪಾಯಿಗಳು ಜಾಹಿರಾತಿಗೆ ಕೊಟ್ಟರೇನಂತೆ ಎನ್ನುವ ಧಿಮಾಕು ಇರಬೇಕು. ವರ್ಷ ಮುಗಿಯುತ್ತಿದ್ದ ಹಾಗೇ ಈಗ ಸಂಪುಟ ವಿಸ್ತರಣೆಯ ಅಗತ್ಯಬಿದ್ದಿದೆ. ಹಾಗೆಯೇ ತಳ್ಳುತ್ತ ಬಂದಿರುವ ನಿಗಮ ಮಂಡಳಿಗಳ ಅಧ್ಯಕ್ಷರ ನೇಮಕಾತಿ. ಹೀಗೆ ಹಲವು ತಾಪತ್ರಯಗಳು ಕಾಡುತ್ತಿವೆ. ಅವನ್ನು ಎಷ್ಟರಮಟ್ಟಿಗೆ ಅವರು ನಿಭಾಯಿಸುತ್ತಾರೋ ನೋಡೋಣ.

* * *

ಸದ್ಯದಲ್ಲೇ ಅಧಿಕಾರಕ್ಕೇರುವ ನರೇಂದ್ರ ಮೋದಿಗೆ ಮುನ್ನೂರ ಮೂವತ್ತು ಸದಸ್ಯರ ಬೆಂಬಲ ಇದೆ. ಇದು ಅವರಿಗೂ ಅನಿರೀಕ್ಷಿತವೇ. ದೊಡ್ಡ ಸಂಖ್ಯೆಯಲ್ಲಿದ್ದರೂ ಅಧಿಕಾರಾಕಾಂಕ್ಷಿಗಳೇ ಎಲ್ಲ. ಭಾಜಪ ಒಂದೇ ಬಹುಮತದ ಸ್ಥಾನ ಪಡೆದುಕೊಂಡಿದ್ದರೂ ಎನ್‌ಡಿಎ ಉಳಿಸಿಕೊಂಡು 'ಸಮ್ಮಿಶ್ರ' ಮುಖವಾಡ ಮುಂದುವರಿಯುತ್ತದೆ. ಆದರೆ ಎಲ್ಲ ಪ್ರಮುಖ ಸ್ಥಾನಗಳೂ ಭಾಜಪದ ಪಾಲಾಗುವುದು ಸಹಜ. ಸಾಕಷ್ಟು ಸಂಖ್ಯೆಯಲ್ಲಿ ಹಿರಿಯ ನಾಯಕರನ್ನು ಹೊಂದಿರುವ ಭಾಜಪ ಅದನ್ನು ಹೇಗೆ ಸರಿದೂಗಿಸುತ್ತದೆ ನೋಡಬೇಕು. ಇದರಲ್ಲಿ ಮಾತೃಸಂಸ್ಥೆ ಆರೆಸ್ಸೆಸ್‌ನ ಕೈವಾಡವಂತೂ ಇದ್ದೇ ಇದೆ. ನರೇಂದ್ರ ಮೋದಿಯನ್ನು ಚುನಾವಣೆಗೆ ಮುನ್ನವೇ ಪ್ರಧಾನಿ ಅಭ್ಯರ್ಥಿ ಎಂದು ಪ್ರಕಟಿಸಿದಾಗಲೂ ಆರೆಸ್ಸೆಸ್ ಸರಸಂಘಚಾಲಕ ಮೋಹನ್ ಭಾಗವತ ವಹಿಸಿದ ಪಾತ್ರ ಎಲ್ಲರಿಗೂ ಗೊತ್ತಿರುವಂಥದ್ದೆ. ಅಲ್ಲದೆ, ನರೇಂದ್ರ ಮೋದಿ ಪೂರ್ಣವಾಗಿ ಬೆಳೆದದ್ದೇ ಆರೆಸ್ಸೆಸ್ ಅಖಾಡದಲ್ಲಿ. ವಯೋವೃದ್ಧ ಲಾಲಕೃಷ್ಣ ಅದ್ವಾನಿಯ ಬಲಗೈ ಬಂಟರಾಗಿದ್ದ ಮೋದಿ ಗುರುವಿಗೇ ತಿರುಮಂತ್ರ ಹಾಕಿದವರು. ಅದ್ವಾನಿಗೂ ಪ್ರಧಾನಿಪಟ್ಟ ಗಿಟ್ಟಲೇ ಇಲ್ಲ. ಈಗ ಅವರು ಲೋಕಸಭೆಯ ಅಧ್ಯಕ್ಷರಾಗುವುದು ಬಹುತೇಕ ಖಚಿತವಾಗಿದೆ. ಹದಿನಾರನೇ ಲೋಕಸಭೆಯ ಕಲಾಪಗಳು ಅದರ ಹಿಂದಿನಂತೆ ಆಗುವುದಿಲ್ಲ ಎಂದು ಹೇಳಬಹುದು. ಏಕೆಂದರೆ ವಿರೋಧ ಪಕ್ಷಗಳ ಸದಸ್ಯರ ಸಂಖ್ಯೆ ಕಡಿಮೆ. ಇನ್ನೂರಕ್ಕೂ ಕಡಿಮೆ ಸಂಖ್ಯೆಯಲ್ಲಿರುವ ಇವರಲ್ಲಿ ಆಡಳಿತ ಪಕ್ಷದ ಬಾಲ ಹಿಡಿಯುವವರೆಷ್ಟೋ. ಸಾಕಷ್ಟು ಬಹುಮತ ಹೊಂದಿರುವುದರಿಂದ ಆಡಳಿತ ಪಕ್ಷ ಸಬೂಬು ಹೇಳಿಕೊಂಡು ತಿರುಗಾಡುವ ಹಾಗಿಲ್ಲ. ಕಾರ್ಪೊರೇಟ್‌ವಲಯ ಇಲೆಕ್ಟ್ರಾನಿಕ್ ಮಾಧ್ಯಮಗಳ ಪ್ರಭಾವದಲ್ಲಿರುವ ಭಾಜಪ ಮುಂದೆ ಯಾವ ರೀತಿ ಕಾರ್ಯ ನಿರ್ವಹಿಸುತ್ತದೆ ಎನ್ನುವುದೇ ಪ್ರಶ್ನೆ. ಜನಪರ ನೀತಿ ಅನುಸರಿಸುವುದೋ ಇಲ್ಲ ಕಾರ್ಪೊರೇಟ್ ಪರ ನಿಲ್ಲುವುದೋ ಎನ್ನುವುದು ಬಹುಬೇಗ ಗೊತ್ತಾಗುತ್ತದೆ. ಹೇಗಿದ್ದರೂ ನೂರು ದಿನಗಳ ಪ್ರೊಬೇಷನ್ ಕಾಲ ಇದೆಯಲ್ಲ.




Ⓜ ಮೂಢನಂಬಿಕೆಗಳ ಆಚರಣೆಗಳ ನಿಷೇಧಕ್ಕಾಗಿ ಸರ್ಕಾರಕ್ಕೆ ಕೆಲ ಪ್ರಗತಿಪರ ಚಿಂತಕರು ವರದಿಯನ್ನು ನೀಡಿದ್ದೇ ತಡ ಕೆಲವರಿಗೆ ಚೇಳು ಕಡಿದಂತೆ ಆಗಿದೆ. ಹಿಂದೂ ಧರ್ಮಾಚರಣೆಯ ಮೇಲಿನ ದಾಳಿ ಇದಾಗಿದೆ, ಧಾರ್ಮಿಕ ನಂಬಿಕೆಗಳಿಗೆ ಧಕ್ಕೆಯಾಗಿದೆ ಎಂದೆಲ್ಲಾ ಹುಯಿಲೆಬ್ಬಿಸತೊಡಗಿದ್ದಾರೆ. ಸತ್ಯಾಸತ್ಯತೆಯನ್ನು ಅರಿತು ಅವೈಚಾರಿಕ ಮೂಢನಂಬಿಕೆಗಳನ್ನು ಆಚರಣೆಯಿಂದ ದೂರ ಇರುವಂತೆ ಮಾಡಬೇಕಿದೆ. ನಮ್ಮ ರಾಷ್ಟ್ರಕವಿ ಕುವೆಂಪು, ಶಿವರಾಮ ಕಾರಂತ ಮುಂತಾದ ಮಹನೀಯರ ಧ್ಯೇಯಗಳನ್ನೇ ಮರೆಮಾಚಿರುವ ಇವರು ಜನತೆಯ ನಂಬಿಕೆಗಳಿಗೆ ಈ ಕಾಯ್ದೆ ವಿರುದ್ಧವಾಗಿದೆ ಎಂದು, ಆಕಾಶವೇ ತಲೆಮೇಲೆ ಬಿದ್ದಂತೆ ಮಾತಾಡತೊಡಗಿದ್ದಾರೆ. ಇವರ ಅಂಧಶ್ರದ್ಧೆಯ ಮೂಢನಂಬಿಕೆಗಳನ್ನು ಸಮರ್ಥಿಸಿಕೊಳ್ಳಲು ರಾಷ್ಟ್ರಕವಿ ಕುವೆಂಪುರವರ ಹೆಸರನ್ನು ಎಳೆದು ತಂದು, ಪ್ರಭುಶಂಕರ ರಚಿಸಿರುವ 'ಹೀಗಿದ್ದರು ಕುವೆಂಪು' ಪುಸ್ತಕವನ್ನು ನೋಡಿ ಎಂದು ಹೇಳುತ್ತಿದ್ದಾರೆ. ಈ ಮಹಾಶಯರಿಗೆ ಸ್ವತಃ ಕುವೆಂಪು ರವರೇ ರಚಿಸಿರುವ ಕವನ ಸಂಕಲನದ 'ಪಾಂಚಜನ್ಯ' ಪುಸ್ತಕದಲ್ಲಿರುವ 'ಇಂದಿನ ದೇವರು' ಕವನದ ಈ ಕೆಳಕಂಡ ಸಾಲುಗಳು ಅರ್ಥವಾಗುವುದಿಲ್ಲವೇ ?

*ನೂರು ದೇವರನೆಲ್ಲ ನೂಕಾಚೆ ದೂರ*
*ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರ !*

*ಶತಮಾನಗಳು ಬರಿಯ ಜಡಶಿಲೆಯ*
*ಪೂಜಿಸಾಯ್ತು ;*
*ಪಾವ್ಗಳಿಗೆ ಪಾಲೆರೆದು ಪೋಷಿಸಾಯ್ತು !*
*ಬಿಸಿಲು ಮಳೆ ಗಾಳಿ ಬೆಂಕಿಯನೆಲ್ಲ ಬೇಡಿಯಾಯ್ತು ;*
*ದಾಸರನು ಪೂಜಿಸಿಯೆ ದಾಸ್ಯವಾಯ್ತು !*

*ಗುಡಿಯೊಳಗೆ ಕಣ್‌ಮುಚ್ಚಿ ಬೆಚ್ಚಗಿರುವರನೆಲ್ಲ,*
*ಭಕ್ತ ರಕ್ತವ ಹೀರಿ ಕೊಬ್ಬಿಹರನೆಲ್ಲ,*
*ಗಂಟೆ ಜಾಗಟೆಗಳಿಂ ಬಡಿದು, ಕುತ್ತಿಗೆ ಹಿಡಿದು*
*ಕಡಲಡಿಗೆ ತಳ್ಳಿರೈ ಶಂಖದಿಂ ನುಡಿದು !*

ಇಂತಹ ಅನೇಕ ಕವನಗಳು, ಪ್ರಬಂಧಗಳು, ಕಾವ್ಯ ಗಳನ್ನೇಕೆ ಉದಾಹರಣೆಯಾಗಿ ತೆಗೆದುಕೊಳ್ಳಬಾರದು? ಎಲ್ಲಾ ಧರ್ಮಗಳ ಅವೈಜ್ಞಾನಿಕ ಮೂಢನಂಬಿಕೆಗಳ ನಿಷೇಧ ಕಾಯಿದೆಯನ್ನು ವಿರೋಧಿಸಿರುವುದು ಎಂದರೆ, ಅವೈಜ್ಞಾನಿಕ ಮತ್ತು ಮೂಢನಂಬಿಕೆಗಳ ವಿರುದ್ಧ ಸಾಮಾನ್ಯ ಜನರಲ್ಲಿ ವೈಜ್ಞಾನಿಕ ಮನೋಭಾವನೆ ಮೂಡಿಸಿದ ರಾಷ್ಟ್ರಕವಿ ಕುವೆಂಪುರವರಿಗೆ ದ್ರೋಹ ಬಗೆದಂತೆ ಆಗುವುದಿಲ್ಲವೇ ?

ಇತ್ತೀಚಿನ ವರ್ಷಗಳಲ್ಲಿ, ಹಬ್ಬ ಹರಿದಿನಗಳನ್ನು ನೆಪಮಾಡಿಕೊಂಡು ಎಲ್ಲಾ ಧರ್ಮದ ಮೂಲಭೂತ ವಾದಿಗಳು ಕಾರ್ಪೊರೇಟ್ ಕಂಪನಿಗಳ, ಕೆಲ ಮಾಧ್ಯಮಗಳ ಸಹಯೋಗದೊಂದಿಗೆ ಮೂಢನಂಬಿಕೆ ಆಚರಣೆಗಳನ್ನು ವ್ಯವಸ್ಥಿತವಾಗಿ ಆಯೋಜಿಸುತ್ತಿವೆ. ಇದಕ್ಕೊಂದು ಉದಾಹರಣೆಗೆ, ಲಕ್ಷ್ಮೀ ಪೂಜೆ ಮಾಡುವುದು ಹೇಗೆ ? ಸತ್ಯನಾರಾಯಣ ಪೂಜೆ ಮಾಡುವುದು ಹೇಗೆ ? ಹೀಗೆ ಮುಂತಾದ ಕಾರ್ಯಕ್ರಮ ಗಳಿಗೆ ಸಾವಿರಾರು ಬಡ ಮಹಿಳೆಯರನ್ನು ಒಂದೆಡೆ ಸೇರಿಸಿ, ಕೆಲ ಸಿನಿಮಾ ನಟಿಯರನ್ನು ಮುಂದಿರಿಸಿ, ರಾಜಕಾರಣಿಗಳ ಸುಪರ್ದಿಯಲ್ಲಿ ಕಾರ್ಯಕ್ರಮಗಳು ನಡೆಯುತ್ತಿವೆ. ಈ ಕಾರ್ಯಕ್ರಮಗಳು ಟಿ.ವಿ.ಗಳಲ್ಲಿ ಪ್ರಸಾರ ಮಾಡುವುದನ್ನು ಕಾಣುತ್ತಿದ್ದೇವೆ.




ಸಾಮಾನ್ಯ ಜನತೆಗೆ ತಮ್ಮ ಜೀವನ ನಿರ್ವಹಣೆ ಮಾಡಲು ನಿಶ್ಚಿತ ಆದಾಯವಿಲ್ಲ. ಹೀಗಾಗಿ ಬಡತನ ಮತ್ತು ದಾರಿದ್ರ್ಯದಿಂದ ಹತಾಶರಾಗಿದ್ದಾರೆ. ಇಂತಹ ಸಂದರ್ಭವನ್ನು ಬಳಸಿಕೊಂಡು ನಿಮ್ಮ ಕಷ್ಟಗಳ ನಿವಾರಣೆಗೆ ದೇವರ ಕೃಪೆ ಬೇಕು. ಹೀಗಾಗಿ ನೀವು ದೇವರ ಕೃಪೆ ಪಡೆಯಬೇಕಾದರೆ ಈ ರೀತಿಯೇ ಪೂಜೆ ಸಲ್ಲಿಸಬೇಕು ಎಂದು ಅಲಿಖಿತ ಕಾನೂನು ಕಟ್ಟಳೆ ಗಳನ್ನು ಸಾಮೂಹಿಕವಾಗಿ ಜಾರಿ ಮಾಡಿಸುವುದು. ಇದಕ್ಕಾಗಿಯೇ ದೈವ ಪುರುಷರು, ಯೋಗ ಪುರುಷರು, ಉದ್ಭವಿಸಿದ್ದಾರೆ. ಇವರಿಗೆ ದೊಡ್ಡ ಅರಮನೆಗಳು ಮತ್ತು ಸಾರ್ವಜನಿಕರ ಆಸ್ತಿಯನ್ನು ನಮ್ಮನ್ನಾಳುವ ಸರ್ಕಾರಗಳು ಧಾರೆ ಎರೆಯುತ್ತಿವೆ. ಜೊತೆಗೆ ಜನಪ್ರತಿನಿಧಿಗಳೇ ಅಂತಹ ಪವಾಡ ಪುರುಷರ ಕಾಲಿಗೆ ಬಿದ್ದು, ಜನತೆಯೂ ಬೀಳಬೇಕೆಂದು ಬಯಸುತ್ತಾರೆ. ಇದು ಮೂಢನಂಬಿಕೆಯ ಅಂಟುಜಾಡ್ಯವಲ್ಲವೇ ? ಮೂಢನಂಬಿಕೆಗಳ ನಿಷೇಧ ಕುರಿತು ಕಾಯಿದೆ ಜಾರಿಗೆ ತರಲು ವಿಧಾನಮಂಡಲದಲ್ಲಿ ಪ್ರಸ್ತಾಪಿಸಿದಾಗ ಚರ್ಚೆಯ ಮೊದಲೇ ವಿರೋಧಿಸಿ ಕಾಯ್ದೆಯ ಬೆಳವಣಿಗೆಯನ್ನು ತಾಳಲಾರದೆ, ಹೆಣಗಾಡುತ್ತಿರುವ ಶಕ್ತಿಗಳು, ಬಡಜನರ ಏಳ್ಗೆಗಾಗಿ ಏನಾದರೂ ಮಾಡಲು ಮುಂದಾದರೆ ಮೈಮೇಲೆ ಚೇಳು ಬಿಟ್ಟುಕೊಂಡಂತೆ ಆಡುತ್ತಿದ್ದಾರೆ. ಇಂತಹ ಗೊಡ್ಡು ಬೆದರಿಕೆಗಳಿಗೆ ಮಣಿಯದೆ ರಾಜ್ಯ ಸರ್ಕಾರ ಎಲ್ಲಾ ಧರ್ಮಗಳ ಆಚರಣೆಯಲ್ಲಿರುವ ಮೂಢನಂಬಿಕೆಗಳನ್ನು ನಿಷೇಧಿಸಬೇಕು.

*ಬೆಂಗಳೂರು* ***ಬಿ. ರಾಜಶೇಖರ ಮೂರ್ತಿ***

Ⓜ ಬೆಳ್ಳಂಬೆಳಗ್ಗೆ ದೂರದರ್ಶನ ಹಾಕಲಿಕ್ಕೆ ಮನಸ್ಸಿಗೇಕೋ ಇರಿಸು ಮುರಿಸು. ಶನಿ, ರಾಹು, ಕೇತುಗಳೆಲ್ಲರನ್ನೂ ಒಮ್ಮೆಲೇ ದರ್ಶನ ಮಾಡಿಸುವ ದೃಶ್ಯ ಮಾಧ್ಯಮಗಳು ಸಾಮಾನ್ಯ ಮನಸ್ಸುಗಳನ್ನು ಚಂಚಲಿತಗೊಳಿಸಿಬಿಡುತ್ತವೆ. ಸಕಾರಾತ್ಮಕ ಮನೋ ವಾಂಛಲ್ಯವನ್ನೆಲ್ಲಾ ಕದಡಿ, ರಾಹುಕಾಲ, ಗುಳಿಕಕಾಲ, ಯಮಗಂಡಕಾಲಗಳು ಹಠಾತ್ತನೇ ದಾಳಿ ಮಾಡಿ ಅಲ್ಲೋಲ-ಕಲ್ಲೋಲ ಮಾಡಿಬಿಡುತ್ತವೆ.

ನೆಮ್ಮದಿ, ಶಾಂತಿಯಿಂದ ಇದ್ದ ಅದೆಷ್ಟೋ ಮನಸ್ಸುಗಳನ್ನು ದಿನಂಪ್ರತಿ ಛಿದ್ರಗೊಳಿಸುತ್ತಿವೆ. ತಮ್ಮ ಭವಿಷ್ಯ ತಾವೇ ಅರಿಯದ ಈ ಅವಿವೇಕಿಗಳು, ಹೊಟ್ಟೆಪಾಡಿಗಾಗಿ ಇನ್ನೊಬ್ಬರ ಜೀವನದ ಮೇಲೆ ಸವಾರಿ ಮಾಡುತ್ತಿರುವುದು ಆಧುನಿಕತೆಯ ದುರಂತವೇ ಸರಿ.

ಬುದ್ಧ, ಬಸವ, ವಿವೇಕಾನಂದರು ಮೌಢ್ಯ, ಜ್ಯೋತಿಷ್ಯಗಳನ್ನು ಧಿಕ್ಕರಿಸಿ ವೈಜ್ಞಾನಿಕ ನೆಲೆಗಟ್ಟಿನಲ್ಲಿ ಅರ್ಥಗೆ ಜೀವನ ನಡೆಸಬೇಕೆಂಬುದನ್ನು ಆದರ್ಶಮಯವಾಗಿ ಮಾಡಿ ತೋರಿಸಿದ್ದಾರೆ.

ಹೊಟ್ಟೆಗೆ ಹಿಟ್ಟಿಲ್ಲದೇ ಬೀದಿಯಲ್ಲಿ ಬುರುಡೆ ಪಂಚಾಂಗ ಹೇಳುವವರನ್ನು ಕರೆತಂದು ಹಣ ಸುರಿದು ಮೂರ್ಖ ಪೆಟ್ಟಿಗೆಗಳ ಮೂಲಕ ಸಮಾಜವನ್ನೇ ಮೂರ್ಖತನದತ್ತ ತಳ್ಳುವ ದೃಶ್ಯ ಮಾಧ್ಯಮಗಳ ಅವಿವೇಕತನಕ್ಕೆ ಏನೆನ್ನಬೇಕೋ ತಿಳಿಯುತ್ತಿಲ್ಲ. ಸಾಮಾನ್ಯರಲ್ಲಿ ಭಯ-ಉತ್ಪಾದನೆ ಮಾಡಿ ಅದರ ಪರಿಹಾರದ ನೆಪವೊಡ್ಡಿ ಸಾವಿರಾರುಗಟ್ಟಲೇ ಹಣ ಸುಲಿಗೆ ಮಾಡುವ ಇಂತಹ ಭಯೋತ್ಪಾದಕರನ್ನು ಸಮಾಜ ಧಿಕ್ಕರಿಸಬೇಕು. ಆದರೆ ಮಾಧ್ಯಮಗಳೇ ಇವರನ್ನು ಪಲ್ಲಂಗದಲ್ಲಿ ಕೂರಿಸಿರುವುದು ದುರದೃಷ್ಟಕರ ಸಂಗತಿ.

ಈ ಸುಳ್ಳುಬಾಕ ಜ್ಯೋತಿಷಿಗಳ ಕುರಿತು ಸ್ವಾಮಿ ವಿವೇಕಾನಂದರು ಒಂದು ಪತ್ರದಲ್ಲಿ ಹೀಗೆ ಹೇಳಿದ್ದಾರೆ.

"...ಎಲ್ಲಾ ಮೂಢನಂಬಿಕೆಗಳನ್ನೂ ಧ್ವಂಸ ಮಾಡಿ, ಧರ್ಮಗುರುಗಳು, ಧರ್ಮಗ್ರಂಥಗಳು, ದೇವತೆಗಳು ಯಾರು ಇಲ್ಲ. ದೇವಸ್ಥಾನಗಳನ್ನು, ಪೂಜಾರಿಗಳನ್ನು, ದೇವತೆಗಳನ್ನು, ಅವತಾರಗಳನ್ನು, ಕೊನೆಗೆ ದೇವರನ್ನೇ ಧ್ವಂಸ ಮಾಡಿ, ನಾನೇ ದೇವರು ಬೇರೇನೂ ಇಲ್ಲ. ತತ್ತ್ವಜ್ಞಾನಿಗಳೇ ಎದ್ದು ನಿಲ್ಲಿ. ಭಯ ಬೇಡ. ದೇವರ ಬಗ್ಗೆ, ಪ್ರಪಂಚದ ಮೌಢ್ಯದ ಬಗ್ಗೆ ಮಾತನಾಡುವುದನ್ನು ನಿಲ್ಲಿಸಿ. ಸತ್ಯವೇ ಗೆಲ್ಲುವುದು. ಎಲ್ಲಾ ಮೌಢ್ಯಗಳೂ ಪೊಳ್ಳು ಕಲ್ಪನೆಗಳು... ದೇವರು ಹುಟ್ಟಿದ್ದು ನನ್ನ ಮನಸ್ಸಿನಲ್ಲಿ... ನಾನೇ ಅವನನ್ನು

ನನ್ನ ಮನಸ್ಸಿನಲ್ಲಿ ಸೃಷ್ಟಿಸಿದೆ... ಎಲ್ಲಾ ಮೂಢನಂಬಿಕೆಗಳನ್ನೂ ತ್ಯಜಿಸಿ"...

ಇನ್ನೊಂದನ್ನು ಗಮನಿಸಬಹುದು. ಈ ಕಪಟಿಗಳು ಕಾವಿ ಧರಿಸಿ, ತ್ಯಾಗಮೂರ್ತಿಗಳಂತೆ ಮಾತನಾಡುವರು. ಹಾಗೆಯೇ ಕೇಜಿಗಟ್ಟಲೇ ಚಿನ್ನ ಧರಿಸಿ ಮೆರೆಯುವ ಇವರು ಯಾರಿಗೆ ಮಾದರಿ? ಬಾಯಲ್ಲಿ ಆಚಾರ, ಮಾಡುವುದು ಅನಾಚಾರ ಎಂಬಂತೆ ಜನತೆಯನ್ನು ಮೋಡಿಯ ಖೆಡ್ಡಾದಲ್ಲಿ ಕೆಡವಿ ಬಂದ ಆದಾಯದಲ್ಲಿ ಝುಮ್ಮೆಂದು ಜೀವನ ಸಾಗಿಸುವ ಇವರನ್ನೇ ದೈವತ್ವದ ಸ್ಥಾನದಲ್ಲಿ ಕೂರಿಸಿ ಮೆರೆಸುತ್ತಿರುವುದು ಬಹು ದೊಡ್ಡ ದುರಂತವೆನ್ನಬಹುದು. ನಮ್ಮ ರಾಷ್ಟ್ರ ಉದ್ಧಾರವಾಗಬೇಕಾದರೆ ಈ ಜ್ಯೋತಿಷ್ಯವನ್ನು ಬುಡಸಮೇತ ಕಿತ್ತೆಸೆದಾಗ ಮಾತ್ರ ಸಾಧ್ಯ.

ಆಲೂರು **ಕೊಟ್ರೇಶ್ ಎಸ್. ಉಪ್ಪಾರ್**

ಹೊಸತು ಪತ್ರಿಕೆಯಲ್ಲಿ ಪ್ರಕಟವಾಗಿರುವ ಏಪ್ರಿಲ್ ತಿಂಗಳ – ಬೆಳ್ಳಿಕೋಲು ಕತೆ (ಶಿವಮೊಗ್ಗ ರಮೇಶ್) ತುಂಬ ಚೆನ್ನಾಗಿದೆ. ಅದರಲ್ಲಿ ಬರುವ 'ನಾಗಸಾನಿ'ಯ ಪಾತ್ರವನ್ನು ನೆನೆದು ಬಹಳ ದುಃಖ ವಾಯಿತು. ಎಷ್ಟೇ ವಿಜ್ಞಾನ ಮುಂದುವರೆದರೂ ಸಾಮಾಜಿಕ ಮೌಲ್ಯಗಳಿಗೆ ಬೆಲೆಯೆ ಇಲ್ಲವೇನು? ಹೆಣ್ಣುಜೀವವನ್ನು ನೋಡುವ ರೀತಿ ಬದಲಾಗಿ, ಯುವತಿಯರಿಗೆ ನೆಮ್ಮದಿ ಜೀವನ ಎಂದು ಬರುವುದೊ ಆ ಭಗವಂತನೇ ಪಾರು ಮಾಡಬೇಕು.

*ಬೆಂಗಳೂರು* **ಕೆ. ಪರಿಮಳ**

*'ಹೊಸತು ಹೊಸತು ತರುತಿದೆ!'*
*ಎಂದರು ಬೇಂದ್ರೆ, ಯುಗಾದಿಯ ಬಗೆಗೆ;*
*'ಹೊಸತು' ಪತ್ರಿಕೆಗೆ ಸದಾ ಯುಗಾದಿ :*
*ಅದರದು ಸವೆಯದ ಹಾದಿ !*

ಮೈಸೂರು **ಸಿ.ಪಿ.ಕೆ.**

ಮೇ ತಿಂಗಳ 'ಹೊಸತು' ಪತ್ರಿಕೆಯಲ್ಲಿ ಪ್ರಕಟವಾಗಿರುವ ನೊಬೆಲ್ ಪ್ರಶಸ್ತಿ ಪುರಸ್ಕೃತ ಗೇಬ್ರಿಯೆಲ್ ಗಾರ್ಸಿಯಾ ಮಾರ್ಕ್ವೆಜ್ ಅವರ ಸಣ್ಣ ಕಥೆ 'ಮಂಗಳವಾರ ಮಧ್ಯಾಹ್ನದ ಲಘುನಿದ್ರೆ' ಓದುಗರ ಮನಕಲಕುವಂತಿದೆ. ಬಡತನದ ಕ್ರೌರ್ಯವನ್ನು ಯಾವ ಕೃತಕತೆಯಿಲ್ಲದೆ ಚಿತ್ರಿಸಿರುವ ರೀತಿ ಬಹಳ ಪರಿಣಾಮಕಾರಿಯಾಗಿದೆ. 'ಅವನು ಬಹಳ ಒಳ್ಳೆಯ ಮನುಷ್ಯನಾಗಿದ್ದ', 'ತಿನ್ನಲು ಗತಿ ಇಲ್ಲದವರಿಂದ ಯಾವಾಗಲೂ ಏನನ್ನೂ ಕದಿಯ ಬೇಡ ಅಂತ ಅವನಿಗೆ ಹೇಳಿದ್ದೆ' ಎಂಬೀ ಮಾತುಗಳಲ್ಲಿ ಉಳ್ಳವರು ಮತ್ತು ಇಲ್ಲದವರ ಮನೋವ್ಯಾಪಾರದಲ್ಲಿನ ವ್ಯತ್ಯಾಸ ಎದ್ದುಕಾಣುತ್ತದೆ. ಬಡತನದ ಬೇಗೆಗಿಂತ ಉರಿಯುವ ಸೂರ್ಯನ ಮಧ್ಯಾಹ್ನದ ಬಿಸಿಲು ಹೆಚ್ಚೇನಲ್ಲ ಎಂದು ತೋರಿಸುವ ತಾಯಿಯ ವರ್ತನೆ ಅವಳನ್ನು ಮೆಚ್ಚಿಕೊಳ್ಳುವಂತೆ ಮಾಡುತ್ತದೆ. ಈ ಕಥೆಯನ್ನು ಓದುವಾಗ ಖಲೀಲ್ ಗಿಬ್ರಾನ್ ಅವರ 'ದಿ ಕ್ರೈ ಆಫ್ ದಿ ಗ್ರೇವ್ಸ್'ನ ಭಾಗ ಒಂದರಲ್ಲಿ ಬರುವ ಕಳ್ಳನೊಬ್ಬನ ಪರಿಸ್ಥಿತಿಯನ್ನು ನೆನಪಿಸುತ್ತದೆ. ಕಾನೂನು ಎಂದರೆ ಏನು? ಸ್ವರ್ಗ ಲೋಕದಿಂದ ಸೂರ್ಯನೊಂದಿಗೆ ಈ ಕಾನೂನು ಭೂಮಿಗೆ ಇಳಿದುದನ್ನು ಯಾರು ನೋಡಿದ್ದಾರೆ? ಯಾವ ಶತಮಾನದಲ್ಲಿ ದೇವತೆಗಳು ಜನಗಳ ಜೊತೆಗೆ ನಡೆದು 'ದುರ್ಬಲರು ಸುಖಜೀವನ ನಡೆಸುವುದನ್ನು ತಡೆಯಿರಿ ಮತ್ತು ಕಾನೂನುಬಾಹಿರ ವ್ಯಕ್ತಿಗಳನ್ನು ನಿಮ್ಮ ಖಡ್ಗದ ಮೊನೆಯಿಂದ ಕೊಲ್ಲಿರಿ ಎಂದು ಹೇಳಿದ್ದಾರೆ' ಎನ್ನುವ ಖಲೀಲ್ ಗಿಬ್ರಾನನ ಮಾತು ಇಲ್ಲಿ ಅನ್ವಯವಾಗುತ್ತದೆ. ಅತ್ಯಂತ ಹೃದಯಸ್ಪರ್ಶಿ ಕಥೆ.

*ಬೆಂಗಳೂರು* **ಸರೋಜ ಕೃಷ್ಣಮೂರ್ತಿ**

ಈ ತಿಂಗಳ ಲೇಖನದ ವಿಚಾರವಾಗಿ, ಲೇಖನ ಬಹಳ ಉಪಯುಕ್ತವಾಗಿ ಮೂಡಿಬಂದಿದೆ. ಕಾಂಗ್ರೆಸ್, ಭಾರತೀಯ ಜನತಾಪಕ್ಷ ಎರಡು ದೇಶದ್ರೋಹಿಗಳೆ. ಕಳೆದ ವರ್ಷಗಳಲ್ಲಿ ಈ ಎರಡು ಪಕ್ಷಗಳು ಅನುಸರಿಸಿದ ಆರ್ಥಿಕ ನೀತಿಗಳು ದೇಶಕ್ಕೆ ಮಾರಕ. ಈ ಎರಡು ಪಕ್ಷಗಳು ಅಂಬಾನಿ ಮತ್ತು ಅದಾನಿಗಳ ಗುಲಾಮರೇ. ದೇಶದ ಶೇಕಡ ೩೩ ಮಹಿಳೆಯರು ಲೋಕಸಭೆಯಲ್ಲಿ ಇರಬೇಕು. ಇದು ಇದುವರೆವಿಗೂ ಸಾಧ್ಯವೇ ಆಗಿಲ್ಲ. ಅದಕ್ಕೆ ಸಂಬಂಧಪಟ್ಟ ಮಸೂದೆ ಶೈತ್ಯಾಗಾರದ ಕಪಾಟಿನಲ್ಲಿ ವರ್ಷಾನುಗಟ್ಟಲೆ ಕೊಳೆಯುತ್ತಾ ಬಿದ್ದಿದೆ.

ಸಿ. ಆರ್. ಕೃಷ್ಣರಾವ್ ಅವರ ಸಂಪಾದಕೀಯ ಲೇಖನದ ವಿಚಾರವಾಗಿ ನಮ್ಮ ದೇಶದ ಅಧೋಗತಿ ಸ್ಥಿತಿಯನ್ನು ಇನ್ನೂ ಹೆಚ್ಚು ಹಾಳಾಗದಂತೆ ತಡೆಯಲು ಮುಂಬರುವ ಸರಕಾರ ಮತ್ತು ರಾಜಕೀಯ ಪಕ್ಷಗಳು ನಿರಂತರವಾಗಿ ಅಡ್ಡಿಪಡಿಸುವುದಕ್ಕೆ ತಡೆಯೊಡ್ಡಬೇಕು. ಹಿಂದಿನ ಸರಕಾರದ ಪಳೆಯುಳಿಕೆ ಸಾಕಾದಷ್ಟಿವೆ. ದಾಂಧಲೆ ಮಾಡುವ ಜನಪ್ರತಿನಿಧಿಗಳನ್ನು ಹಿಂದಕ್ಕೆ ಕರೆಸುವ ಅವಕಾಶವಿರಬೇಕು.

*ಬೆಂಗಳೂರು* **ಕು. ರಾಮಸ್ವಾಮಿ**

ಹೊಸತಿನ ಮೇ ಸಂಚಿಕೆಯಲ್ಲಿ ಹಂಚಿಕೆಗೊಳಿಸಲ್ಪಟ್ಟ ಛಾಯಾಗ್ರಹಣ ಕಲೆಯ ಸರದಾರರೆಂದು ಖ್ಯಾತಿಹೊಂದಿದ ವಿ. ಕೆ. ಮೂರ್ತಿ ಅವರಿಗೆ ಪತ್ರಿಕೆಯಿಂದ ವಿದಾಯತೆಯ ಹಾದಿ ಒದಗಿಸಿದ ವಿಧಾನ ಶಹಬಾಶ್ ಅನ್ನಿಸಿತು. ಅಂತೆಯೇ ಗಾನಕಲಾಶ್ರೀ ಕಲಾವತಿ ಅವಧೂತ್ ಅವರಿಂದ ಸ್ಮರಣೆಗೊಳಿಸಲ್ಪಟ್ಟ ಸಂಗೀತ ಕಲಾನಿಧಿ ಡಾ॥ ಆರ್. ಕೆ. ಶ್ರೀಕಂಠನ್ ಅವರ ನೆನಕೆಗಳು ಬರಿಯ ಹರಕೆ ಸಲ್ಲಿಸಿದ ರೀತಿ ಆಗಿರದೆ ಮೇಲ್ಮಟ್ಟದ್ದಾಗಿ ತೋರಿಬಂತು. ೬೦ರ ದಶಕದಲ್ಲಿ ಕಸ್ತೂರಿ ಮಾಸಪತ್ರಿಕೆಯ ವೃತ್ತಾಂತಗಳಿಗೆ ಸಿದ್ಧಾಂತದ ಗರಿ ನೀಡಿದ ಸಾಹಿತಿ ಯಶವಂತ ಚಿತ್ತಾಲರಿಗೆ ಡಾ॥ ಬಿ. ಎನ್. ಸುಮಿತ್ರಾಬಾಯಿ ಅವರು ನೀಡಿದ ಇನ್ನೊಂದು ಶ್ರದ್ಧಾಂಜಲಿ ಇನ್ನಷ್ಟು ಚಿಂತನೆಗೆ ಮನ ಒಡ್ಡಿಸಿಕೊಂಡಿತು.

ಮುಖಚಿತ್ರದಲ್ಲಿ ಮುಖವರಳಿಸುತ್ತಿರುವ ಮಾರ್ಕ್ವೆಜ್ ಎಂಬ ತತ್ವ ಪ್ರತಿಪಾದಕ ಸಾಹಿತ್ಯಕೃಷಿಕರೆನ್ನಿಸಿದ ಹಾಗೆಯೇ ದೀರ್ಘಾಯುಷಿ ಅನ್ನಿಸಿ ಏಪ್ರಿಲ್ ೧೭ರಂದು ಅಗಲಿದ ಇವರಿಗೆ 'ಹೊಸತು' ವೈ. ಜಿ. ಮುರಳೀಧರನ್ ಅವರ ಮೂಲಕ ನೆನಕೆ ನೀಡಿದೆ. 'ಮಂಗಳವಾರ ಮಧ್ಯಾಹ್ನದ ಲಘು ನಿದ್ರೆ' ಅನ್ನುವ ದಿವಂಗತರ ಕಥೆಯನ್ನು ಯಥಾವತ್ತಾಗಿ ಮತ್ತೊಮ್ಮೆ ಪ್ರಕಟಿಸಿ ಹೊಸತು ಇನ್ನಷ್ಟು ಹೊಸತನದ ಛಾಯೆ ಬೀರಿ ನಿಂತಿದೆ.

*ಕಾಸರಗೋಡು* ***ಕೀರಿಕ್ಕಾಡು ವನಮಾಲಾ ಕೇಶವ ಭಟ್ಟ***

ಯಾವುದೇ ಒಂದು ಚಾರಿತ್ರಿಕ ಘಟನೆಯನ್ನು ವಿವರಿಸುವಾಗ, ಅದು ವಾಸ್ತವಾಂಶಗಳಿಂದ ಕೂಡಿರಬೇಕು ಮತ್ತು ಆಧಾರ ಸಹಿತವಾಗಿರಬೇಕೆಂದು ಭಾವಿಸುತ್ತೇನೆ. ಅದೂ ಅಲ್ಲದೆ ಈ ಘಟನೆಯು ನಮ್ಮ ಕಾಲದಲ್ಲಿಯೇ ನಡೆದದ್ದಾದುರಿಂದ ಹೆಚ್ಚಿನ ಚರ್ಚೆಗೆ ಅವಕಾಶವಿರಬಾರದು.

ಸದರಿ ಲೇಖನದಲ್ಲಿ "...ಚೀಣ ಗಡಿವಿವಾದವನ್ನು ಕೆದಕತೊಡಗಿತು. ಭಾರತದ ಈಶಾನ್ಯದಲ್ಲಿ ಭಾರತ–ಚೀಣ ಗಡಿ ಬ್ರಿಟಿಷರ ಕಾಲದಿಂದಲೂ ಇತ್ಯರ್ಥವಾಗಿರಲಿಲ್ಲ", ಇತ್ಯಾದಿ.

ಆ ಸಮಯದಲ್ಲಿ ಚೀಣದಲ್ಲಿದ್ದುದು ಕಾರ್ಮಿಕರ ನೇತೃತ್ವದ ಸರ್ಕಾರ. ಯಾವುದೇ ಕಾರ್ಮಿಕರ ನೇತೃತ್ವದ ಸರ್ಕಾರ ಯುದ್ಧಾಕಾಂಕ್ಷಿಯಾಗಲಿ, ವಿಸ್ತರಣಾವಾದಿಯಾಗಲಿ ಆಗಿರುವುದಿಲ್ಲ.

ಮೊದಲಿಗೆ ಗಡಿ ವಿವಾದವೇನು ಎನ್ನುವುದನ್ನು ತಿಳಿದುಕೊಳ್ಳಬೇಕು. ಇಂಡಿಯಾ – ಚೀಣ ಗಡಿಯನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು. ನೇಫ಼ಾ; ಈಗಿನ ಅರುಣಾಚಲಪ್ರದೇಶ, ಲಡಕ್, ಮತ್ತು ಅಕ್ಸಾಯಿಚಿನ್, ಉಳಿದಂತೆ ಇಂಡಿಯಾ – ಚೀಣಾ ನಡುವೆ ನೇಪಾಳ ಮತ್ತು ಭೂತಾನ್‌ಗಳಿವೆ.

ಅಕ್ಸಾಯಿಚಿನ್ ಭಾಗವು ಪಾಕಿಸ್ತಾನದ ಅಧೀನದಲ್ಲಿ ಇರುವ ಕಾಶ್ಮೀರದಲ್ಲಿದೆ. ಈ ಭಾಗದಲ್ಲಿ ಚೀಣ ೧೯೬೨ಕ್ಕೆ ಮೊದಲೇ ಒಂದು ಮಿಲಿಟರಿ ಉಪಯೋಗ ಮಾಡಬಹುದಾದಂತಹ ರಸ್ತೆಯನ್ನು ನಿರ್ಮಾಣ ಮಾಡಿತ್ತು. ಈ ವಿಷಯವನ್ನು ಪಾರ್ಲಿಮೆಂಟ್‌ನಲ್ಲಿ ಎತ್ತಲಾಗಿತ್ತು. ಕೆಲವರು ಮಿಲಿಟರಿ ಕಾರ್ಯಾಚರಣೆಯಿಂದ ಚೀಣಾವನ್ನು ನಮ್ಮ ಪ್ರದೇಶದಿಂದ ಓಡಿಸಬೇಕೆಂದು ಒತ್ತಾಯಮಾಡಿದ್ದರು. ಆಗಿನ ರಕ್ಷಣಾ ಮಂತ್ರಿ ಮತ್ತು ನಮ್ಮ ಮೂವರು ದಂಡನಾಯಕರು ಅದನ್ನು ಒಪ್ಪಿರಲಿಲ್ಲ. ಆಗಿನ ಅಮೆರಿಕಾದ ರಾಯಭಾರಿ ಸಹ ಮಿಲಿಟರಿ ಕ್ರಮ ಬೇಡವೆಂದು ಹೇಳಿದ್ದರಂತೆ. ಹೀಗಿದ್ದರೂ ಶ್ರೀ. ನೆಹರು ಕಾಂಗ್ರೆಸ್ಸಿನ ಬಲಪಂಥೀಯರ ಗುಂಪಿಗೆ ಮಣಿದು ಚೀಣಾ ಸೈನ್ಯವನ್ನು ನಮ್ಮ ಪ್ರದೇಶದಿಂದ ಹೊರದಬ್ಬುವಂತೆ ಆಜ್ಞಾಪಿಸಿದರು. ಮುಂದಿನ ಬೆಳವಣಿಗೆಗಳು ಎಲ್ಲರಿಗೂ ತಿಳಿದಿವೆ.

ಎರಡೂ ದೇಶಗಳ ಗಡಿ ವಿವಾದವನ್ನು ಮಾತುಕತೆಯಿಂದ ಬಗೆಹರಿಸಿಕೊಳ್ಳಬಹುದೇ ಹೊರತು ಮಿಲಿಟರಿ ಮಾರ್ಗದಿಂದ ಸಾಧ್ಯವೇ ಇಲ್ಲ. ಈ ಪ್ರಯತ್ನವನ್ನು ಎರಡೂ ದೇಶಗಳು ಮಾಡುತ್ತಿರುವುದು ಸ್ವಾಗತಾರ್ಹ. ಗಡಿ ವಿವಾದ ಬಹುಬೇಗ ಇತ್ಯಾರ್ಥವಾಗಲಿ ಎಂದು ಆಶಿಸೋಣ.

*ಬೆಂಗಳೂರು* **ಟಿ. ಜೆ. ಮರಿಯಪ್ಪ**

# ಮಾತೃಭಾಷಾ ಶಿಕ್ಷಣ ಮಾಧ್ಯಮದ ಬಗ್ಗೆ ಸರ್ವೋಚ್ಚ ನ್ಯಾಯಾಲಯದ ತೀರ್ಪು

## ಮೇ ೬, ೨೦೧೪ ಕರ್ನಾಟಕಕ್ಕೆ ಒಂದು ಕರಾಳ ದಿನ

ಅಂದು ಸರ್ವೋಚ್ಚ ನ್ಯಾಯಾಲಯದ ಪಂಚ ನ್ಯಾಯಮೂರ್ತಿಗಳ ಸಾಂವಿಧಾನಿಕ ಪೀಠ ಕರ್ನಾಟಕ ರಾಜ್ಯ 1994ರಲ್ಲಿ ಮಾಡಿದ್ದ ಪ್ರಾಥಮಿಕ ಶಿಕ್ಷಣ ಮಕ್ಕಳ **ಮಾತೃಭಾಷೆ**ಯಲ್ಲಿಯೇ ದೊರಕಬೇಕೆಂಬ ಆಜ್ಞೆಯನ್ನು ರದ್ದುಪಡಿಸಿ ಕನ್ನಡ ಮತ್ತು ಕರ್ನಾಟಕದ ಮನೆಯ ದೀಪ ತೆಗೆದು (ಆರಿಸಿ) ಕನ್ನಡ ಸರಸ್ವತಿ ಮಂದಿರದ ಕದ ಬಡಿದು ಬಂಡೆ ಆನಿಸಿ ಕನ್ನಡಿಗರ ಬಾಳನ್ನೇ ಗಾಢಾಂಧಕಾರಕ್ಕೆ ತಳ್ಳಲಾಯಿತು.

ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ಅರ್ಥ ಸರ್ಕಾರ ವಿದ್ಯಾರ್ಥಿಗಳ ಶಿಕ್ಷಣ ಮಾಧ್ಯಮವನ್ನು ನಿರ್ಧರಿಸಕೂಡದು. ಯಾವ ಭಾಷೆಯಲ್ಲಿ ಮಕ್ಕಳು ಶಿಕ್ಷಣ ಪಡೆಯಬೇಕೆಂಬುದನ್ನು ಹೆತ್ತವರೇ ನಿರ್ಧರಿಸಬೇಕು. ಸರ್ಕಾರ ಇಂಥ ಭಾಷೆಯಲ್ಲಿಯೇ ಮಕ್ಕಳು ಶಿಕ್ಷಣ ಪಡೆಯಬೇಕೆಂಬುದು ನಿರ್ಧರಿಸುವುದು ಸಂವಿಧಾನಬಾಹಿರ. ಈ ತೀರ್ಮಾನಕ್ಕೆ ಬರಲು ಸರ್ವೋಚ್ಚ ನ್ಯಾಯಾಲಯ ಕೊಟ್ಟ ಕಾರಣ ಏನೆಂದರೆ: ಸಂವಿಧಾನದಲ್ಲಿ ಭಾಷಾ ಅಲ್ಪಸಂಖ್ಯಾತರಿಗೆ ಆರ್ಟಿಕಲ್ 30, 31ರ ಕೆಳಗೆ ಕೊಟ್ಟ ಹಕ್ಕಿಗೆ ಸರ್ಕಾರಿ ಆಜ್ಞೆ ಭಂಗವನ್ನುಂಟುಮಾಡುತ್ತದೆ ಎಂದು. ಇನ್ನೊಂದು ಮಾತಿನಲ್ಲಿ ಹೇಳುವುದಾದರೆ ಕರ್ನಾಟಕದಲ್ಲಿ ಕನ್ನಡ /ಮಾತೃಭಾಷೆ (ತೆಲುಗು, ತಮಿಳು, ಮರಾಠಿ, ಉರ್ದು)ಗಳಲ್ಲಿ ಪ್ರಾಥಮಿಕ ಶಿಕ್ಷಣದ ಭಾಷೆಯನ್ನು ನಿರ್ಧರಿಸಲು ಸರ್ಕಾರಕ್ಕೆ ಅಧಿಕಾರವಿಲ್ಲ. ಈ ನಿರ್ಧಾರಕ್ಕೆ ಬರಲು ಮತ್ತೊಂದು ಕಾರಣ ಆರ್ಟಿಕಲ್ 19(1)(**a**) ಪ್ರಕಾರ ಪ್ರದತ್ತವಾದ ಮಕ್ಕಳ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಸರ್ಕಾರದ ಈ ಆಜ್ಞೆ ಭಂಗವನ್ನುಂಟುಮಾಡುತ್ತದೆ ಎಂಬುದು. ಹಾಗೂ ಆರ್ಟಿಕಲ್ 19(1)(**g**) ಪ್ರಕಾರ ಭಾರತೀಯ ನಾಗರಿಕರಿಗೆ ತಮಗೆ ಬೇಕಾದ ವೃತ್ತಿಯನ್ನು ಕೈಗೊಂಡು ಬದುಕುವ ಹಕ್ಕು ಇದೆ ಎಂಬ ಇನ್ನೊಂದು ಕಾರಣ.

ಸರ್ವೋಚ್ಚ ನ್ಯಾಯಾಲಯದ ಈ ತೀರ್ಪಿನ ಪರಿಣಾಮ ಏನಾಗುತ್ತದೆ ಎಂದರೆ; ಕನ್ನಡ ಮತ್ತು ಕರ್ನಾಟಕದ ಏಕೀಕರಣದ 200 ವರ್ಷಗಳ ಇತಿಹಾಸ ಸರ್ವೋಚ್ಚ ನ್ಯಾಯಾಲಯದ ಪಂಚಪೀಠಾಧಿಪತಿಗಳ ಲೆಕ್ಕಣಿಯ ಐದು ಸಹಿಗಳಿಂದ ಸಂಪೂರ್ಣವಾಗಿ ನಿರ್ನಾಮವಾಗಿ ಹೋಗುತ್ತದೆ. ಈ ಮಾತಿನ ಅರ್ಥ ಕರ್ನಾಟಕ ಏಕೀಕರಣ ಮತ್ತು ಮಾತೃಭಾಷೆಯಲ್ಲಿ ಶಿಕ್ಷಣ ಪಡೆಯಲು ಕನ್ನಡಿಗರು ಮಾಡಿದ ಸುಮಾರು 200 ವರ್ಷಗಳ ಶ್ರಮದ ಫಲ ಅಳಿದುಹೋಗಿದೆ. ಅಂದರೆ ಮತ್ತೆ ಮಾತೃಭಾಷಾ ಶಿಕ್ಷಣದ ವಿಚಾರದಲ್ಲಿ 1826ರಲ್ಲಿ ಸರ್ ಥಾಮಸ್ ಮನ್ರೊ ಪ್ರಾರಂಭಿಸಿದ ಮಾತೃಭಾಷಾ ಶಿಕ್ಷಣ ಮಾಧ್ಯಮದ ಪ್ರಯತ್ನವನ್ನು ಮತ್ತೆ ನಾವು ಇಂದಿನಿಂದ ಪ್ರಾರಂಭಿಸಬೇಕಾಗಿದೆ.

**ಕೋ. ಚೆನ್ನಬಸಪ್ಪ**

ಮಾತೃಭಾಷೆಯಲ್ಲಿ ಶಿಕ್ಷಣ ದೊರೆಯಬೇಕು ಎಂಬುದನ್ನು ಮೊಟ್ಟ ಮೊದಲನೆಯದಾಗಿ ಪ್ರತಿಪಾದಿಸಿದವರು 1800ರಿಂದ ಸುಮಾರು ವರ್ಷ ಕಂಪನಿಯ ಆಡಳಿತ ಕಾಲದಲ್ಲಿ ಬಳ್ಳಾರಿ ಕಲೆಕ್ಟರ್ ಆಗಿದ್ದ ಸರ್ ಥಾಮಸ್ ಮನ್ರೊ. ಕನ್ನಡ ಮಾತನಾಡುವ ಮಕ್ಕಳಿಗೆ ಮುಂಬೈ ಪ್ರಾಂತ್ಯದಲ್ಲಿದ್ದ ಬೆಳಗಾವಿ, ಬಿಜಾಪುರ, ಧಾರವಾಡ ಪ್ರದೇಶಗಳಲ್ಲಿ ಮರಾಠಿಯಲ್ಲಿ ಶಿಕ್ಷಣ ಕೊಡಲಾಗುತ್ತಿತ್ತು. ಇದು ಸಲ್ಲದು ಎಂದು ಸರ್ ಥಾಮಸ್ ಮನ್ರೊ 1826ರಲ್ಲಿ ಈ ಕೆಳಗಿನಂತೆ ಬರೆದಿದ್ದರು :

"ಬಹುಸಂಖ್ಯಾತ ಕನ್ನಡಿಗರ ಆಶೋತ್ತರಗಳನ್ನು ಗಮನಕ್ಕೆ ತಂದುಕೊಳ್ಳಲಾರದೆ ಅಲ್ಪಸಂಖ್ಯಾತರಾದ ಆಗಂತುಕರು ಕೃಷ್ಣಾ ನದಿಯನ್ನು ದಾಟಿ ಬಂದು ನೆಲಸಿ, ಜಹಗೀರುದಾರರಾಗಿ ಜರ್ಬು ಮಾಡಿದವರು. ಈ ಧಾರವಾಡ ಸೀಮೆ ಮತ್ತು ಮದರಾಸಿನ ವಶದಲ್ಲಿ ಇರುವ ಕನ್ನಡದ ಪ್ರದೇಶಗಳಿಗೂ ಬಳ್ಳಾರಿ, ಸೊಂಡ (ಸೊಂಡರು) ಮತ್ತು ಮೈಸೂರು ಸೀಮೆಗಳಿಗೂ ಯಾವ ದೃಷ್ಟಿಯಿಂದಲೂ ವ್ಯತ್ಯಾಸವಿಲ್ಲ. ಆಡುವ ಭಾಷೆ ಕನ್ನಡ. ಸ್ವಾಭಾವಿಕವಾಗಿ ಒಂದೇ ಆಗಿರುವ ಸೀಮೆಗೆ ಸೇರಬೇಕಾದವರನ್ನು ಆ ಸೀಮೆಗೆ ಸೇರಿಸುವುದರಿಂದ ಜನ ಸಂತೋಷಪಡುತ್ತಾರೆ. ಹೀಗೆ ಮಾಡದೆ ಮರಾಠರ ಪ್ರಭಾವ ಬೆಳೆಯುವುದಕ್ಕೆ ಆಸ್ಪದ ಕೊಡುವ ಮತ್ತು ಸ್ವಾಭಾವಿಕವಾದ ನಂಟು ಇಲ್ಲದ ಮುಂಬಯಿ ಪ್ರಾಂತಕ್ಕೆ ಧಾರವಾಡ ಸೀಮೆಯನ್ನು ಸೇರಿಸುವುದು ಯುಕ್ತವಲ್ಲ. ಈ ಒಂದು ಶಾಶ್ವತವಾದ ಏಕೀಕರಣವನ್ನು ಸಾಧಿಸುವುದರಲ್ಲಿ ಒಟ್ಟು ಕನ್ನಡ ಜನರ ಹಿತದೃಷ್ಟಿ ಎದ್ದುಕಾಣುತ್ತದೆ. ತಮ್ಮ ಯೋಗಕ್ಷೇಮಕ್ಕೋಸ್ಕರ ಪುಣೆ, ಮುಂಬಯಿ ನಗರಗಳ ಕಡೆ ನೋಡುವ ಮರಾಠಾ ಸರದಾರರ ಹಿತರಕ್ಷಣೆಗಿಂತ ಈ ಒಟ್ಟು ಜನಹಿತದ ದೃಷ್ಟಿ ಮೇಲ್ಪಟ್ಟದ್ದು". **(ಉದ್ಧೃತ : ಕರ್ನಾಟಕ ಪರಂಪರೆ–II,** ಬೆಂಗಳೂರು. **1970, ಪು. 321 – ಸರ್ ಥಾಮಸ್ ಮನ್ರೊ ಬರೆದ ಮೂರು ಪತ್ರಗಳು – Life of Munro–II, PP. 89–99)**
**(ಕರ್ನಾಟಕ ಏಕೀಕರಣ ಇತಿಹಾಸ,** ಡಾ॥ ಎಚ್. ಎಸ್. ಗೋಪಾಲ ರಾವ್)

ಕರ್ನಾಟಕ ಏಕೀಕರಣ ಬೀಜವನ್ನು ಬಿತ್ತಿದ ಮತ್ತು ಕನ್ನಡ ಮಾತೃಭಾಷೆ ಮಕ್ಕಳಿಗೆ ಕನ್ನಡದಲ್ಲಿ ಶಿಕ್ಷಣವನ್ನು ಕೊಡಬೇಕೆಂದು ಸಾಧಿಸಿದ ಆದಿಗುರು ಸರ್ ಥಾಮಸ್ ಮನ್ರೊ. ಅವರ ಸದುದ್ದೇಶವನ್ನು ಪ್ರಥಮತಃ ಕಾರ್ಯಗತ ಮಾಡಲು ಪ್ರಯತ್ನಿಸಿದವರು ಪ್ರಾತಃಸ್ಮರಣೀಯ ಡೆಪ್ಯೂಟಿ ಚೆನ್ನಬಸಪ್ಪನವರು. ಶಿಕ್ಷಣ ಇಲಾಖೆಯಲ್ಲಿ ನೌಕರರಾಗಿದ್ದಾಗ ಬಹುಪ್ರಯಾಸದಿಂದ ಕನ್ನಡ ಶಾಲೆಗಳನ್ನು ಸ್ಥಾಪಿಸಿದರು. ಕನ್ನಡ ಪಠ್ಯ ಪುಸ್ತಕಗಳನ್ನು ತಾವೇ ಬರೆದು ತಮ್ಮ ಹಣದಿಂದಲೇ ಪುಸ್ತಕಗಳನ್ನು ಅಚ್ಚುಹಾಕಿಸಿ ಕನ್ನಡದ ಏಳಿಗೆಗಾಗಿ ಪ್ರಯತ್ನಿಸಿದರು. ಅವರು ತಮ್ಮ ಅಧಿಕಾರ ವಹಿಸಿಕೊಂಡಾಗ ಜಿಲ್ಲೆಯಲ್ಲಿ

12 ಕನ್ನಡ ಶಾಲೆಗಳಿದ್ದವು. ಆದರೆ ಅವರು ನಿವೃತ್ತರಾಗುವ ಹೊತ್ತಿಗೆ ಕನ್ನಡ ಶಾಲೆಗಳ ಸಂಖ್ಯೆ 341 ಆದವು. ಅವರ ತರುವಾಯ ಉತ್ತರ ಕರ್ನಾಟಕದಲ್ಲಿ ಕನ್ನಡ ನುಡಿಯ ಏಳಿಗೆಗಾಗಿ ದುಡಿದವರು ಪ್ರಾತಃಸ್ಮರಣೀಯರಾದ ಶ್ರೀ ರಾ. ಹ. ದೇಶಪಾಂಡೆಯವರು. 1885ರಲ್ಲಿ ಬೆಳಗಾವಿಯ ಪ್ರೌಢಶಾಲೆಯಲ್ಲಿ ಸಹಾಯಕ ಮುಖ್ಯೋಪಾಧ್ಯಾಯರಾಗಿ ವೃತ್ತಿ ಜೀವನ ಪ್ರಾರಂಭಿಸಿ ಡೆಪ್ಯೂಟಿ ಸೆಕ್ಷನ್ ಅಧಿಕಾರಿಯಾಗಿ ಕನ್ನಡ ಶಾಲೆಗಳ ಸ್ಥಾಪನೆಗಾಗಿ ಅನ್ಯಾದೃಶ ಸೇವೆ ಸಲ್ಲಿಸಿದರು. ಅವರೇ 1890ರ ವೇಳೆಗೆ ಕರ್ನಾಟಕ ವಿದ್ಯಾವರ್ಧಕ ಸಂಘವನ್ನು ವಿಧಿವತ್ತಾಗಿ ಸ್ಥಾಪಿಸಿದರು. ಆ ಪುಣ್ಯಾತ್ಮರು ಕನ್ನಡಕ್ಕಾಗಿ ಮಾಡಿದ ಸೇವೆಯು ಮುಂಬೈ ಕರ್ನಾಟಕದಲ್ಲಿ ಕನ್ನಡವನ್ನು ನೆಲೆ ನಿಲ್ಲುವಂತೆ ಮಾಡಿತು. ಅವರ ಸಹಾಯಕ್ಕಾಗಿ ನಿಂತವರು ಎಷ್ಟೋ ಮಹನೀಯರು ಇದ್ದಾರೆ. ಆ ಕಾಲದಲ್ಲಿಯೇ "ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು" ಗೀತೆಯನ್ನು ಹುಯಿಲಗೋಳ ನಾರಾಯಣರಾಯರು ಬರೆದರು. "ಹಚ್ಚೇವು ಕನ್ನಡದ ದೀಪ" ಎಂದು ಡಿ. ಎಸ್. ಕರ್ಕಿ ಅವರು ಬರೆದರು. ಅಂಥವರ ಪರಿಶ್ರಮದಿಂದ 1956ರಲ್ಲಿ "ಕರ್ನಾಟಕ" ಭೌಗೋಲಿಕವಾಗಿ ಉದಯವಾಯಿತು. "ಹೊತ್ತಿತೋ ಹೊತ್ತಿತೋ ಕನ್ನಡದ ದೀಪ" ಎಂದು ಕಾವ್ಯಾನಂದ (ಸಿದ್ದಯ್ಯ ಪುರಾಣಿಕ)ರು ಹಾಡಿ ಸಂತೋಷಪಟ್ಟರು.

1956ರಲ್ಲಿ ಕರ್ನಾಟಕ ರಾಜ್ಯ ಭೌಗೋಲಿಕವಾಗಿ ಉದಯವಾಯಿತು. 1974ರಲ್ಲಿ ಕನ್ನಡ 'ರಾಜ್ಯ ಭಾಷೆ'ಯಾಗಿ ಶಾಸನವಾಯಿತು. 1994ರಲ್ಲಿ ಕರ್ನಾಟಕ ಸರ್ಕಾರ ಮಾತೃಭಾಷೆಯಲ್ಲಿ ಕನ್ನಡ ಶಿಕ್ಷಣ ಕಲಿಸಲು ಸರ್ಕಾರಿ ಆಜ್ಞೆಯನ್ನು ಹೊರಡಿಸಿತು. ಆದರೆ ಡಿ. ಎಸ್. ಕರ್ಕಿ ಹಚ್ಚಿದ 'ಕನ್ನಡ ದೀಪ' 2014ರಲ್ಲಿ ನಂದಿಹೋಯಿತು. ಇದೇ ಕನ್ನಡಕ್ಕೆ ಬಂದಿರುವ ಆಪತ್ತು.

ಈ ಸಂಕಟದಿಂದ ಪಾರಾಗುವುದು ಹೇಗೆ ಎಂಬುದು ನಮ್ಮ ಮುಂದಿರುವ ಮುಖ್ಯ ಸಮಸ್ಯೆ. ಈ ಪರಿಹಾರ ಕುರಿತು ಚರ್ಚಿಸಿ ಉಪಾಯವನ್ನು ಸೂಚಿಸಲು ದಿನಾಂಕ 09-05-2014ರಂದು ಮುಖ್ಯಮಂತ್ರಿಗಳು ಕನ್ನಡದಲ್ಲಿ ಆಸಕ್ತಿಯುಳ್ಳ ಸಾಹಿತಿಗಳನ್ನು, ವಿದ್ವಾಂಸರನ್ನು, ನ್ಯಾಯವಾದಿಗಳು ಹಾಗೂ ನಿವೃತ್ತ ನ್ಯಾಯಮೂರ್ತಿಗಳು ಸೇರಿದಂತೆ ಅಂದಾಜು 100 ಮಹನೀಯರನ್ನು, ಕನ್ನಡ ಪರ ಸಂಘ-ಸಂಸ್ಥೆಗಳು, ಸಂಘಟನೆಗಳು, ಇತ್ಯಾದಿ ಯವರನ್ನು ಸಭೆಗೆ ಕರೆದಿದ್ದರು. ಆ ಸಂದರ್ಭದಲ್ಲಿ ಉಚ್ಚ ನ್ಯಾಯಾಲಯದ ತೀರ್ಪನ್ನು ಕುರಿತು ನಾನಾ ಸಲಹೆಗಳನ್ನು ಮಾಡಿದರು. ಆ ಸಭೆಯಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಅವಲಂಬಿಸಿ ಸರ್ವೋಚ್ಚ ನ್ಯಾಯಾಲಯದಲ್ಲಿ ಕಾನೂನು ಕ್ರಮ ಕೈಗೊಳ್ಳಲಾಗುವುದೆಂದು ಮರುದಿನ ಸರ್ಕಾರದ ನಿಲುವನ್ನು ಘೋಷಿಸಿದರು.

ಆ ಸಭೆಯಲ್ಲಿ ವ್ಯಕ್ತಪಡಿಸಿದ ಒಂದು ಅಭಿಪ್ರಾಯ, ದಿನಾಂಕ 06-05-2014ರ ತೀರ್ಪನ್ನು ಪುನಃ ಪರಿಶೀಲನೆ (Review) ಮಾಡಲು ಅಥವಾ

## ನವಕರ್ನಾಟಕ ಪ್ರಕಾಶನದ ೬ ಪುಸ್ತಕಗಳ ಲೋಕಾರ್ಪಣೆ

### ೧. ಕತ್ತಲೆಯಿಂದ ಬೆಳಕಿನೆಡೆಗೆ – ಅಂಧಶ್ರದ್ಧೆ ನಿರ್ಮೂಲನೆ ಕುರಿತ ಲೇಖನಗಳು

ಜನರಲ್ಲಿ ಇಂದಿಗೂ ಬೇರೂರಿರುವ ಮೂಢನಂಬಿಕೆಗಳ ಕತ್ತಲನ್ನು ತೊಡೆದುಹಾಕಿ ಜ್ಞಾನದ ಬೆಳಕಿನೆಡೆಗೆ ಕರೆದೊಯ್ಯುವ ಅಪೂರ್ವ ಕೃತಿ
ಮರಾಠಿ ಮೂಲ : ***ಡಾ॥ ನರೇಂದ್ರ ದಾಭೋಲ್ಕರ್***
ಕನ್ನಡಕ್ಕೆ : ***ಪ್ರೊ॥ ಚಂದ್ರಕಾಂತ ಪೋಕಳೆ***

### ೨. ಅಂಧಶ್ರದ್ಧೆ – ಪ್ರಶ್ನೆ ಚಿಹ್ನೆ ಮತ್ತು ಪೂರ್ಣವಿರಾಮ

ಶ್ರದ್ಧೆ ಇರಲಿ, ಅಂಧಶ್ರದ್ಧೆ ಬೇಡ; ನಂಬಿಕೆ ಇರಲಿ, ಮೂಢನಂಬಿಕೆ ಬೇಡ. ನಮ್ಮ ಮಧ್ಯೆ ಗೊಂದಲಗಳೆದ್ದಾಗ ಕೇಳುವ ಪ್ರಶ್ನೆಗಳಿಗೆಲ್ಲ ಸಮಾಧಾನಕರವಾದ ಉತ್ತರಗಳು ಇಲ್ಲಿವೆ
ಮರಾಠಿ ಮೂಲ : ***ಡಾ॥ ನರೇಂದ್ರ ದಾಭೋಲ್ಕರ್, ಪ್ರಾ॥ ಪ. ರಾ. ಆರ್ಡೆ***
ಕನ್ನಡಕ್ಕೆ : ***ಪ್ರೊ॥ ಚಂದ್ರಕಾಂತ ಪೋಕಳೆ***

### ೩. ನಂಬಿಕೆ, ಮೂಢನಂಬಿಕೆ, ವೈಜ್ಞಾನಿಕ ಮನೋವೃತ್ತಿ

ಆಧುನಿಕ ಕಾಲದಲ್ಲೂ ಕೆಲಸಕ್ಕೆ ಬಾರದ, ಅಮೂಲ್ಯ ಸಮಯವನ್ನು ಹಾಳುಮಾಡುವ ಸಮಾಜದ ಮೌಢ್ಯಗಳತ್ತ ಬೆಟ್ಟುಮಾಡಿ ವೈಜ್ಞಾನಿಕ ಮನೋಭಾವ ಬೆಳೆಸಿಕೊಳ್ಳಲು ಹುರಿದುಂಬಿಸುವ ಕೃತಿ
***ಎಂ. ಅಬ್ದುಲ್ ರೆಹಮಾನ್ ಪಾಷ***

### ೪. ಮಹಿಳೆ ಮತ್ತು ಮೌಢ್ಯ

ವಿವಿಧ ರೀತಿಯ ನಂಬಿಕೆಗಳನ್ನು ಮಹಿಳೆಯ ಮೇಲೆ ಹೇರಿ ಆಕೆಯನ್ನು ಹೈರಾಣ ಮಾಡಿ ಇಂದಿಗೂ ಆಚರಿಸಿಕೊಂಡು ಬರುವಂತೆ ಮಾಡಿದ ಅಂಧಶ್ರದ್ಧೆಗಳ ಒಂದು ಹಿನ್ನೋಟ
***ಡಾ॥ ವಸುಂಧರಾ ಭೂಪತಿ***

### ೫. ಸಮಗ್ರ ನಿರೀಶ್ವರವಾದ

ದೇವರಿದ್ದಾನೆಯೇ ಇಲ್ಲವೇ? ಬಹಳ ಗೊಂದಲದ ಮಿಲಿಯನ್ ಡಾಲರ್ ಪ್ರಶ್ನೆ ! ಪರ-ವಿರೋಧದ ನೆಲೆಯಲ್ಲಿ ಜುಗಲಬಂದಿಯಂತೆ ಚರ್ಚಿಸಲಾದ ಈಶ್ವರವಾದಿ-ನಿರೀಶ್ವರವಾದಿಯ ಖಚಿತ ಅಭಿಪ್ರಾಯ
ಮರಾಠಿ ಮೂಲ : ***ಶರದ ಬೇಡೆಕರ***
ಕನ್ನಡಕ್ಕೆ : ***ಪ್ರೊ॥ ಚಂದ್ರಕಾಂತ ಪೋಕಳೆ***

### ೬. ಹಿಂದೂ : ಸವರ್ಣ – ದಲಿತ ಸಂಘರ್ಷ

ಮತೀಯ ಗಲಭೆಗಳನ್ನು ಸೃಷ್ಟಿಸಿ ಸಮಾಜದ ಸ್ವಾಸ್ಥ್ಯ ಕೆಡಿಸುವ, ಗೋಸುಂಬೆ ರಾಜಕಾರಣವನ್ನು ಪರಿಚಯಿಸುವ ಸವರ್ಣ-ದಲಿತ ಸಂಘರ್ಷದ ಹಸಿ-ಬಿಸಿ ಕಥಾನಕ
ಮರಾಠಿ ಮೂಲ : ***ಶರಣಕುಮಾರ ಲಿಂಬಾಳೆ***
ಕನ್ನಡಕ್ಕೆ : ***ಡಾ॥ ಪ್ರಮೀಳಾ ಮಾಧವ್***



ಲೋಕಾರ್ಪಣೆ : **ಡಾ॥ ಜಿ. ರಾಮಕೃಷ್ಣ** ಅವರಿಂದ

ಮುಖ್ಯ ಅತಿಥಿ : **ಮುಕ್ತಾ ದಾಭೋಲ್ಕರ್**

ದಿನಾಂಕ : **ಜೂನ್ ೮, ೨೦೧೪, ಭಾನುವಾರ ಬೆಳಗ್ಗೆ ೧೦ ಗಂಟೆಗೆ**

ಸ್ಥಳ : **'ನಯನ ಸಭಾಂಗಣ', ಜೆ. ಸಿ. ರಸ್ತೆ, ಬೆಂಗಳೂರು**

**ತಮಗೆ ಆದರದ ಸ್ವಾಗತ**













ತೀರ್ಪಿನಲ್ಲಿ ಆಗಿರುವ ದೋಷಗಳನ್ನು ಸರಿಪಡಿಸಲು (Curative Petition) ಸರ್ವೋಚ್ಚ ನ್ಯಾಯಾಲಯ ದಲ್ಲಿಯೇ ಅರ್ಜಿ ಹಾಕಬೇಕೆಂದು ಸೂಚಿಸಲಾಯಿತು. ಅದರ ಪ್ರಕಾರ ಪುನರ್ ಪರಿಶೀಲನೆ / ದೋಷ ನಿವಾರಣ ಅರ್ಜಿಯನ್ನು ದಾಖಲು ಮಾಡುವುದು ಸೂಕ್ತ. ಆ ಅರ್ಜಿಯನ್ನು ದಾಖಲು ಮಾಡುವು ದಕ್ಕಿಂತ ಮುಂಚೆ ಮುಖ್ಯಮಂತ್ರಿಗಳು, ಶಿಕ್ಷಣ ಇಲಾಖಾ ಮಂತ್ರಿಗಳು ಹಾಗೂ ಸರ್ಕಾರದ ಕಾನೂನು ಇಲಾಖೆಯ ಅಧಿಕಾರಿಗಳು, ಅಡ್ವೋಕೇಟ್ ಜನರಲ್ ಮತ್ತು ಸರ್ವೋಚ್ಚ ನ್ಯಾಯಾಲಯ ಮತ್ತು ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿಗಳಲ್ಲಿ ಕೆಲವರೊಡನೆ ಕೂಲಂಕಷವಾಗಿ ಚರ್ಚಿಸುವುದು ಸೂಕ್ತ. ಇವರಲ್ಲದೆ ದೆಹಲಿಯಲ್ಲಿಯೇ ಇರುವ ಸರ್ವೋಚ್ಚ ನ್ಯಾಯಾಲಯದ ಪ್ರಸಿದ್ಧ ನ್ಯಾಯವಾದಿಗಳ ಅಭಿಪ್ರಾಯವನ್ನು ಪಡೆದುಕೊಳ್ಳುವುದು ಯುಕ್ತ. ಅಲ್ಲದೆ ಸರ್ವೋಚ್ಚ ನ್ಯಾಯಾಲಯದ ತೀರ್ಪು ಇಡೀ ಭರತ ಖಂಡಕ್ಕೆ ಅನ್ವಯವಾಗುವುದರಿಂದ ನಮ್ಮ ನೆರೆ ರಾಜ್ಯಗಳು (ತಮಿಳುನಾಡು, ಕೇರಳ, ಆಂಧ್ರಪ್ರದೇಶ, ಮಹಾರಾಷ್ಟ್ರ ಅಲ್ಲದೆ ಒರಿಸ್ಸಾ, ಬಂಗಾಳ ರಾಜ್ಯಗಳ) ಶಿಕ್ಷಣ ಮಂತ್ರಿಗಳ ಮತ್ತು ಶಿಕ್ಷಣ ಇಲಾಖಾ ತಜ್ಞರೊಡನೆ ಸಮಾಲೋಚನೆ ನಡೆಸುವುದು ಉತ್ತಮ. ಸಾಧ್ಯವಾದರೆ ವಿದೇಶಗಳಲ್ಲಿ ಉದಾಹರಣೆಗೆ – ಇಂಗ್ಲೆಂಡ್, ಅಮೇರಿಕಾ, ಜರ್ಮನಿ, ಫ್ರಾನ್ಸ್, ರಷ್ಯಾ, ಚೀನಾ, ಕೆನಡಾ, ಜಪಾನ್ ದೇಶಗಳಲ್ಲಿರುವ ಪ್ರಾಥಮಿಕ ಶಿಕ್ಷಣದ 'ಭಾಷಾನೀತಿ' ಏನೆಂಬುದನ್ನು ತಿಳಿದುಕೊಳ್ಳಬೇಕು. ಅದು ಶೀಘ್ರವಾಗಿಯೇ ಆಗುವ ಕೆಲಸವಲ್ಲವಾದರೂ ಇರುವ ಸ್ವಲ್ಪ ಸಮಯದಲ್ಲಿ ಎಷ್ಟು ಸಾಧ್ಯವೋ ಅಷ್ಟು ಮಾಹಿತಿಯನ್ನು ಸಂಗ್ರಹಿಸುವುದು ಸೂಕ್ತ.

ಸರ್ವೋಚ್ಚ ನ್ಯಾಯಾಲಯದಲ್ಲಿ ಈ ಅರ್ಜಿ ಗಳನ್ನು ದಾಖಲು ಮಾಡಿದ ಮೇಲೆ ಕರ್ನಾಟಕ ರಾಜ್ಯ ಸರ್ಕಾರ ಒಂದು ಆಯೋಗವನ್ನು (Enquiry Commission) ರಚಿಸಿ ಇಂಗ್ಲಿಷ್ ಮಾಧ್ಯಮದಿಂದ ಶಿಕ್ಷಣ ಪಡೆದವರಲ್ಲಿ ಯಾರು, ಎಷ್ಟು ಜನ ಅತ್ಯುನ್ನತ ಸ್ಥಾನವನ್ನು ಪಡೆದಿದ್ದಾರೆ ? ಹಾಗೆಯೇ ಮಾತೃಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣ ಪಡೆದು ಅತ್ಯುನ್ನತ ಸ್ಥಾನವನ್ನು ಪಡೆದವರು ಎಷ್ಟು ಜನರಿದ್ದಾರೆ ? ಇತ್ಯಾದಿ ಮಾಹಿತಿಯನ್ನು ಸಂಗ್ರಹಿಸು ವುದರಿಂದ ಇಂಗ್ಲಿಷ್ ಮಾಧ್ಯಮ ಶಿಕ್ಷಣ ಪಡೆದವರು ಅತ್ಯುನ್ನತ ಸ್ಥಾನ ಪಡೆದಿದ್ದಾರೆ, ಮಾತೃಭಾಷೆಯಲ್ಲಿ ಕಲಿತವರು ಅವರಿಗಿಂತ ಹಿಂದೆ ಬಿದ್ದಿದ್ದಾರೆಯೇ ? ಎಂಬುದು ಗೊತ್ತಾಗುತ್ತದೆ. ಹಾಗೆಯೆ ಮಾತೃಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣ ಪಡೆದು ಇಂಗ್ಲಿಷ್ ಶಿಕ್ಷಣದಲ್ಲಿ ಉನ್ನತ ಪದವಿ ಗೌರವವನ್ನು ಪಡೆದವರು ಎಷ್ಟು ಜನರಿದ್ದಾರೆ ? ಆ ಆಯೋಗ ಯಾವ ಯಾವ ವಿಷಯಗಳ ಬಗ್ಗೆ ಮಾಹಿತಿ ಸಂಗ್ರಹ ಮಾಡಬೇಕೆಂದು ವಿಶದವಾಗಿ ನಿರ್ಧರಿಸಬಹುದು. ಆ ವರದಿಯನ್ನು ಪರಿಶೀಲಿಸಿ ಮಾತೃಭಾಷಾ ಶಿಕ್ಷಣ

## ತೀರ್ಪಿನಲ್ಲಿ ಮೇಲ್ನೋಟಕ್ಕೆ ಎದ್ದುಕಾಣುವ ದೋಷಗಳು

ಸರ್ವೋಚ್ಚ ನ್ಯಾಯಾಲಯದ ದಿನಾಂಕ 06/05/2014ರ ತೀರ್ಪಿನ ಪುನರ್ ಪರಿಶೀಲನೆ ಅಥವಾ ದೋಷ ನಿವಾರಣಾ (Curative Petition) ಅರ್ಜಿಗಳನ್ನು ದಾಖಲು ಮಾಡುವುದೇ ಉಳಿದಿರುವ ದಾರಿ. ಆ ಅರ್ಜಿಗಳನ್ನು ಸರ್ಕಾರವೇ ದಾಖಲು ಮಾಡಬೇಕು. ಸರ್ಕಾರದ ನಿಲುಮೆಯನ್ನು (ಆಜ್ಞೆಯನ್ನು) ಸಮರ್ಥಿಸುವ ಸಂಘ ಸಂಸ್ಥೆಗಳು, ವ್ಯಕ್ತಿಗಳು ದಾಖಲು ಮಾಡಬೇಕು. ದೋಷ ನಿವಾರಣಾ ಅರ್ಜಿಯನ್ನು ದಾಖಲು ಮಾಡ ಬೇಕಾದರೆ ಈಗ ಮಾಡಿರುವ ಆಜ್ಞೆ ಮೇಲ್ನೋಟಕ್ಕೆ ದೋಷಪೂರಿತ ವಾಗಿದೆ ಎಂಬುದನ್ನು ಸರ್ವೋಚ್ಚ ನ್ಯಾಯಾಲಯದ ಗಮನಕ್ಕೆ ತರಬೇಕು. ಮೇಲ್ನೋಟಕ್ಕೇ ಕಾಣುವಂತಹ ದೋಷ ಈ ಆಜ್ಞೆಯಲ್ಲಿ ಏನಿದೆ? 29/04/1994ರ ಆಜ್ಞೆ ಮಾಡುವಾಗ ಸರ್ಕಾರ ಅದಕ್ಕಿಂತಲೂ ಮೊದಲು ಸುಪ್ರೀಂ ಕೋರ್ಟ್ ನ್ಯಾಯಾಲಯ ಅರ್ಜಿ ಸಂಖ್ಯೆ 536/ 91ರ ದಿನಾಂಕ ಡಿಸೆಂಬರ್ 08, 1993ರ ತೀರ್ಪನ್ನು ಗಮನಿಸಿದೆ. ಆ ತೀರ್ಪಿನಲ್ಲಿ ಮಾತೃಭಾಷಾ ಶಿಕ್ಷಣ ಮಾಧ್ಯಮವನ್ನು ವಿಧಿಸುವುದನ್ನು ಸುಪ್ರೀಂ ಕೋರ್ಟ್ ಎತ್ತಿಹಿಡಿದಿದೆ. ಆದರೆ ಆರ್ಟಿಕಲ್ 30, 31ರ ಕೆಳಗೆ ಅಲ್ಪಸಂಖ್ಯಾತರ ಹಕ್ಕುಗಳಿಗೆ ಭಂಗ ಬಾರದಂತೆ ಸರ್ಕಾರ ಆಜ್ಞೆಯನ್ನು ಹೊರಡಿಸಬಹುದೆಂದು ಕರ್ನಾಟಕ ಸರ್ಕಾರಕ್ಕೆ ಸೂಚಿಸಿತ್ತು. ಡಿಸೆಂಬರ್ 08, 1993ರ ಸರ್ವೋಚ್ಚ ನ್ಯಾಯಾಲಯದ ಆಜ್ಞೆಯನ್ನು 6/5/14ರ ಆಜ್ಞೆ ಮಾಡುವಾಗ ಸುಪ್ರೀಂ ಕೋರ್ಟ್ ಸರ್ವೋಚ್ಚ ನ್ಯಾಯಾಲಯ ಗಮನಕ್ಕೆ ತಂದುಕೊಂಡೇ ಇಲ್ಲ. ಹೀಗೆ ಗಮನಿಸದೇ ಇರುವುದರಿಂದ 08/12/1993ರ ಸುಪ್ರೀಂ ಕೋರ್ಟ್ ಆಜ್ಞೆಗೆ ವ್ಯತಿರಿಕ್ತವಾಗಿ ತೀರ್ಪು ಕೊಟ್ಟಿದೆ. ಇದು ಮೇಲ್ನೋಟಕ್ಕೆ ಕಾಣುವ ಪ್ರಥಮ ದೋಷ.

ಎದ್ದು ಕಾಣುವ ಇನ್ನೊಂದು ದೋಷವೆಂದರೆ ಸಂವಿಧಾನದ ಆರ್ಟಿಕಲ್ 51A (k ಹಾಗೂ 350 A) ಸಂವಿಧಾನ ನಿರ್ದೇಶನ ಗಮನಕ್ಕೆ ತೆಗೆದುಕೊಳ್ಳದಿರುವುದು ಹಾಗೂ 2009ರಲ್ಲಿ ಕೇಂದ್ರ ಸರ್ಕಾರ ಮಾಡಿದ ಉಚಿತ ಹಾಗೂ ಕಡ್ಡಾಯ ಶಿಕ್ಷಣದ ಹಕ್ಕು ಕಾಯ್ದೆ ಸೆಕ್ಷನ್ 29 (Clause - f ) ಸಂಪೂರ್ಣವಾಗಿ ಅಲಕ್ಷಿಸಿರುವುದು. ಮೇಲ್ಕಾಣಿಸಿದ ಸಂವಿಧಾನ ಶಾಸನ ಹಾಗೂ 2009ರ ಉಚಿತ ಕಡ್ಡಾಯ ಶಿಕ್ಷಣದ ಕಾಯ್ದೆಯ ವಿಷಯಗಳನ್ನು ಗಮನಿಸದೇ ಇರುವುದು ಈ ಎಲ್ಲ ಸಂವಿಧಾನಾತ್ಮಕ (Constitutional) ಮತ್ತು ಶಾಸನಾನ್ವಯ (Statutory) ಅಂಶಗಳನ್ನು ಉಚ್ಚ ನ್ಯಾಯಾಲಯ ಅಡ್ವೋಕೇಟ್ ಜನರಲ್ ಗಮನಕ್ಕೆ ತಂದಿದ್ದಾರೆ. ರಾಜ್ಯ ಸರ್ಕಾರಗಳು ಮತ್ತು 6–14ರ ವಯೋಮಾನದ ಮಕ್ಕಳಿಗೆ ಮಾತೃಭಾಷೆಯನ್ನು ಉಚಿತವಾಗಿ, ಕಡ್ಡಾಯವಾಗಿ ಕೊಡಬೇಕೆಂಬ ಶಾಸನವನ್ನು ಸರ್ವೋಚ್ಚ ನ್ಯಾಯಾಲಯ ಪರಾಮರ್ಶಿಸಿಲ್ಲ. ಮಾತೃಭಾಷೆ ಮೂಲಕ ಶಿಕ್ಷಣ ಕೊಡಬೇಕೆಂಬುದನ್ನು ತಿರಸ್ಕರಿಸಿಲ್ಲ. ಆದರೆ ಮಾತೃಭಾಷೆ ಎಂಬ ಮಾತಿನ ಅರ್ಥವನ್ನು (Definition) ನಿರ್ವಚಿಸಿದ್ದಾರೆ .

ಮಾತೃಭಾಷೆ ಎಂದರೇನೆಂಬುದನ್ನು ಸರ್ವೋಚ್ಚ ನ್ಯಾಯಾಲಯ ಹೀಗೆ ಅರ್ಥೈಸಿದೆ :

"The Mother tongue is the language with which the child is comfortable with" (Page 36) ಮಾತೃಭಾಷೆ ಎಂಬ ಮಾತು ಎಂಥವರಿಗೂ, ಎಲ್ಲರಿಗೂ ಅರ್ಥವಾಗುವ ಮಾತು. ಮಾತೃಭಾಷೆ ಎಂಬ ಸಂಸ್ಕೃತ ಶಬ್ದಕ್ಕೆ ಕನ್ನಡದಲ್ಲಿ ತಾಯಿನುಡಿ, ಮನೆಮಾತು ಎಂದಾಗುತ್ತದೆ. ತಾಯಿ ಆಡುವ ಮಾತು ಯಾವುದು ? ಅದು ಹುಟ್ಟುವ ಮಕ್ಕಳ ತಾಯಿನುಡಿ. ತಾಯಿನುಡಿ ಮಗುವಿಗೆ ಹುಟ್ಟಿನಿಂದಲೇ ಬರುವ ಆಜನ್ಮಸಿದ್ಧ ಹಕ್ಕು. ಸರ್ವಸಾಧಾರಣ ಜನರನ್ನು ನಿಮ್ಮ ಮನೆಮಾತು, ನಿಮ್ಮ ತಾಯಿನುಡಿ ಏನೆಂದು ಕೇಳಿದಾಗ ಅವರು ಎವೆ ಬಡಿಯದೆ ಕೊಡುವ ಉತ್ತರ ಅವರು ತಾಯಿಯಿಂದ ಕಲಿತ ಮಾತು. ಅದು ಮಾತೃಭಾಷೆ. ಅದನ್ನು ವ್ಯಾಖ್ಯಾನಿಸ ಬೇಕಾದ ಅಗತ್ಯವಿಲ್ಲ. ಅದು ಯಾವ ಸಾಕ್ಷ್ಯಾಧಾರವೂ ಬೇಕಿಲ್ಲದ ಸತ್ಯ (axiomatic truth). ಈ ಸತ್ಯವನ್ನು ಉಚ್ಚ ನ್ಯಾಯಾಲಯ ಗಮನಿಸಿಯೇ ಇಲ್ಲ. ಉಚ್ಚ ನ್ಯಾಯಾಲಯ Mother tongue ಎಂಬ ಮಾತಿನ ಮೇಲ್ಕಂಡ ಅರ್ಥವನ್ನು ಮೇಲ್ಕಾಣಿಸಿದಂತೆ ವಿವರಿಸಿರುವುದು ಇಂಗ್ಲಿಷ್ ಭಾಷೆಯಲ್ಲಿ ಎಲ್ಲಿಯೂ ಸಿಕ್ಕುವುದಿಲ್ಲ. Mother tongue ಎಂಬ ಮಾತಿನ ಅರ್ಥವನ್ನು Chambers Dictionaryಯಲ್ಲಿ Mother tongue = Native language ಎಂದೂ ಅರ್ಥ ಕೊಟ್ಟಿದ್ದಾರೆ. Native ಎಂಬ ಶಬ್ದಕ್ಕೆ ಅದೇ ನಿಘಂಟಿನಲ್ಲಿ Belonging naturally; Innate; Inherent; Natural, Being the place of birth or origin. ಅಂದರೆ Mother tongue ಎಂಬ ಇಂಗ್ಲಿಷ್ ಶಬ್ದದ ಅರ್ಥ ಹುಟ್ಟಿನಿಂದ ಕಲಿತ ಮಾತು. ಹಾಗಾದರೆ ಮಕ್ಕಳು ಹುಟ್ಟಿನಿಂದ ಕಲಿಯುವ ಮಾತಾವುದು ? ಮಾತನಾಡುವುದಕ್ಕೆ ಬರುವುದಕ್ಕಿಂತ ಮುಂಚೆ ಮಗುವು ತೊಟ್ಟಿಲಲ್ಲಿದ್ದಾಗ

ಮಾಧ್ಯಮವೇ ನಮ್ಮ ಅಭ್ಯುದಯಕ್ಕೆ ಏಕಮಾತ್ರ ದಾರಿ' ಎಂಬುದನ್ನು ನಿರ್ಧರಿಸಬಹುದು.

**ಮುಂದೆ ಕೈಗೊಳ್ಳಬೇಕಾದ ಕ್ರಮ**

ಮೇಲೆ ಹೇಳಿದಂತೆ ಪುನರ್‌ಪರಿಶೀಲನಾ ಅರ್ಜಿ / ದೋಷ ನಿವಾರಣ ಅರ್ಜಿಯನ್ನು ಹಾಕಿ ಈಗ ಮಾತೃಭಾಷಾ ಶಿಕ್ಷಣಕ್ಕೆ ಬಂದಿರುವ ತೊಡಕನ್ನು ನಿವಾರಿಸಿಕೊಳ್ಳಲು ಪ್ರಯತ್ನಿಸಬೇಕು. ಆದರೆ ಆ ಅರ್ಜಿಗಳೆಲ್ಲ ಇಚ್ಛಿತ ಫಲ ಸಿಗುತ್ತದೆ ಎನ್ನುವ ನಂಬಿಕೆ ಬಹಳ ಕಡಿಮೆ. ಆದರೂ ಆ ಪ್ರಯತ್ನವನ್ನು ಬಿಡುವಂತಿಲ್ಲ.

ಈ ಕಾನೂನಿನ ಪರಿಹಾರೋಪಾಯದ ಜೊತೆ ಜೊತೆಯಲ್ಲಿಯೇ ಕರ್ನಾಟಕ ಸರ್ಕಾರದ ಮಾತೃಭಾಷೆಯಲ್ಲಿ ಶಿಕ್ಷಣ ಪಡೆಯಬೇಕೆಂಬ ಆಜನ್ಮ ಹಕ್ಕನ್ನು ಈಡೇರಿಸಿಕೊಳ್ಳುವ ಪ್ರಬಲ ಪ್ರಚಂಡ ಪರಿಹಾರೋಪಾಯಗಳನ್ನು ಅನುಸರಿಸಬೇಕಾಗುತ್ತದೆ. ಹಾಗಾದರೆ ಆ ಪರಿಹಾರೋಪಾಯಗಳೇನು ?

ಸರ್ವೋಚ್ಚ ನ್ಯಾಯಾಲಯದಿಂದ ಕನ್ನಡ ಮಾತೃಭಾಷಾ ಶಿಕ್ಷಣಕ್ಕೆ ಬಂದಿರುವ ಕುತ್ತನ್ನು ನಿವಾರಿಸಲು ಕೆಲವರು ಹೇಳುವಂತೆ "ಹೋರಾಟ, ಉಗ್ರಹೋರಾಟ, ಅತ್ಯುಗ್ರ ಹೋರಾಟ" ಎಂಬ ಹೋರಾಟದ ಹೆಜ್ಜೆ ಸಾಧುವಲ್ಲ ಎಂಬುದನ್ನು ನಾವು ತಿಳಿಯಬೇಕು. ಹೋರಾಟ ಎಂದರೆ ಯಾವ ರೂಪದ್ದು ? ಯಾರ ವಿರುದ್ಧವಾಗಿ ? ಏತಕ್ಕಾಗಿ ?

ಸರ್ವೋಚ್ಚ ನ್ಯಾಯಾಲಯದ ತೀರ್ಪಿನಿಂದ ಆಗಿರುವ ಹಾನಿಯನ್ನು ಸರ್ವೋಚ್ಚ ನ್ಯಾಯಾಲಯದ ಮುಂದಾಗಲಿ, ನಮ್ಮ ಉಚ್ಚ ನ್ಯಾಯಾಲಯದ ಮುಂದಾಗಲಿ, ಇಲ್ಲವೇ ನಮ್ಮ ರಾಜ್ಯದ ಎಲ್ಲ ನ್ಯಾಯಾಲಯಗಳ ಮುಂದಾಗಲಿ ಧರಣಿ ಕೂರುವುದರಿಂದ, ಉಪವಾಸ ಮಾಡುವುದರಿಂದ, ಘೋಷಣೆ ಕೂಗುವುದರಿಂದ ಸರ್ವೋಚ್ಚ ನ್ಯಾಯಾಲಯದ ತೀರ್ಪು ಬದಲಾಗದು. ಹೋರಾಟದ ಒತ್ತಾಯದಿಂದ ನ್ಯಾಯಾಲಯ ತನ್ನ ತೀರ್ಪನ್ನು ಹಿಂತೆಗೆದುಕೊಳ್ಳುವುದಿಲ್ಲ. ಈ ಹೋರಾಟ ಕರ್ನಾಟಕ ಸರ್ಕಾರದ ವಿರುದ್ಧವೆ ? ಕರ್ನಾಟಕ ಸರ್ಕಾರವೇನೂ ಕನ್ನಡ ಶಿಕ್ಷಣ ಮಾಧ್ಯಮಕ್ಕೆ ವಿರುದ್ಧವಾಗಿಲ್ಲ. 1994ರ ಸರ್ಕಾರಿ ಆಜ್ಞೆಯನ್ನು ಹೊರಡಿಸಿದಾಗ ಕನ್ನಡದ ಪರವಾಗಿಯೇ ಆಜ್ಞೆ ಹೊರಡಿಸಿತ್ತು. ಅಂದಮೇಲೆ ಕರ್ನಾಟಕ ಸರ್ಕಾರದ ವಿರುದ್ಧವಾಗಿ ಹೋರಾಟ ಮಾಡುವುದು ಎಂದರೆ ಏನು ? ಒಂದು ವೇಳೆ ಹೋರಾಟ ಆಗಲೇಬೇಕೆಂದರೆ, ಹೋರಾಟದ ಸ್ವರೂಪವೇನು ? ಈಗಾಗಲೇ ಒಬ್ಬಿಬ್ಬರು ಹೇಳಿರುವಂತೆ 'ಕರ್ನಾಟಕ ಬಂದ್' ಆಚರಿಸುವುದೆ ? ಕರ್ನಾಟಕದ ಜನಜೀವನ ಅಸ್ತವ್ಯಸ್ತವಾದರೆ ವ್ಯಾಪಾರ ವಹಿವಾಟುಗಳು ಒಂದು ದಿನ ನಿಂತುಹೋದರೆ ಸರ್ವೋಚ್ಚ ನ್ಯಾಯಾಲಯದ ತೀರ್ಪು ಬದಲಾಗುವುದಿಲ್ಲ. ಹಾಗೆಯೇ ಹೆದ್ದಾರಿಗಳಲ್ಲಿ ಅಥವಾ ವೃತ್ತಗಳಲ್ಲಿ ಮಾನವ ಸರಪಳಿಯನ್ನು ನಿರ್ಮಿಸಿ ಸಾಂಕೇತಿಕ ಅಥವಾ ಬೃಹತ್ ಪ್ರಮಾಣದ

ತಾಯಿಯ ಮಾತನ್ನು ಕೇಳುತ್ತದೆ. ತಾಯಿ ಮಾತನಾಡದೆಯೇ ಮಗುವಿಗೆ ಭಾಷೆಯನ್ನು ಕಲಿಸುತ್ತಾಳೆ. ಮಾತನಾಡುವುದಕ್ಕೆ ಆರಂಭಿಸಿದಾಗ ತಾಯಿಯ ಮಾತನ್ನೇ ಮಗು ನೈಸರ್ಗಿಕವಾಗಿ ಕಲಿಯುತ್ತದೆ. ಅದೇ ಮಾತೃಭಾಷೆ. ಇದರಲ್ಲಿ child is comfortable ಎಂಬ ಮಾತಿನ ಅರ್ಥ ಏನಿದೆ ? ಇದು ಮೇಲ್ನೋಟಕ್ಕೆ ಕಾಣುವ ದೋಷ.

ಸರ್ವೋಚ್ಚ ನ್ಯಾಯಾಲಯದ ಎದ್ದುಕಾಣುವ ಮತ್ತೊಂದು ದೋಷ ಎಂದರೆ ಮಗುವಿನ ವಿದ್ಯಾಭ್ಯಾಸದ ಭಾಷೆಯನ್ನು ಹೆತ್ತವರೇ ಆಯ್ಕೆ ಮಾಡಿಕೊಳ್ಳಬೇಕೆಂಬುದು. 6-14ರ ಒಳಗಿರುವ ಮಕ್ಕಳು ಸ್ವತಂತ್ರವಾಗಿ ಯಾವ ನಿರ್ಧಾರವನ್ನೂ ತೆಗೆದುಕೊಳ್ಳಲಾರರು. ಹೆತ್ತವರು ಅಥವಾ ಪಾಲಕರು ಅಥವಾ ನ್ಯಾಯಾಲಯ ನೇಮಿಸಿದ ಗಾರ್ಡಿಯನ್ ಮಾತ್ರ ಮೈನರ್ ಮಕ್ಕಳ ಪರವಾಗಿ ತೀರ್ಮಾನಿಸಬಹುದು. ಆದರೆ ಅವರ ತೀರ್ಮಾನವೇ ಸರ್ವಶ್ರೇಷ್ಠ ಎಂಬುದು ಸರ್ವಥಾ ಸತ್ಯವಲ್ಲ. ಏಕೆಂದರೆ ತಂದೆ ತಾಯಂದಿರು ತಮಗೆ ಇಷ್ಟವಾದ ಭಾಷೆ ಅಥವಾ ಶಿಕ್ಷಣದಲ್ಲಿಯೇ ಆಸಕ್ತಿವುಳ್ಳವರಾಗಿರುತ್ತಾರೆ. ಮಗುವಿಗೆ ಬೇಕಾಗಲಿ, ಬೇಡವಾಗಲಿ ಅವನು/ಅವಳು ಅದು ಬೆಳೆದು ದೊಡ್ಡವರಾಗಿ ಇಂಜಿನಿಯರೋ, ವೈದ್ಯರೋ, ಉನ್ನತ ಉದ್ಯೋಗಿಗಳೋ ಆಗಬೇಕೆಂದು ಇಚ್ಛಿಸಬಹುದು. ಆದರೆ ಮಗುವಿಗೆ ಶಿಕ್ಷಣದಲ್ಲಿ ಆಸಕ್ತಿ ಇರುವುದು ಸಂಗೀತಗಾರನೊ, ಕಲಾರಾಧಕನೋ ಆಗುವ ಲಕ್ಷಣಗಳಿದ್ದರೆ ಅವನಿಗೆ ಬೇಡವಾದ ವೈದ್ಯಕೀಯ, ತಾಂತ್ರಿಕ, ವೈಮಾನಿಕ ಇತ್ಯಾದಿ ವಿದ್ಯೆಯನ್ನು ಕಲಿಯುವ ಆಸಕ್ತಿ ಇರುವುದಿಲ್ಲ. ಅದರಲ್ಲೇ ಅವರು ಪರಿಣತರಾಗುವುದಿಲ್ಲ. ಅಂಥ ಸಂದರ್ಭದಲ್ಲಿ ಮಗುವಿನ ಶಿಕ್ಷಣದ ಹಿತವನ್ನು ಕಾಪಾಡಲಾರರು.

ಹಾಗಾದರೆ ಮಕ್ಕಳ ಶಿಕ್ಷಣದ ಭಾಷಾ ಮಾಧ್ಯಮವನ್ನು ಹೆತ್ತವರು ತೃಪ್ತಿಕರವಾಗಿ ನಿರ್ಧರಿಸಲಾರರು. ಇತ್ತ ಉಚ್ಚ ನ್ಯಾಯಾಲಯ ಹೇಳುವಂತೆ ಸರ್ಕಾರವೂ ನಿರ್ಧರಿಸಕೂಡದು. ಹಾಗಾದರೆ ಆ ಭಾಷಾ ಮಾಧ್ಯಮವನ್ನು ನಿರ್ಧರಿಸುವ ಹಕ್ಕು ಯಾರಿಗಿದೆ ? ಸಂವಿಧಾನಾತ್ಮಕವಾಗಲಿ ಮತ್ತು ೨೦೦೯ರ ಶಾಸನಾನ್ವಯ ಮಕ್ಕಳಿಗೆ ಉಚಿತ ಕಡ್ಡಾಯ ಶಿಕ್ಷಣವನ್ನು ಕೊಡಬೇಕೆಂಬ ಶಾಸನಾನುಸಾರ ಸರ್ಕಾರವೇ ಶಿಕ್ಷಣ ಮಾಧ್ಯಮದ ಭಾಷೆಯನ್ನು ನಿರ್ಧರಿಸುವ ಹಕ್ಕು / ಅಧಿಕಾರವು ಇರಲೇಬೇಕಾಗುತ್ತದೆ. ಆ ನಿರ್ಧಾರವನ್ನು ಕೈಗೊಳ್ಳುವ ಸರ್ಕಾರ ಶಿಕ್ಷಣ ಕ್ಷೇತ್ರದಲ್ಲಿ ಅಗಾಧ ಪಾಂಡಿತ್ಯವನ್ನು ಪಡೆದವರು, ಅನುಭವ ಪಡೆದವರು, ತಜ್ಞರು, ಆಯೋಗಗಳು ಕೊಟ್ಟ ವರದಿಗಳ ಮತ್ತು ದೇಶ ವಿದೇಶಗಳ ಶಿಕ್ಷಣ ಮಾಧ್ಯಮದ ಧೋರಣೆಗಳನ್ನು ಗಮನಿಸಿ ಆಧಾರಸಹಿತವಾಗಿ ಒಂದು ಭಾಷಾ ಮಾಧ್ಯಮವನ್ನು ನಿರ್ಧರಿಸುವ ಆಜ್ಞೆಯನ್ನು ಹೊರಡಿಸಬಹುದು. ಸರ್ಕಾರ ಆ ಧೋರಣೆ (Policy)ಯನ್ನು ಅವಲಂಬಿಸಿದೆ. ಅದರಲ್ಲಿ ತರ್ಕಹೀನವಾದದ್ದು (Unreasonable) ಇಚ್ಛಾನುಸಾರ (Orbitrary) ಹಾಗೂ ಅನುಚಿತವಾದದ್ದು ಏನಿದೆ ? ಹಾಗೂ ಉಚ್ಚ ನ್ಯಾಯಾಲಯವೇ ಸರ್ವೋಚ್ಚ ನ್ಯಾಯಾಲಯವೇ ಒಪ್ಪಿಕೊಂಡಿರುವಂತೆ ಶಿಕ್ಷಣ ತಜ್ಞರು ಶಿಕ್ಷಣ ಕ್ಷೇತ್ರದಲ್ಲಿ ಕೃಷಿ ಮಾಡಿದ ಮಹಾನ್ ವ್ಯಕ್ತಿಗಳ ಮಾತುಗಳನ್ನು ಹಾಗೂ ಶೈಕ್ಷಣಿಕ ವಿದ್ವಾಂಸರ ಅನುಭವಪೂರ್ಣ ಮಾತುಗಳನ್ನು ಒಪ್ಪಿದ್ದಾರೆ. ಆದರೂ ಅವರು ಹೇಳುತ್ತಾರೆ : ಅಲ್ಪಸಂಖ್ಯಾತರ ಹಕ್ಕುಗಳಿಗೆ ಭಾಷಾ ಅಲ್ಪಸಂಖ್ಯಾತರು ಭಾಷಾ ಹಕ್ಕುಗಳಿಗೆ ಭಂಗವನ್ನುಂಟುಮಾಡುತ್ತದೆ ಎಂದು ಹೇಳುತ್ತಾರೆ. ಆದರೆ ಆ ಭಾಷಾ ಅಲ್ಪಸಂಖ್ಯಾತರಿಗೆ ಯಾವ ಹಕ್ಕೂ ಚ್ಯುತಿಯಾಗದಂತೆ ಸರ್ಕಾರ 1994ರ ಆಜ್ಞೆಯನ್ನು ಹೊರಡಿಸಿದೆ. ಆಜ್ಞೆಯ ಅನುಬಂಧ-1ನ್ನು ಗಮನಿಸಿದರೆ ಭಾಷಾ ಅಲ್ಪಸಂಖ್ಯಾತ ಹಕ್ಕುಗಳಿಗೆ ಭಂಗಬಾರದೆಂದೇ ಭಾಷಾ ಮಾಧ್ಯಮದ ಆಯ್ಕೆಯನ್ನು ವಿಧಿಸಲಾಗಿದೆ. ಈ ಅಂಶವನ್ನು ಗಮನಿಸದೇ ಇರುವುದು ಮತ್ತೊಂದು ದೋಷ.

ಕೊನೆಯದಾಗಿ ಸರ್ವೋಚ್ಚ ನ್ಯಾಯಾಲಯದ ತೀರ್ಪಿನಲ್ಲಿ ಎದ್ದುಕಾಣುವ ಮತ್ತೊಂದು ದೋಷವೆಂದರೆ ಸಂವಿಧಾನದ ಆರ್ಟಿಕಲ್ 51A ( k ಹಾಗೂ ಆರ್ಟಿಕಲ್ ೩೫೦ A) ಇವುಗಳ ಪರಿಣಾಮ ಮತ್ತು ೨೦೦೯ರ ಉಚಿತ ಕಡ್ಡಾಯ ಶಿಕ್ಷಣದ ಕಾಯ್ದೆಯ ನಂತರ ಬದಲಾವಣೆಯಾಗಿರುವ ಶಿಕ್ಷಣ ನೀತಿ ಭಾಷಾ ಮಾಧ್ಯಮವನ್ನು ಸರ್ವೋಚ್ಚ ನ್ಯಾಯಾಲಯ ಕೂಲಂಕಷವಾಗಿ ಗಮನಿಸಿಲ್ಲ. ಅವರು ತೀರ್ಪಿನಲ್ಲಿ ಕಾಣಿಸಿರುವ ತೀರ್ಪುಗಳನ್ನೇ ಗಮನದಲ್ಲಿಟ್ಟುಕೊಂಡು ಈ ತೀರ್ಮಾನಕ್ಕೆ ಬಂದಿದ್ದಾರೆ.

೨೦೦೯ನೇ ಉಚಿತ ಕಡ್ಡಾಯ ಶಿಕ್ಷಣ ಕಾಯ್ದೆ ಬರುವುದಕ್ಕಿಂತ ಮುಂಚೆ ಸರ್ವೋಚ್ಚ ನ್ಯಾಯಾಲಯ ತೀರ್ಮಾನಿಸಿದ ತೀರ್ಮಾನಗಳನ್ನು ಗಮನದಲ್ಲಿಟ್ಟುಕೊಂಡು (TMA Pai Foundation ಹಾಗೂ St. Stephens College) ಕೇಸುಗಳನ್ನೇ ಬಹುವಾಗಿ ಅವಲಂಬಿಸಿದ್ದಾರೆ. ೨೦೦೯ರಿಂದೀಚೆಗೆ ಈ ಕ್ಷೇತ್ರದಲ್ಲಿ ಆಗಿರುವ ಶಾಸನಗಳನ್ನು ಅಷ್ಟಾಗಿ ಗಮನಿಸದಿರುವುದು ಮತ್ತೊಂದು ಎದ್ದುಕಾಣುವ ದೋಷ. ಈ ಎಲ್ಲ ದೋಷಗಳನ್ನು ಸರ್ವೋಚ್ಚ ನ್ಯಾಯಾಲಯ ಈಗ ಆಗಿರುವ ತೊಂದರೆಯನ್ನು ನಿವಾರಿಸಿಕೊಳ್ಳಲು ಪ್ರಯತ್ನಿಸುವುದು ಉಚಿತ.

ಪ್ರತಿಭಟನೆಯನ್ನು ಪ್ರದರ್ಶಿಸುವುದೆ ? ಅದರಿಂದಲೂ ಸರ್ವೋಚ್ಚ ನ್ಯಾಯಾಲಯದ ತೀರ್ಪು ಬದಲಾವಣೆಯಾಗದು ! ಹಾಗಾದರೆ ಕನ್ನಡಿಗರು ಏನು ಮಾಡಬೇಕು ? ಅವರ ಕೆಲಸವೂ ಇದೆ. ಅದು ಬೃಹತ್‌ಪ್ರಮಾಣದ ಅಗಾಧ ಕೆಲಸ. ಅದೇನೆಂದರೆ ಇಂಗ್ಲಿಷ್ ಮಾಧ್ಯಮದ ಶಾಲೆಗಳು ತಮಗೆ ತಾವೇ ಮುಚ್ಚಿಹೋಗುವಂಥ ಪರಿಸ್ಥಿತಿಯನ್ನು ಆಂದೋಲನದ ಮೂಲಕ ಪರಿಸ್ಥಿತಿಯನ್ನು ಉಂಟುಮಾಡಬೇಕು. ಈಗ ಕನ್ನಡ ಶಾಲೆಗಳಿಗೆ ಮಕ್ಕಳು ಬರುತ್ತಿಲ್ಲವೆಂದು ಕನ್ನಡ ಶಾಲೆಗಳನ್ನು ಮುಚ್ಚುವಂತೆ, ಇಂಗ್ಲಿಷ್ ಮಾಧ್ಯಮದ ಶಾಲೆಗಳಿಗೂ ಮಕ್ಕಳು ಹೋಗದಂಥ ಸ್ಥಿತಿ ಉಂಟುಮಾಡಬೇಕು. ಅದು ಹೇಗಾಗುತ್ತದೆ ?

ಈಗ ಜನ ಇಂಗ್ಲಿಷಿನ ವ್ಯಾಮೋಹಕ್ಕೆ ಸಿಲುಕಿ ಪ್ರಾಥಮಿಕ ಶಾಲೆಗಳಲ್ಲಿ ಪ್ರವೇಶ ಪಡೆಯಲು ಸಾವಿರಾರು ರೂಪಾಯಿಗಳ ಡೊನೇಷನ್ ಕೊಡಲು ಸಿದ್ಧರಾಗಿದ್ದಾರೆ. ಆ ಇಂಗ್ಲಿಷ್ ವ್ಯಾಮೋಹವನ್ನು ಬಿಡಿಸಬೇಕು. ಅದು ಹೇಗೆ ಸಾಧ್ಯ? ಮೊದಲನೆಯದಾಗಿ ಕನ್ನಡಿಗರು ತಮ್ಮ ಮಕ್ಕಳನ್ನು ಕನ್ನಡ ಮಾಧ್ಯಮ ಶಾಲೆಗಳಿಗೆ ಕಳಿಸುವ ದೃಢಸಂಕಲ್ಪ ಮಾಡಬೇಕು. ಕನ್ನಡ ಮಾಧ್ಯಮದ ಶಾಲೆಗಳಿಗೆ ಮಕ್ಕಳನ್ನು ಕಳುಹಿಸಬೇಕೆಂದು ಹೇಳುವವರು ತಮ್ಮ ಮಕ್ಕಳನ್ನು ಕನ್ನಡ ಮಾಧ್ಯಮದ ಶಾಲೆಗಳಿಗೆ ಕಳಿಸಿ ಸಮಾಜಕ್ಕೆ ಮಾದರಿಯಾಗಬೇಕು. ಅದೇ ಕಾಲಕ್ಕೆ ಇಂಗ್ಲಿಷ್ ಮಾಧ್ಯಮಕ್ಕೆ ಒಲಿದಿರುವ ಜನರ ಮನಸ್ಸನ್ನು ತಿದ್ದಿ, ಇಂಗ್ಲಿಷ್ ಶಾಲೆಗಳಿಗೆ ಮಕ್ಕಳನ್ನು ಕಳಿಸದಂತೆ ಮನವೊಲಿಸಬೇಕು. ಆ ಕೆಲಸ ಸತ್ಯಾಗ್ರಹದ ರೂಪವನ್ನು ತಳೆಯಬಹುದು. ಹಿಂದೆ ಮಹಾತ್ಮ ಗಾಂಧೀಜಿ ಹೂಡಿದ 'ಪಾನನಿರೋಧ' ಸತ್ಯಾಗ್ರಹದ ಕಾಲದಲ್ಲಿ ಮದ್ಯಪಾನ ಪ್ರಿಯರನ್ನು ಕಳ್ಳಂಗಡಿ (ಸಾರಾಯಿ ಅಂಗಡಿ)ಗೆ ಹೋಗದಂತೆ ಅಡ್ಡಗಟ್ಟಿ ನಿಲ್ಲಿಸಿ ಪ್ರಾರ್ಥಿಸಿದಂತೆ ಈಗ ಇಂಗ್ಲಿಷ್ ಮಾಧ್ಯಮವೆಂಬ ಇಂಗ್ಲಿಷ್ ಮಾಧ್ಯಮದ ಮದ್ಯ ಮಾರಾಟದ ಮಳಿಗೆ (ಶಾಲೆ)ಗಳಿಗೆ ಹೋಗದಂತೆ ಪ್ರಾರ್ಥಿಸುವ ಸಾಧನವನ್ನು ಅವಲಂಬಿಸಬೇಕಾಗುತ್ತದೆ. ಅಂಥ ಸತ್ಯಾಗ್ರಹಿಗಳು, ತ್ಯಾಗ ಜೀವಿಗಳು ಕನ್ನಡದ ಉಳಿವಿಗಾಗಿ ಪ್ರಯತ್ನಿಸಬೇಕು. ಇಂಥ ಸತ್ಯಾಗ್ರಹ ವ್ಯಾಪಕವಾಗಿ ನಡೆದು ಕರ್ನಾಟಕದಲ್ಲಿ ಜನ ಅಪಾರ ಕಷ್ಟನಷ್ಟಗಳನ್ನು ಅನುಭವಿಸುವುದು ಕೇಂದ್ರ ಸರ್ಕಾರದ ಗಮನಕ್ಕೂ ಬರುತ್ತದೆ. ಆಗ ಕನ್ನಡ ಶಿಕ್ಷಣ ಮಾಧ್ಯಮಕ್ಕೆ ಅಡ್ಡಿಯಾಗಿರುವ ಸಂವಿಧಾನದ ಭಾಷಾ ಅಲ್ಪಸಂಖ್ಯಾತರಿಗೆ ಕೊಡಲಾಗಿರುವ ವಿಶೇಷ ಸೌಲಭ್ಯಗಳನ್ನು ಕೈಗೊಳ್ಳುವಂತೆ ಸಂವಿಧಾನಕ್ಕೆ ತಿದ್ದುಪಡಿ ತರಲು ಸಾಧ್ಯವಾಗುವುದು. ಆಗ ಸಹಜವಾಗಿ ದೇಶದ ಇತರೆ ರಾಜ್ಯಗಳು ನಮಗೊದಗಿರುವ ಸಂಕಷ್ಟವನ್ನು ಅರಿತು ಸಂವಿಧಾನದ ತಿದ್ದುಪಡಿಗೆ ಬೆಂಬಲ ಕೊಡುವರು. ಮೇಲೆ ಸೂಚಿಸಿರುವ ಸತ್ಯಾಗ್ರಹ ಸಮರಕ್ಕೆ ಸಹಸ್ರಾರು ಸತ್ಯಾಗ್ರಹಿಗಳು ಮುಂದೆ ಬರಬೇಕು. ಈ ರೀತಿ ಅಲ್ಲದೆ 'ಗೋಕಾಕ್ ಚಳವಳಿ'ಯ ಮಾದರಿಯನ್ನು ಅನುಸರಿಸುತ್ತೇವೆ ಎಂದರೆ ಅದೇನು ಅಷ್ಟು ಪರಿಣಾಮಕಾರಿ ಎಂದು ನನಗೆ ಅನಿಸುವುದಿಲ್ಲ.

ಇಂಗ್ಲಿಷ್ ಶಾಲೆಗಳ ವ್ಯಾಮೋಹವನ್ನು ಬಿಡಿಸಲು ಪ್ರಯತ್ನಿಸುವುದಲ್ಲದೆ ಸರ್ಕಾರಿ ಮತ್ತು ಖಾಸಗಿ ಶಾಲೆಗಳ ಗುಣಮಟ್ಟವನ್ನು ಹೆಚ್ಚಿಸಬೇಕು. ಶಿಕ್ಷಣಕ್ಕೆ ಅತ್ಯಗತ್ಯವಾದ ಎಲ್ಲ ಸಲಕರಣೆಗಳನ್ನು, ಸೌಲಭ್ಯಗಳನ್ನು ಸರ್ಕಾರ ಒದಗಿಸಲೇ ಬೇಕೆಂಬುದಾಗಿ 2009ರ ಉಚಿತ ಕಡ್ಡಾಯ ಶಿಕ್ಷಣ ಕಾಯ್ದೆಯಲ್ಲಿ ವಿಧಿಸಲಾಗಿದೆ. ಅದಕ್ಕೆ ಬೇಕಾಗುವ ಅಪಾರ ಹಣವನ್ನು ಸರ್ಕಾರ ಬಜೆಟ್‌ನಲ್ಲಿ ಮಂಜೂರು ಮಾಡಬೇಕು. ಪ್ರಾಥಮಿಕ ಶಿಕ್ಷಣಕ್ಕಿಂತಲೂ ಹೆಚ್ಚು ಹಣವನ್ನು ಉನ್ನತ ಶಿಕ್ಷಣಕ್ಕಾಗಿ ಸರ್ಕಾರ ವೆಚ್ಚ ಮಾಡುತ್ತದೆ. ಪ್ರಾಥಮಿಕ ಶಿಕ್ಷಣದ ಒಬ್ಬ ವಿದ್ಯಾರ್ಥಿಗೆ ವಾರ್ಷಿಕ ತಲಾ 1 ರೂ. ವೆಚ್ಚ ಮಾಡಿದರೆ, ಉನ್ನತ ಶಿಕ್ಷಣವಾದ ವೈದ್ಯಕೀಯ ವಿದ್ಯಾರ್ಥಿ ಶಿಕ್ಷಣಕ್ಕೆ ವಾರ್ಷಿಕ ತಲಾ 1 ಲಕ್ಷಕ್ಕಿಂತಲೂ ಹೆಚ್ಚು ಹಣವನ್ನು ಸರ್ಕಾರ ವೆಚ್ಚ ಮಾಡುತ್ತದೆ. ಇದು ಅತ್ಯಂತ ಅನ್ಯಾಯದ ಧೋರಣೆ. ಇದನ್ನು ಸರ್ಕಾರವೇ ಸರಿಪಡಿಸಬೇಕು.

ಈ ವಿಚಾರವಾಗಿ ಕನ್ನಡದ ರಕ್ಷಣೆಯಲ್ಲಿ ಆಸಕ್ತಿಯುಳ್ಳ ಆಯ್ದ ಕೆಲವು ಜನ, ಕನ್ನಡದ ಹಿತಚಿಂತಕರು, ಶಿಕ್ಷಣದ ಬಗ್ಗೆ ಅಪಾರ ಆಸಕ್ತಿಯುಳ್ಳವರು, ಪ್ರಬುದ್ಧ ಚಿಂತಕರು ಸರ್ಕಾರದ ನಾಯಕತ್ವದಲ್ಲಿ ಒಂದೆಡೆ ಸೇರಿ ಯೋಚನೆ ಮಾಡಿ ಉಚಿತ ತೀರ್ಮಾನವನ್ನು ಕೈಗೊಳ್ಳುವುದು ಸೂಕ್ತ.

**ಕೋ. ಚೆನ್ನಬಸಪ್ಪ**
ನಂ. 127, ವೆಸ್ಟ್ ಆಫ್ ಕಾರ್ಡ್ ರೋಡ್, ರಾಜಾಜಿನಗರ, ಬೆಂಗಳೂರು – 560 086




## ಪ್ರೀತಿಗೊಂದು ಭಾಷ್ಯ

**ಸದ್ದು** ಗದ್ದಲವಿಲ್ಲದೆ
ಇನಿತು ಸೂಚನೆಯೂ ಕೊಡದೆ
ಬಂದಿಳಿದೆ
ನೇರವಾಗಿ ಎದೆಯ ಹೊಸಿಲಿಗೆ
ಮೃದುವಾಗಿ ತಟ್ಟಿ ಕದ ತೆರೆದು
ಒಳಕ್ಕೆ ಬಂದೇ ಬಿಟ್ಟೆ
ಯಾವ ಮುಲಾಜೂ ಇರದ
ಮಗುವಿನಂತೆ.

ನಿನ್ನ ಮಾತಿನ ನಾದಕ್ಕೆ
ತಬ್ಬಿಬ್ಬು
ದಂಗು ಬಡಿಯುವಷ್ಟು ಬೆರಗು
ಮೌನಕ್ಕೆ.

ಅರಳಿದ್ದೆಷ್ಟೋ ಕನಲಿದೆಷ್ಟೋ
ಕೊಟ್ಟಿದ್ದೆಷ್ಟೋ ದಕ್ಕಿದ್ದೆಷ್ಟೋ
ಬಿಡದೇ ಸುರಿದ ಮಾತು–ಮೌನದ
ರಾಗದೊಳಗೆ.

ಮಿಂಚಂತೆ ಮಿಂಚಿ
ಬೆಚ್ಚಗೆ ಭಾವವನ್ನೆಲ್ಲಾ ಬಿಚ್ಚಿ
ತಣ್ಣಗೆ ಎದ್ದು ಹೊರಟಾಗ
ಮಾತ್ರ ಎದೆಯೊಳಗೊಂದು
ದೊಡ್ಡ ಕೋಲಾಹಲ.

ನೆಲ–ಮುಗಿಲು ಎಂದಿಗೂ
ಸಂಧಿಸುವುದಿಲ್ಲ
ಎಲ್ಲರಿಗೂ ತಿಳಿದ ಸತ್ಯ.

ಆದರೂ... ನೆಲ
ಕನವರಿಸುತ್ತಲೇ ಇದೆ
ಬಾನ ಪ್ರೀತಿ ಹನಿಯುತ್ತಲೇ ಇದೆ
ಯಾವ ಎಲ್ಲೆಯನ್ನೂ ಮೀರದೆ

ನಡುವೆ ಹುಟ್ಟಿಕೊಂಡ ಹಸಿರು
ಚಿಗುರು ಕನಸು
ನೇಯುತ್ತಲೇ ಇದೆ
ನೈಜ್ಯ ಪ್ರೀತಿಗೊಂದು ಭಾಷ್ಯ.

**ಶ್ರೀ ಅನ್ಸೂರಾಜ್ ಸಂಪಾಜೆ**
'ಹಸಿರು', ಬಾಲಂಬಿ ಅಂಚೆ, ಚೆಂಬು ಗ್ರಾಮ
ಮಡಿಕೇರಿ ತಾಲೂಕು ಕೊಡಗು – ೫೭೧ ೨೧೪



# ಋಗ್ವೇದ ಪ್ರವೇಶಿಕೆ
# ಐತಿಹ್ಯ ಮತ್ತು ವಾಸ್ತವ

ಋಗ್ವೇದದ ಅನೇಕ ಭಾಗಗಳಲ್ಲಿ ಈ ಲೋಕದ ವಿಸ್ಮಯಗಳನ್ನು ದಾಖಲಿಸಿ ಅದರಲ್ಲಿನ ಅನುಲ್ಲಂಘನೀಯ ಸತ್ಯಗಳನ್ನು ವಿಶೇಷವಾಗಿ ಶ್ಲಾಘಿಸಲಾಗಿದೆ. 'ಋತ'ದ ಪರಿಕಲ್ಪನೆಯಲ್ಲಿ ನಾವಿದನ್ನು ಗಮನಿಸಿದ್ದೇವೆ. ಸೂರ್ಯನನ್ನು ಉದ್ದೇಶಿಸಿ ರಚಿಸಲಾದ ಒಂದು ಸೂಕ್ತದಲ್ಲಿ (೧೦.೩೭) ಇದನ್ನು ಪುನರುಚ್ಚರಿಸಲಾಗಿದೆ : "ನನ್ನ ಸತ್ಯೋಕ್ತಿಯು ಸರ್ವತ್ರ ಮತ್ತು ಸರ್ವವಿಧಗಳಲ್ಲಿ ನನ್ನನ್ನು ರಕ್ಷಿಸಲಿ. ಜಗತ್ತಿನ ನಿರಂತರ ಚಲನೆಯು ಈ ಸತ್ಯೋಕ್ತಿಯ ಹೂರಣ. ಆ ಸತ್ಯೋಕ್ತಿಯಿಂದಾಗಿಯೇ ದ್ಯಾವಾ-ಪೃಥಿವಿಗಳು, ಬೆಳಗ್ಗೆ-ರಾತ್ರಿಗಳು, ಅವಲಂಬನ ಹೊಂದಿವೆ. ವಿಶ್ವದಲ್ಲಿ ಭೂತವಸ್ತುಗಳು ಯಾವುವೂ ಸ್ಥಗಿತವಾಗವು; ಆದ್ದರಿಂದಲೇ ಎಲ್ಲವೂ ಕಂಪಿಸುತ್ತವೆ, ಹರಿಯುತ್ತವೆ ಮತ್ತು ಪ್ರತಿದಿನ ಸೂರ್ಯೋದಯವಾಗುತ್ತದೆ" (೧೦.೩೭.೨ : ಸಾ ಮಾ ಸತ್ಯೋಕ್ತಿಃ ಪರಿ ಪಾತು ವಿಶ್ವತಃ ದ್ಯಾವಾ ಚ ಯತ್ರ ತತನನ್ ಅಹಾನಿ ಚ । ವಿಶ್ವಮನ್ಯತ್ ನಿ ವಿಶತೇ ಯದೇಜತಿ ವಿಶ್ವಾಹಾ ಆಪಃ ವಿಶ್ವಾಹಾ ಉದೇತಿ ಸೂರ್ಯಃ ॥). ಸವಿತೃ, ಮಿತ್ರ, ಪೂಷನ್, ಸೂರ್ಯ, ಇವೆಲ್ಲಾ ಒಂದೇ ದೇವತೆಯ ಬೇರೆ ಬೇರೆ ಹೆಸರುಗಳು. ಇವರನ್ನೆಲ್ಲ ಒಟ್ಟಾಗಿ ಮುಂದೆ ಪರಿಚಯಿಸಿಕೊಳ್ಳೋಣ. ಇವರಿಂದ ಭಿನ್ನಳಾದ ಒಬ್ಬ ದೇವತೆ ಸೂರ್ಯಾ. ಸಂಪ್ರದಾಯದಂತೆ ಅವಳು ಸವಿತೃವಿನ ಮಗಳು. ಋಗ್ವೇದದಲ್ಲಿ ಅವಳನ್ನು ಕುರಿತಂತೆ ೪೭ ಮಂತ್ರಗಳನ್ನುಳ್ಳ ಸೂಕ್ತವೊಂದಿದೆ (೧೦.೮೫). ಒಂದು ರೀತಿಯಲ್ಲಿ ಅದೊಂದು ಸಂಕೀರ್ಣವಾದ ಸೂಕ್ತ : ಆರಂಭದಲ್ಲಿ ಸೂರ್ಯಾ ಇಲ್ಲವೇ ಇಲ್ಲ; ಬದಲಾಗಿ ಸೋಮನನ್ನು ಕುರಿತ ಐದು ಮಂತ್ರಗಳಿವೆ. ಅವನನ್ನು ಸೂರ್ಯಾ ಸ್ತುತಿಸುತ್ತಿದ್ದಾಳೆಂದು ಭಾವಿಸಿಕೊಳ್ಳಬಹುದು. ಇದರ ನಂತರದ ಮಂತ್ರಗಳು ಇಂದಿಗೂ ಮದುವೆಯ ಸಂದರ್ಭದಲ್ಲಿ ಬಹುವಾಗಿ ಬಳಸಲ್ಪಡುತ್ತಿವೆ. ಯಾವ ವರ್ಣದವರ ಮದುವೆಯೆಂಬುದನ್ನು ಆಧರಿಸಿ ನಮ್ಮ ಬುದ್ಧಿವಂತ ಪುರೋಹಿತರು ಮಂತ್ರಗಳ ಸಂಖ್ಯೆಯನ್ನು ಸೂಕ್ತವಾಗಿ ಬದಲಾಯಿಸಿಕೊಳ್ಳುತ್ತಾರೆಂದು ತೋರುತ್ತದೆ. ಮದುವೆಯಾಗುತ್ತಿರುವವರಿಗೆ ಆ ಮಂತ್ರಗಳು ಸೂರ್ಯಾ ಸೂಕ್ತದವೆಂದು ತಿಳಿದಿರುವುದು ವಿರಳ; ಮಂತ್ರಗಳನ್ನು ಉಚ್ಚರಿಸುವವರಿಗೂ ಅಷ್ಟೆ. ಆ ಸೂಕ್ತವನ್ನು ಪ್ರಕೃತ ಮಾಲಿಕೆಯ ಹನ್ನೆರಡನೆಯ ಈ ಕಂತಿನಲ್ಲಿ ಪರಿಚಯಿಸಿಕೊಳ್ಳೋಣ. ಪ್ರತಿಯೊಂದು ಮಂತ್ರವನ್ನೂ ಪ್ರತ್ಯೇಕವಾಗಿ ಗ್ರಹಿಸುತ್ತಾ ಹೋಗುವುದು ಅದಕ್ಕೆ ಸೂಕ್ತ ಕ್ರಮ.

— ಜಿ. ರಾಮಕೃಷ್ಣ

ಬುಡಕಟ್ಟು ಜೀವನದಿಂದ ಹೊರಗೆಬಂದ ಋಗ್ವೇದದ ಜನಸಮುದಾಯದಲ್ಲಿ ಮದುವೆಯು ಒಂದು ವಿಶಿಷ್ಟ ಆಚರಣೆಯಾಗಿ ಬೆಳೆದಿದ್ದಿರಬೇಕು. ಬುಡಕಟ್ಟಿನ ಅಂದಿನ ವ್ಯವಸ್ಥೆಯಲ್ಲಿ ಮದುವೆಯ ಸಮಾರಂಭವು ಹೇಗೆ ಆಚರಿಸಲ್ಪಡುತ್ತಿದ್ದಿತೆಂಬುದರ ಸೂಚನೆಯು ಋಗ್ವೇದದಲ್ಲಿ ದೊರೆಯುವುದಿಲ್ಲ. ಋಗ್ವೇದದ ಅಂತಿಮ ಹಂತಕ್ಕೆ ಸೇರಿದ ಹತ್ತನೆಯ ಮಂಡಲದಲ್ಲಿ ವಿವಾಹಕ್ಕೆ ಸಿದ್ಧಳಾಗಿರುವ ಕನ್ಯೆ ಇದ್ದಾಳೆ ಮತ್ತು ಅವಳ ಪ್ರಸ್ತಾಪವು ೮೫ನೆಯ ಸೂಕ್ತದಲ್ಲಿ ಬಂದಿದೆ. ಅವಳು ಸೂರ್ಯಾ. ಅವಳನ್ನು ಸವಿತೃವಿನ ಮಗಳೆಂದು ಗುರುತಿಸುತ್ತಾರೆ. ಅವಳ ಮದುವೆಯಲ್ಲಿ ವಿಶೇಷವೇನೆಂದರೆ ಅವಳನ್ನು ಮೆರವಣಿಗೆಯಲ್ಲಿ ಕರೆದೊಯ್ಯುತ್ತಾರೆ, ಮೆರವಣಿಗೆಯನ್ನು ಹಾದಿಯುದ್ದಕ್ಕೂ ವೀಕ್ಷಿಸುವ ಜನರಿದ್ದಾರೆ, ಅವಳಿಗೆ ಶುಭ ಕೋರಬೇಕೆಂದು ಪೂಷನ್ ಮುಂತಾದ ದೇವತೆಗಳಿಗೆ ಮೊರೆಯಿಡುತ್ತಾರೆ ಮತ್ತು ಆಶೀರ್ವಚನದಿಂದ ಅವಳನ್ನು ಗಂಡನ ಮನೆಗೆ ಮುಟ್ಟಿಸುತ್ತಾರೆ. ಅವಳು ಸವಿತೃವಿನ ಮಗಳಾದ್ದರಿಂದ ಅವಳನ್ನು ಉಷೋದೇವತೆಯೆಂದು ಸಹ ತಿಳಿಯಬಹುದು. ಮದುವೆಯ ಕಟ್ಟಳೆಯು ನಿಯಮಿತವಾದೊಂದು ಸಾಮಾಜಿಕ ಚರ್ಯೆಯ ಭಾಗ ಎಂಬುದನ್ನು ಸೂಚ್ಯವಾಗಿ ಮೊದಲನೆಯ ಮಂತ್ರದಲ್ಲೇ ಹೇಳಲಾಗಿದೆ. ಪ್ರಕೃತಿ ಶಕ್ತಿಗಳು ಒಂದಕ್ಕೊಂದು ಆಧಾರವಾಗಿ ಮತ್ತು ಪೂರಕವಾಗಿ ಕ್ರಿಯೆಯಲ್ಲಿ ತೊಡಗುವಂತೆ ಸಮಾಜದ ಶಕ್ತಿಗಳು ಸಹ ನಿಯಮಿತ ರೀತಿಯಲ್ಲಿ ಹಾಸುಹೊಕ್ಕಾಗಿ









ಬೆರೆಯಬೇಕು. ವಿವಾಹ ಸಂಸ್ಥೆಯು ಅಂತಹ ಬೆರೆಯುವಿಕೆಗೆ ಒಂದು ಸಾಧನ. ಇಡೀ ಸೂಕ್ತದಲ್ಲಿ ಸಡಗರದ ವಾತಾವರಣ, ಶುಭೇಚ್ಛೆಗಳ ಸುರಿಮಳೆ, ಮಂಗಳಕರ ಜೀವನ ಮತ್ತು ಸಾಮರಸ್ಯದ ಹೊನಲು, ಎಲ್ಲವನ್ನೂ ಪ್ರತಿಫಲಿಸಲಾಗಿದೆ. ವಿವಾಹವು ಇಬ್ಬರು ವ್ಯಕ್ತಿಗಳಿಗೆ ಸಂಬಂಧಿಸಿದ್ದಾದರೂ ಅದನ್ನು ವಿಜೃಂಭಿಸಿ ಸಂಭ್ರಮಿಸುವವರು ಹಲವರು. ಇಂತಹ ಉತ್ಸಾಹ–ಉಲ್ಲಾಸಗಳ ಛಾಯೆಯನ್ನು ನಾವು ಸೂರ್ಯಾಸೂಕ್ತದಲ್ಲಿ ಕಾಣುತ್ತೇವೆ. ಸೂರ್ಯಾ ಇಲ್ಲಿ ಪ್ರಾತಿನಿಧಿಕವಾಗಿ ಒಬ್ಬ ಮಾದರಿ ಮದುವೆಯ ಹೆಣ್ಣು.

ಸೂಕ್ತದ ಮೊದಲ ಐದು ಮಂತ್ರಗಳು ಸೋಮನನ್ನು ಕುರಿತಾದುವಾಗಿವೆ. 'ಸೋಮ' ಎಂದರೆ ಋಗ್ವೇದದಲ್ಲಿ ಸೋಮರಸವೆಂಬುದೇ ಪ್ರಮುಖವಾಗಿ ಅರ್ಥ. "ಅಪಾಮ ಸೋಮಂ ಅಮೃತಾ ಅಭೂಮ" (೮.೪೮.೩:ಸೋಮರಸವನ್ನು ಪಾನ ಮಾಡಿ ನಾವು ದೀರ್ಘಾಯುಗಳಾಗುತ್ತೇವೆ), "ಸ್ವಾದಿಷ್ಠಯಾ ಮದಿಷ್ಠಯಾ ಪವಸ್ವ ಸೋಮ ಧಾರಯಾ" (೯.೧.೧:ಹೇ ಸೋಮ, ನೀನು ಮಧುರವೂ ಮದಕಾರಕವೂ ಆಗಿ ಹರಿ), "ಅಭಿ ತ್ಯಂ ಮದ್ಯಂ ಮದಂ ಇಂದೋ ಇಂದ್ರ ಇತಿಕ್ಷರ" (೯.೬.೨: ನೀನು ಮದಕರವಾದ ರಸವನ್ನು ಹರಿಸು), ಮುಂತಾದ ನೂರಾರು ಹೇಳಿಕೆಗಳನ್ನು ನಾವು ಋಗ್ವೇದದಲ್ಲಿ ಕಾಣುತ್ತೇವೆ. ಋಗ್ವೇದದ ಒಂಭತ್ತನೆಯ ಮಂಡಲದ ೧೧೪ ಸೂಕ್ತಗಳೂ ಸೋಮವನ್ನು ಕುರಿತಾದವೇ ಆಗಿವೆ. ಆದಾಗ್ಯೂ 'ಸೋಮ' ಎಂದರೆ ಚಂದ್ರನೆಂಬ ಅರ್ಥವೂ ಇದೆ. ಸೂಕ್ತದ ಮೊದಲ ಮಂತ್ರವು ಧಾರಕಶಕ್ತಿಗಳನ್ನು ಪ್ರಸ್ತಾಪಿಸಿದೆ; ಬಹುಶಃ ವಿವಾಹವು ಒಂದು ಧಾರಕಶಕ್ತಿಯಾಗಿ ಪತ್ನಿ ಮತ್ತು ಪತಿಯನ್ನು ಒಗ್ಗೂಡಿಸಬೇಕೆಂಬ ಆಶಯವು ಇಲ್ಲಿ ವ್ಯಕ್ತವಾಗಿದೆ. ಭೂಮಿಯ ಆಧಾರವೇನು ಅಥವಾ ಭೂಮಿಯ ಧಾರಕ ಶಕ್ತಿ ಯಾವುದು ? ಋತವೆಂಬ ಪ್ರಕೃತಿ ನಿಯಮವೇ ಅದರ ಧಾರಕ ಶಕ್ತಿ. ಋತವನ್ನು 'ಸತ್ಯ' ಎಂದೂ ಕರೆಯಲಾಗುತ್ತದೆ. ಅಲ್ಲಿಯ ಪ್ರತಿಯೊಂದು ಕ್ರಿಯೆಯಲ್ಲೂ ನಿರ್ದಿಷ್ಟವಾದ ಚಲನೆ ಇದೆ, ನಿಯಮವಿದೆ. ಅದಿಲ್ಲದಿದ್ದರೆ ಪ್ರಕೃತಿಯು ಅಸ್ತವ್ಯಸ್ತವಾಗಿಬಿಟ್ಟೀತು. ಅಂದರೆ, ಅದರ ನಿಯಮವು ಸ್ಥಿರವಾದ್ದು. "ಭೂಮಿಯು ಸತ್ಯದಿಂದ ಎತ್ತಿಹಿಡಿಯಲ್ಪಟ್ಟಿದೆ, ಸೂರ್ಯನಿಂದ ದ್ಯುಲೋಕವು ಎತ್ತಿಹಿಡಿಯಲ್ಪಟ್ಟಿದೆ. ಸೂರ್ಯನ ಸ್ಥಿರತ್ವವು ಋತದ ನಮೂನೆಯಾಗಿದೆ ಮತ್ತು ಸೋಮನು ದ್ಯುಲೋಕದಲ್ಲಿ ಸ್ಥಾಪಿಸಲ್ಪಟ್ಟಿದ್ದಾನೆ" (೧೦.೮೫.೧:ಸತ್ಯೇನ ಉತ್ತಭಿತಾ ಭೂಮಿಃ ಸೂರ್ಯೇಣ ಉತ್ತಭಿತಾ ದ್ಯೌಃ। ಋತೇನ ಆದಿತ್ಯಾಃ ತಿಷ್ಠಂತಿ ದಿವಿ ಸೋಮೋ ಅಧಿ ಶ್ರಿತಃ॥ – ಇಲ್ಲಿ 'ಸೋಮ' ಎಂಬುದನ್ನು ಚಂದ್ರನೆಂಬ ಅರ್ಥದಲ್ಲಿ ತೆಗೆದುಕೊಳ್ಳಲಾಗಿದೆ. ಪರ್ಯಾಯವಾಗಿ ಅದನ್ನು 'ಸೋಮಲತೆ' ಎಂಬರ್ಥದಲ್ಲಿ ತೆಗೆದುಕೊಂಡರೆ ಸೋಮರಸದ ಮೂಲಸ್ಥಾನವು ದ್ಯುಲೋಕವೆಂದು ಹೇಳಿದಂತಾಗುತ್ತದೆ.)

ಸೂರ್ಯಾಳ ಮದುವೆಯ ಸಂದರ್ಭದಲ್ಲಿ ಸೋಮನನ್ನು ಸ್ತುತಿಸುವುದು ಮತ್ತು ಅನುಲ್ಲಂಘನೀಯ ನಿಯಮಗಳನ್ನು ನೆನೆಯುವುದು, ಎರಡೂ ಅರ್ಥಪೂರ್ಣ : ಕಾಂತಿದಾಯಕ ಜೀವನದ ಸಂಕೇತ ಚಂದ್ರ ಮತ್ತು ಮದುವೆಯ ಕಟ್ಟುಪಾಡುಗಳು ಪ್ರಕೃತಿ ನಿಯಮದ ಒಂದು ಅಂಗ ಎಂದು ಸೂಚಿಸಿದಂತಾಗುತ್ತದೆ. ಮುಂದಿನ ನಾಲ್ಕು ಮಂತ್ರಗಳು ಸಹ ಸೋಮನನ್ನು ಕುರಿತವೇ ಆಗಿವೆ. ಮದುವೆಯ ಸಂದರ್ಭದಲ್ಲಿ ನೆನೆಯಲಾದ ಸೋಮನ ಅತಿಶಯ ಗುಣ ಮತ್ತು ಮಹತ್ವವನ್ನು ಅವು ಸಾರಿ ಹೇಳುತ್ತವೆ. "ಸೋಮನಿಂದಾಗಿ ಆದಿತ್ಯರು ಬಲಿಷ್ಠರಾಗಿದ್ದಾರೆ, ಭೂಮಿಯ ಅಗಾಧತೆ (ಮಹತ್, ಮಹೀ) ಸೋಮನಿಂದ ಉಂಟಾಗಿದೆ, ಮತ್ತು ಸೋಮನಿಂದಾಗಿಯೇ ನಕ್ಷತ್ರಗಳು ತಮ್ಮ ತಮ್ಮ ಸ್ಥಾನಗಳಲ್ಲಿ ಸ್ಥಾಪಿಸಲ್ಪಟ್ಟಿವೆ" (೨ : ಸೋಮೇನ ಆದಿತ್ಯಾ ಬಲಿನಃ ಸೋಮೇನ ಪೃಥಿವೀ ಮಹೀ। ಅಥೋ ನಕ್ಷತ್ರಾಣಾಂ ಏಷಾಂ ಉಪಸ್ಥೇ ಸೋಮ ಆಹಿತಃ॥). ಕೆಲವರಲ್ಲಿ ಒಂದು ಭಾವನೆ ಮೂಡುತ್ತದೆ, ಸೋಮಲತೆಯಿಂದ ಪಡೆದ ದ್ರವವನ್ನು ಸೇವಿಸಿದಾಗ ಸೋಮರಸ ಪಾನವಾಯಿತು, ಎಂದು. ಆದರೆ ಅದು ಹಾಗಲ್ಲ. ಏಕೆಂದರೆ, ಋತ್ವಿಜರು ತಿಳಿದಿರುವ ಸೋಮ ಅವರಿಗೆ ದಕ್ಕಿಲ್ಲ. ಶ್ರೇಷ್ಠತಮವಾದ ಸೋಮವು ಎಲ್ಲರ ಪಾಲಿಗೂ ಸುಲಭವಾಗಿ ಸಿಗುವಂಥದಲ್ಲ (೩:ಸೋಮಂ ಮನ್ಯತೇ ಪಪಿವಾನ್ ಯತ್ ಸಂಪಿಬಂತಿ ಓಷಧಿಂ। ಸೋಮಂ ಯಂ ಬ್ರಹ್ಮಾಣೋ ವಿದುಃ ನ ತಸ್ಯ ಅಶ್ನಾತಿ ಕಶ್ಚನ॥). ನೈಜವಾದ ಸೋಮವನ್ನು ಗುಪ್ತವಾಗಿ ಇಡಲಾಗಿದೆ (ಅಂದರೆ, ಸೋಮರಸವನ್ನು ಲತೆಯಿಂದ ಪಡೆಯುವ ವಿಧಾನವು ಎಲ್ಲರಿಗೂ ತಿಳಿಯುವುದಿಲ್ಲ). ಲತೆಯನ್ನು ಎರಡು ಕಲ್ಲುಗಳ ಮಧ್ಯೆ ಇಟ್ಟು ಒತ್ತಿದಾಗ ರಸವು ಸೂಸುತ್ತದೆ, ಆದರೆ ಕೆಲವರಿಗೆ ಕಲ್ಲಿನ ಶಬ್ದವಷ್ಟೇ ಲಭ್ಯ. ಸೋಮರಸವು ದಿವ್ಯವಾದ್ದು, ಭೂಮಿಯ ಮೇಲಿನವರು ಅದನ್ನು ತಿಳಿಯರು. ಹೆಚ್ಚೆಂದರೆ ಅವರಿಗೆ ಅದರ ಮಹತ್ವದ ಪ್ರಜ್ಞೆಯುಂಟು, ಅಷ್ಟೆ (೪:ಆಚ್ಛಾತ್ ವಿಧಾನೈಃ ಗುಪಿತೋ ಬಾರ್ಹತ್ಯೈಃ ಸೋಮ ರಕ್ಷಿತಃ। ಗ್ರಾವ್ಣಾಂ ಇತ್ ಶೃಣ್ವನ್ ತಿಷ್ಠಸಿ ನ ತೇ ಅಶ್ನಾತಿ ಪಾರ್ಥಿವಃ॥). ಎಲೈ ಸೋಮ, ನಿನ್ನನ್ನು ಸ್ವೀಕರಿಸಿದಷ್ಟೂ ನೀನು ವರ್ಧಿಸುತ್ತೀಯೆ; ನಿನ್ನ ರಕ್ಷಕ ವಾಯು; ಮತ್ತು ಚಂದ್ರನಾಗಿ ನೀನು ವರ್ಷಗಳ ಮಾಪಕ. ಅಲ್ಲದೆ, ನೀನು ಕ್ಷೀಣಿಸುತ್ತಿರುವಾಗ ದೇವತೆಗಳು ನಿನ್ನನ್ನು ಕುಡಿಯುತ್ತಾರೆ ಮತ್ತು ಅದರಿಂದಾಗಿ ನೀನು ವರ್ಧಿಸುತ್ತೀಯೆ (೫:ಯತ್ ತ್ವಾ ದೇವ ಪ್ರಪಿಬಂತಿ ತತ ಆ ಪ್ಯಾಯಸೇ ಪುನಃ। ವಾಯುಃ ಸೋಮಸ್ಯ ರಕ್ಷಿತಾ ಸಮಾನಾಂ ಮಾಸ ಆಕೃತಿಃ॥).

ಹೀಗೆ ಸೋಮನನ್ನು ಸ್ತುತಿಸಿದ ನಂತರ ಮದುವೆಯ ಪ್ರಸಂಗದಲ್ಲಿ ಭಾಗಿಗಳಾಗುವವರನ್ನು ಹೆಸರಿಸಲಾಗಿದೆ. ಮದುವಣಗಿತ್ತಿಯ ನೆಚ್ಚಿನ ಸಖಿಯು ರೈಭೀ, ಮದುವಣಗಿತ್ತಿಯನ್ನು ಮನೆಗೆ ಕರೆದುಕೊಂಡು ಹೋಗುವವಳು ನಾರಾಶಂಸೀ, ಅಲಂಕಾರ ಮಾಡುವವಳು ಗಾಥಾ. ಮದುವಣಗಿತ್ತಿಯಾದರೋ ಸುಂದರವಾದ ಉಡುಪನ್ನು ಧರಿಸಿದ್ದಾಳೆ (೬ : ರೈಭೀ ಆಸೀತ್ ಅನುದೇಯೀ ನಾರಾಶಂಸೀ ನ್ಯೋಚನೀ। ಸೂರ್ಯಾಯಾ ಭದ್ರಮಿದ್ವಾಸೋ ಗಾಥಯಾ ಏತಿ ಪರಿಷ್ಕೃತಂ॥). ಮದುವಣಗಿತ್ತಿಯ ಜೊತೆಗಾರರ ಹೆಸರುಗಳು ವ್ಯಕ್ತಿಗಳ ಹೆಸರುಗಳಲ್ಲ. ಮೆರವಣಿಗೆಯಲ್ಲಿ ಅವಳನ್ನು ಕರೆದುಕೊಂಡು ಹೋಗುವಾಗ ಮೂರು ವಿಧದ ಗಾಯನಗಳಿವೆ, ಅವೇ ಅವಳ ಸಹಚರರು, ಆಪ್ತರು. ಮೆರವಣಿಗೆಯೆಂದರೆ ವಾದ್ಯಗಳಿರಬೇಕೆಂಬ ಪದ್ಧತಿ ಋಗ್ವೇದದ ಕಾಲದಲ್ಲಿ ಇದ್ದಂತೆ ತೋರುವುದಿಲ್ಲ; ಇರುವುವೆಲ್ಲಾ



ವಿವಿಧ ಗಾನಗಳು. ರೈಭೀ ಎನ್ನುವುದು ಆಚರಣೆಯ ಸಂದರ್ಭದ ಗಾನ, ನಾರಾಶಂಸೀ ಎನ್ನುವುದು ಶ್ಲಾಘಿಸಲು ಬಳಸಲಾಗುವ ಗಾನ, ಮತ್ತು ಗಾಥಾ ಎನ್ನುವುದು ಸಾಮಾನ್ಯವಾದ ಹಾಡು. ಮೆರವಣಿಗೆಯಲ್ಲಿ ತೆರಳುತ್ತಿರುವವಳ ಗುಣಗಾನ ಮಾಡುವುದು, ಅವಳನ್ನು ವರ್ಣಿಸುವುದು, ಅವಳು ಹೆಜ್ಜೆ ಇಡಲು ಆರಂಭಿಸುವಾಗ ಹಾಡುವುದು (ಅದೇ ಆಚರಣೆಯ ಗಾನ), ಎಲ್ಲವೂ ವಿಜೃಂಭಣೆಯ ಒಂದು ಭಾಗ. ಎಲ್ಲರೂ ತವಕದಿಂದ ಅವಳ ಸೇವೆಯಲ್ಲಿ ನಿರತ ರಾಗಿದ್ದಾರೆ. ಸಮುದಾಯವು ಈ ಹೆಣ್ಣಿನ ಮದುವೆಯಲ್ಲಿ ಸಂಭ್ರಮದಿಂದ ಪಾಲ್ಗೊಳ್ಳುತ್ತಿದೆ ಎಂಬುದು ಮಂತ್ರದ ಸೂಚ್ಯಾರ್ಥ.




ಮದುವಣಗಿತ್ತಿಯು ಪತಿಯ ಮನೆಯತ್ತ ಹೊರಟಿದ್ದಾಳೆ, ಸಮುದಾಯದ ಜನ ಸಂತೋಷದಿಂದ ಭಾಗವಹಿಸುತ್ತಿದ್ದಾರೆ, ಹಾಡುತ್ತಿದ್ದಾರೆ, ಅತ್ತಿಂದಿತ್ತ ಓಡಾಡುತ್ತಿದ್ದಾರೆ. ಮುಂದಿನ ಮಂತ್ರವನ್ನು ನೋಡಿ, ಅದರಲ್ಲಿ ರೂಪಕಗಳ ಮೂಲಕ ಅವಳ ರಥದ ವರ್ಣನೆ, ಇತ್ಯಾದಿಗಳಿವೆ. ರಥದಲ್ಲಿ ಕುಳಿತಿರುವಾಗ ಅವಳ ಮನಸ್ಸಿನಲ್ಲಿ ಸುಳಿಯುವ ಆಲೋಚನೆಗಳೇ ಅವಳಿಗೆ ದಿಂಬು, ಸುತ್ತಣ ಜನರನ್ನು ಕಣ್ಣಲ್ಲಿ ತುಂಬಿಸಿಕೊಳ್ಳುವುದೇ ಅವಳ ಕಣ್ಣಿಗೆ ಕಾಡಿಗೆ. ರಥವು ಆಲೋಚನೆಗಳಷ್ಟು ವೇಗವಾಗಿ ಹೋಗುತ್ತಿಲ್ಲ, ಆದರೆ ಅವಳ ಮನಸ್ಸು ಆಗಲೆ ಪತಿಯ ಮನೆಯನ್ನು ಪ್ರವೇಶಿಸಿಬಿಟ್ಟಿದೆ. ರಥವು ವೇಗವಾಗಿ ಬೇಗ ಹೋಗಬಾರದೆ, ಎಂಬ ತಳಮಳ ಬಹುಶಃ ಅವಳನ್ನು ಕಾಡುತ್ತಿದೆ, ಆದರೆ ಸುತ್ತಣ ಜನರನ್ನು ನೋಡಿ ಕಣ್ಣು ತುಂಬಿಸಿಕೊಳ್ಳುತ್ತಾಳೆ. ಇನ್ನು ಅವಳ ಉಡುಪಿನ ಭಂಡಾರ ಹೇಗಿರಬೇಡ ! ಭೂಮಿ ಮತ್ತು ದ್ಯುಲೋಕಗಳೇ ಅವಳ ಕೋಶ. ಅದರಲ್ಲಿ ಏನೆಲ್ಲಾ ತುಂಬಿರಬಹುದು ! (೭ : ಚಿತ್ತಿರಾ ಉಪಬರ್ಹಣಂ ಚಕ್ಷುರಾ ಅಭ್ಯಂಜನಂ। ದ್ಯೌರ್ಭೂಮಿಃ ಕೋಶ ಆಸೀತ್ ಯದ್ಯಯಾತ್ ಸೂರ್ಯಾ ಪತಿಂ ॥). ಪತಿಯ ಮನೆಯವರು ಹೊರಗಿನವರಲ್ಲ, ಅವರೂ ಅವಳದೇ ಸಮುದಾಯಕ್ಕೆ ಸೇರಿದವರು, ಈ ಮುಂಚೆ ಅವಳದೇ ಬುಡಕಟ್ಟಿನಲ್ಲಿದ್ದವರು. ಆದ್ದರಿಂದ ಪತಿಗೃಹಕ್ಕೆ ತೆರಳುವಾಗ ನಮ್ಮ ಇಂದಿನ ಹೆಣ್ಣುಮಕ್ಕಳಂತೆ ಅವಳು ಕಣ್ಣೀರು ಸುರಿಸುತ್ತಿಲ್ಲ, ಕೈಯಲ್ಲಿ ಕರವಸ್ತ್ರ ಇಟ್ಟುಕೊಂಡಿಲ್ಲ. ಅವಳ ಪಲ್ಲಕ್ಕಿಯು ರಥದ ಒಂದು ಭಾಗ, ಅಷ್ಟೆ. ಅದರ ಗಣೆ ಮತ್ತು ಗಳುಗಳೆಂದರೆ ಬೇಕಾದಷ್ಟು ಮಂದಿ ಹಾಡುತ್ತಿದ್ದ ಸ್ತುತಿಗಳು, ರಥಕ್ಕೆ ಅಲಂಕಾರೋಪಾದಿಯಲ್ಲಿದ್ದುದು ಕುರೀರ ಎಂಬ ಛಂದಸ್ಸು ; ರಥದ ಗೋಪುರದಂತೆ ಅದಿದ್ದಿತು. ಅವಳ ಎಡ–ಬಲಗಳಲ್ಲಿ ಇಬ್ಬರು ಯುವಕರು, ಅಶ್ವಿನಿ ದೇವತೆಗಳು. ಮೆರವಣಿಗೆಯ ಮುಂದಾಳು ಸ್ವತಃ ಅಗ್ನಿಯೇ (೮:ಸ್ತೋಮಾ ಆಸನ್ ಪ್ರತಿಧಯಃ ಕುರೀರಂ ಛಂದ ಓಪಶಃ। ಸೂರ್ಯಾಯಾ ಅಶ್ವಿನಾ ವರಾಗ್ನಿರಾಸೀತ್ ಪುರೋಗವಃ ॥). ಋಗ್ವೇದದ ಕಾಲದ ಎರಡು–ಮೂರು ಶತಮಾನಗಳ ನಂತರದ ಒಂದು ಗ್ರಂಥ ಐತರೇಯ ಬ್ರಾಹ್ಮಣ. ಅದರಲ್ಲಿ ಸೂರ್ಯಾಳ ವಿವಾಹವನ್ನು ಕುರಿತ ವಿವರಗಳಿವೆ. ಸವಿತೃವು ತನ್ನ ಮಗಳನ್ನು ಸೋಮನಿಗೆ ಕೊಡುವವನಿದ್ದ, ಅದನ್ನು ತಿಳಿದ ಅಶ್ವಿನಿ ದೇವತೆಗಳು ದೌಡಾಯಿಸಿ ಬಂದು ಅವಳನ್ನು ಪಡೆದುಕೊಂಡರು. ಋಗ್ವೇದದಲ್ಲಿ ಸಹ ಸೂರ್ಯಾ ಅಶ್ವಿನಿ ದೇವತೆಗಳ ಪತ್ನಿಯೆಂದು ಕೆಲವೊಮ್ಮೆ ಚಿತ್ರಿತಳಾಗಿದ್ದಾಳೆ (೧.೧೧೯.೫: ಯೋಷಾ ಅವೃಣೀತ ಜೇನ್ಯಾ ಯುವಾಂ ಪತೀ). ಆದರೆ ಇಲ್ಲಿ ಅಶ್ವಿನಿಗಳು ಅವಳ ರಕ್ಷಣೆಯ ಜವಾಬ್ದಾರಿ ಹೊತ್ತ ಯುವ ಸಂಗಾತಿಗಳು. ಸೋಮನು ಅವಳನ್ನು ವರಿಸಲು ಇಚ್ಛಿಸಿದ್ದನೆಂಬುದನ್ನು ಮುಂದಿನ ಮಂತ್ರವು ಹೇಳುತ್ತದೆ; ಅಶ್ವಿನಿಗಳೂ ಅವಳ ಕೈಹಿಡಿಯಲು ಮುಂದಾಗಿದ್ದರು. (೯:ಸೋಮೋ ವಧೂಯುಃ ಅಭವತ್ ಅಶ್ವಿನಾ ಆಸ್ತಾಂ ಉಭಾ ವರಾ। ಸೂರ್ಯಾಂ ಯತ್ಪತ್ಯೇ ಶಂಸಂತೀಂ ಮನಸಾ ಸವಿತಾ ಅದದಾತ್ ॥). ಆದರೆ ಅದೆಲ್ಲಾ ಹಿಂದಿನ ಕತೆ. ಸದ್ಯದಲ್ಲಿ ಮೆರವಣಿಗೆ ಹೊರಟಿದೆ. ಸೂರ್ಯಾ ಹೋಗುತ್ತಿರುವುದು ಸೋಮನ ಗೃಹಕ್ಕೆ. ಅವಳ ರಥಕ್ಕೆ ಹೂಡಿರುವ ಕುದುರೆಗಳು ಶೋಭಿಸುತ್ತಿವೆ. ಅವಳ ಮನಸ್ಸೇ ರಥವಾಗಿಬಿಟ್ಟಿದ್ದಿತು. (ಅಂದರೆ, ರಥವು ಪತಿಗೃಹವನ್ನು ತಲುಪಲು ಇನ್ನೂ ಸಮಯವಿತ್ತು; ಅವಳ ಮನಸ್ಸಾದರೋ ಆಗಲೆ ಪತಿಗೃಹವನ್ನು ಪ್ರವೇಶಿಸಿ ಆಗಿತ್ತು). ದ್ಯುಲೋಕವು ರಥದ ಗೋಪುರವಾಗಿತ್ತು (ಅಂದರೆ, ಅವಳಿಗೆ ದ್ಯುಲೋಕ ಪ್ರಾಪ್ತವಾಗಿದೆಯೆಂಬ ಭಾವನೆಯು ಸ್ಫುರಿಸಿದ್ದಿತು). ಮದುವಣಗಿತ್ತಿಯ ಮನಸ್ಸಿನ ತುಮುಲ ಹಾಗೂ ಮನೋವೇಗ ಇಲ್ಲಿ ವ್ಯಂಜಿಸಲ್ಪಟ್ಟಿವೆ. (೧೦:ಮನೋ ಅಸ್ಯಾಃ ಅನಃ ಆಸೀತ್ ದ್ಯೌರಾಸೀದುತ ಛ್ಛದಿಃ। ಶುಕ್ರೌ ಅನಡ್ವಾಹೌ ಆಸ್ತಾಂ ಯದಯಾತ್ ಸೂರ್ಯಾ ಗೃಹಂ ॥). ಕುದುರೆಗಳೂ ಮನಸ್ಸಿನಷ್ಟೇ ವೇಗವಾಗಿ ಹೋಗುತ್ತಿದ್ದುವೇನೊ, ಆದರೆ ಋಕ್ ಮತ್ತು ಸಾಮನ್‌ಗಳ ಗಾಯನವು ಅವನ್ನು ಹಿಡಿತದಲ್ಲಿರಿಸಿಕೊಂಡಿದ್ದವು. ಅಂದರೆ, ವಧುವು ತವಕಿಸುತ್ತಿದ್ದಾಗ್ಯೂ ರಥವು ರಭಸದಿಂದ ಓಡಲಾಗದು; ಮೆರವಣಿಗೆಯಲ್ಲಿರುವವರ ಗಾಯನವು ಗಾಯನಕ್ಕೆ ಚ್ಯುತಿ ಬಾರದಂತೆ ಓಟವನ್ನು ನಿಯಂತ್ರಿಸುತ್ತಿದೆ. ಆದ್ದರಿಂದ ರಥದ ಚಕ್ರಗಳು ಗಾಯನವನ್ನು ಆಲಿಸುತ್ತಾ ನಿಧಾನವಾಗಿಯೇ ಚಲಿಸಬೇಕಾಗಿದೆ. ಆದರೇನಂತೆ, ವಧುವಿನ ಮನಸ್ಸು ದ್ಯುಲೋಕದಲ್ಲಿ ವಿಹರಿಸುತ್ತಿದೆಯೋ ಎನ್ನುವಂತೆ ಉಲ್ಲಾಸದಿಂದಿದೆ (೧೧:ಋಕ್ ಸಾಮಾಭ್ಯಾಂ ಅಭಿಹಿತೌ ಗಾವೌ ತೇ ಸಾಮನೌ ಇತಃ। ಶ್ರೋತ್ರಂ ತೇ ಚಕ್ರೇ ಆಸ್ತಾಂ ದಿವಿ ಪಂಥಾಶ್ಚರಾಚರಃ ॥). ಕವಿಯು ಅದೆಷ್ಟು ರೂಪಕಗಳನ್ನು ಪೋಣಿಸುತ್ತಾ ಹೋಗುತ್ತಿದ್ದಾನೆಂಬುದನ್ನು ಗಮನಿಸಿದರೆ ಅವನ ಕವಿ ಶಕ್ತಿ ಹಾಗೂ ಮದುವೆಯ ಸಂದರ್ಭದ ಮೆರವಣಿಗೆಯ ನಿಧಾನ ಗತಿ, ಎರಡೂ ಅರಿವಿಗೆ ಬರುತ್ತವೆ. ನಿಧಾನ ಗತಿಯು ವಾಸ್ತವ, ಆದರೆ ಶೀಘ್ರ ಗತಿಯು ಆಶಯ. ಅದನ್ನು ಮುಂದಿನ ಮಂತ್ರದಲ್ಲಿ ಕಾಣುತ್ತೇವೆ. ಸೂರ್ಯಾ ಹೋಗುತ್ತಿದ್ದರೆ ಅವಳ ರಥದ ಚಕ್ರದ ಶುಚಿತ್ವಕ್ಕೆ ಧಕ್ಕೆಯುಂಟಾಗಲಿಲ್ಲ (ಬಹುಶಃ ಅದು ಮನೋವೇಗದಿಂದ ಚಲಿಸುವಾಗ ಚಕ್ರಗಳು ಭೂಮಿಯ ಮೇಲೆ ಇರಲೇ ಇಲ್ಲ !); ಜೊತೆಗೆ ಅವಳ ರಥಕ್ಕೆ ಗಾಳಿಯೇ ಅಚ್ಚು. ಹೀಗಾಗಿ ರಥವು ಮನೋವೇಗದಿಂದ ಹೋಗಲು ಸಾಧ್ಯವಾಯಿತು. (೧೨:ಶುಚೀ ತೇ ಚಕ್ರೇ ಯಾತ್ಯಾ ವ್ಯಾನೋ ಅಕ್ಷ ಆಹತಃ। ಅನೋ ಮನಸ್ಮಯಂ ಸೂರ್ಯಾ ಅರೋಹತ್ ಪ್ರಯತೀ ಪತಿಂ ॥).

ಮದುವೆಗೆ ಪ್ರಶಸ್ತ ಕಾಲ ಅಥವಾ ಮುಹೂರ್ತ ಒಂದಿದೆಯೆಂಬ ಪದ್ಧತಿ ಈಗಿನಷ್ಟು ಋಗ್ವೇದದ ಜನಸಮುದಾಯವನ್ನು ಬಾಧಿಸಿದ್ದಿರಲಾರದು. ಆದರೆ ಆಗ್ಗೆ ಸಹ ಅಘಾ ಅಥವಾ ಮಘಾ ದಿನಗಳು ಮದುವೆಗೆ ಸೂಕ್ತ ಕಾಲವೆಂದು ಭಾವಿಸಲಾಗಿದ್ದಿತು. ಮಘಾ ನಕ್ಷತ್ರದಲ್ಲಿ ಚಂದ್ರನಿರುವ ದಿನಗಳು ಅವು. ಅಂತಹ ದಿನಗಳಲ್ಲಿ ಸೂರ್ಯಾ ಮದುವಣಗಿತ್ತಿಯಾಗಿ ಮೆರವಣಿಗೆಯಲ್ಲಿ ಗಂಡನ ಮನೆಗೆ ಹೊರಡುವಂತೆ ತಂದೆ ಸವಿತೃ ಆಯೋಜಿಸಿದ್ದ. ಆ ಕಾಲವು ಇನ್ನೊಂದು ಕ್ರಿಯೆಗೂ ಪ್ರಶಸ್ತವಾದ್ದು, ಏಕೆಂದರೆ ಅತಿಥಿಗಳನ್ನು ಬರಮಾಡಿಕೊಂಡು ಔತಣಕೂಟಗಳನ್ನು ಏರ್ಪಡಿಸುವ ಕಾಲ ಅದು; ಅದಕ್ಕಾಗಿ ದನಗಳನ್ನು ಕೊಲ್ಲುವ ಕಾಲವೂ ಹೌದು. ಅಂತೆಯೇ, ಅರ್ಜುನೀ ಅಥವಾ ಫಾಲ್ಗುನೀ ನಕ್ಷತ್ರದ ಸಮಯದಲ್ಲಿ ಮದುವೆಯ ಸಮಾರಂಭದ ಕಾಲ ಕೂಡ. ಆದ್ದರಿಂದಲೇ ಮದುವಣಗಿತ್ತಿಯ ಮೆರವಣಿಗೆಗೆ ಸಕಾಲ ಅದು (೧೩:ಸೂರ್ಯಾಯಾ ವಹತುಃ ಪ್ರಾಗಾತ್ ಸವಿತಾ ಯಂ ಅವಾಸೃಜತ್। ಅಘಾಸು ಹನ್ಯಂತೇ ಗಾವಃ ಅರ್ಜುನ್ಯೋಃ ಪರಿ ಉಹ್ಯತೇ ॥).

ಮುಂದಿನ ಮಂತ್ರದಲ್ಲಿ ಮತ್ತೆ ಪೂರ್ವಚರಿತ್ರೆಯ ಪ್ರಸ್ತಾಪ ಬರುತ್ತದೆ. ಮೊದಲಿಗೆ ಸೂರ್ಯಾಳ ಮದುವೆ ಸೋಮನೊಡನೆ ಜರುಗುತ್ತದೆಂದು ತಿಳಿದಾಗ ಅಶ್ವಿನಿ ದೇವತೆಗಳು ಅವಳ ಬಳಿಗೆ ಧಾವಿಸಿ ಹೋಗಿದ್ದರಷ್ಟೆ; ಅದಕ್ಕೆ ಈಗ ಹೊಸ ಅರ್ಥ ಮತ್ತು ಸಂದರ್ಭವನ್ನು ಕಲ್ಪಿಸಲಾಗುತ್ತಿದೆ. ಅವರು ಹೋಗಿದ್ದುದು ಸ್ವತಃ ತಾವೇ ಅವಳ ಕೈಹಿಡಿಯಲು ಅಲ್ಲ, ಅವರು ಹೋಗಿದ್ದು ಸೋಮನ ಪ್ರತಿನಿಧಿಗಳಾಗಿ. ಹಾಗೆ ಅವರು ಮಾಡಿದ್ದು ತಂದೆ ಸವಿತೃವಿಗೆ ಆಹ್ಲಾದ ನೀಡಿದ್ದಿತು, ಏಕೆಂದರೆ ಅವರು ಸೂರ್ಯಾಳ ತಂದೆಯ ಜವಾಬ್ದಾರಿಯನ್ನು ತಾವೇ ನಿರ್ವಹಿಸಿಬಿಟ್ಟಿದ್ದರು. ಬೇರೆಲ್ಲಾ ದೇವತೆಗಳೂ ಈ ಅಶ್ವಿನಿಗಳ ಮುಖೇನ ಪರಿಣಮಿಸಿದ್ದ ತೀರ್ಮಾನವನ್ನು ಸ್ವಾಗತಿಸಿದ್ದರು. ಅಂದರೆ,

ಸೂರ್ಯಾ – ಸೋಮರ ಮದುವೆಗೆ ಅವರು ಮುದ್ರೆಯೊತ್ತಿದ್ದರು. ಈ ಮಂತ್ರವನ್ನು ಬೇರೊಂದು ರೀತಿಯಲ್ಲೂ ಅರ್ಥೈಸಿಕೊಳ್ಳಬಹುದು : ಮೊದಲಿಗೆ ಅಶ್ವಿನಿಗಳು ಸೂರ್ಯಾಳನ್ನು ವರಿಸುವ ಇಚ್ಛೆಯಿಂದ ಅವಳ ಬಳಿಗೆ ಧಾವಿಸಿ ಹೋಗಿದ್ದರು; ಈಗಲಾದರೋ ಅವರು ಅವಳ ಮದುವೆಯ ಮೆರವಣಿಗೆಯಲ್ಲಿ ಪಾಲ್ಗೊಳ್ಳಲು ಬಂದಿದ್ದಾರೆ. (೧೪:ಯದಶ್ವಿನಾ ಪೃಚ್ಛಮಾನೌ ಅಯಾತಂ ತ್ರಿಚಕ್ರೇಣ ವಹತುಂ ಸೂರ್ಯಾಯಾಃ। ವಿಶ್ವೇ ದೇವಾ ಅನು ತದ್ವಾಂ ಅಜಾನನ್ ಪುತ್ರಃ ಪಿತರೌ ಅವೃಣೀತ ಪೂಷಾ ॥). ಅಶ್ವಿನಿದೇವತೆಗಳ ರಥದ ವೈಶಿಷ್ಟ್ಯವೇನೆಂದರೆ ಅದಕ್ಕೆ ಮೂರು ಚಕ್ರಗಳು. ಇದನ್ನು ವ್ಯಾಖ್ಯಾನಿಸುವಾಗ ಋಗ್ವೇದದ ಕಾಲದಲ್ಲಿ ಆಟೋರಿಕ್ಷಾಗಳು ಕೂಡ ಇದ್ದುವೆಂದು ಯಾವ ವಿದ್ವಾಂಸರೂ ಈವರೆಗೆ ಹೇಳಿಲ್ಲದಿರುವುದು ಋಗ್ವೇದದ ಪುಣ್ಯ ! ಈ ಮೂರು ಚಕ್ರಗಳಾದರೂ ಯಾವುವು ? ಭೂಮಿ ಮತ್ತು ದ್ಯುಲೋಕ ಎರಡು ಗಾಲಿಗಳು ಮತ್ತು ಇನ್ನೊಂದು ಗಾಲಿ ಗುಪ್ತವಾದ್ದು; ಈ ಎರಡು ಲೋಕಗಳಾಚೆ ಇರುವ ಯಾವುದೋ ಇನ್ನೊಂದು ಲೋಕ ಅದು. ಅಶ್ವಿನಿದೇವತೆಗಳು ಸವಿತೃವಿನ ಬಳಿಗೆ ಹೋದಾಗ ಆ ಮೂರನೆಯ ಗಾಲಿ ಯಾರಿಗೂ ಕಾಣಿಸಿರಲಿಕ್ಕಿಲ್ಲ. ಆದ್ದರಿಂದ ಕವಿಯು ಕೇಳುತ್ತಾನೆ, "ಅಶ್ವಿನಿದೇವತೆಗಳೇ, ಆ ನಿಮ್ಮ ಮೂರನೆಯ ಗಾಲಿ ಆಗ ಎಲ್ಲಿದ್ದಿತು ? ಸವಿತೃವು ನಿಮಗೆ ಏನೋ ಹೇಳಲಿದ್ದನಲ್ಲ, ಅದನ್ನು ಕೇಳಿಸಿಕೊಳ್ಳಲು ನೀವು ಎಲ್ಲಿ ನಿಂತಿದ್ದಿರಿ ?" ಎಂದು. (೧೫:ಯದಯಾತಂ ಶುಭಸ್ಪತೀ ವರೇಯಂ ಸೂರ್ಯಾಮುಪ। ಕ್ವ ಏಕಂ ಚಕ್ರಂ ವಾಂ ಆಸೀತ್ ಕ್ವ ದೇಷ್ಟ್ರಾಯ ತಸ್ಥಥುಃ॥). ಇವೇ ಮೂರು ಗಾಲಿಗಳ ಬಗೆಗಿನ ಪ್ರಶ್ನೆಗೆ ಮುಂದಿನ ಮಂತ್ರವು ಉತ್ತರವನ್ನು ಸೂಚಿಸಿದೆ : ಋತುಮಾನದ ಪ್ರಕಾರ ಆಗುವ ಬದಲಾವಣೆಗಳನ್ನು ತಿಳಿದವರು ಸೂರ್ಯಾಳ ರಥದ ಎರಡು ಗಾಲಿಗಳನ್ನು ತಿಳಿಯಬಲ್ಲವರಾಗಿರುತ್ತಾರೆ. ಗೂಢವಾಗಿ ಇರಿಸಲ್ಪಟ್ಟಿರುವ ಮೂರನೆಯ ಗಾಲಿಯನ್ನು ಗುಹ್ಯಜ್ಞಾನ ಉಳ್ಳವರು ಮಾತ್ರ ತಿಳಿದಿರುತ್ತಾರೆ (೧೬:ದ್ವೇ ತೇ ಚಕ್ರೇ ಸೂರ್ಯೇ ಬ್ರಹ್ಮಾಣ ಋತುಥಾ ವಿದುಃ। ಅಥೈಕಂ ಚಕ್ರಂ ಯದ್ಗುಹಾ ತತ್ ಅದ್ಧಾತಯಃ ಇತ್ ವಿದುಃ ॥). ಅದನ್ನು ತಿಳಿದವರು ಮೇಧಾವಿಗಳೆನಿಸಿಕೊಳ್ಳುತ್ತಾರೆ.

ಇಲ್ಲಿಂದ ಮುಂದಕ್ಕೆ ಸೂಕ್ತದ ಇನ್ನೊಂದು ಭಾಗವು ಆರಂಭವಾಗುತ್ತದೆ. ಅದರಲ್ಲಿ ಮೊದಲ ಮೂರು ಮಂತ್ರಗಳು ಸೂಕ್ತದ ಇತರ ಭಾಗದೊಂದಿಗೆ ಯಾವ

# ನಮ್ಮವರಿಲ್ಲದ – ನಾವು






ಕೃಷ್ಣ ವರ್ಣದ ಚೆಲುವೆ
ಹೇಳು ನನ್ನಲ್ಲಿ ಒಲವೆ ?!
ಶ್ವೇತ ವರ್ಣದ ಕುವರ
ಹೇಗೆ ಹುಟ್ಟಿತು ಈ ಪ್ರೇಮ ಪ್ರವರ ?

ನಮ್ಮನ್ನು –
ಮುಟ್ಟಲೂ ಒಪ್ಪದ ನಿಮಗೆ
ನನ್ನನ್ನು ಅಪ್ಪುವ ಆಸೆ ಬಂದದ್ದಾದರೂ ಹೇಗೆ ?
ಅಸನ–ವಸನ, ನೆರಳು ಇಲ್ಲದೆ ವ್ಯಸನದಿ ಬಾಳಿದ ನಾವು
ಬಿಸಲುಂಡು ಬೆಳೆದವರು ನಾವು !!

ವಿಶಾಲ ನೆಲದ ಮೇಲೆ ಉಗುಳಲೂ
ಜಾಗವಿಲ್ಲದ ನಮಗೆ
ಈ ನಿನ್ನ ಸಂಕುಚಿತ ಹೃದಯದಲ್ಲಿ ಜಾಗ ಸಿಕ್ಕಿದ್ದಾದರೂ ಹೇಗೆ ?
ಉಗುಳಲೂ ಆಗದೆ, ನುಂಗಲೂ ಆಗದೆ
ಪೂತನಿಯ ಹಾಲನುಂಡು ಬೆಳೆದವರು ನಾವು !!

ಶುದ್ಧಿ ಮಾಡಿದ ಕೈ ಇನ್ನೂ ನಾರುತಿದೆ
ಚಾಕರೀ ಮೈಯಿಂದ ಇನ್ನೂ ಬೆವರು ಸೋರುತಿದೆ
ಊರಾಚೆ, ಉಸಿರುಗಟ್ಟಿದ ಬದುಕಿನಲಿ
ನೋವುಂಡು ಬೆಳೆದವರು ನಾವು !!

ಏ ! ಸುವರ್ಣ ಕುಮಾರ, ನನ್ನಲ್ಲಿ
ಏಕೀ ಒಲವು ?
ಈಗ ನನ್ನಲ್ಲಿರುವ ಭೀಮಬಲವೇ ?
ಅಥವಾ
ಬಾಯಿ ಸವಿಗೆಟ್ಟಿದೆಯೇ ?
ಇಲ್ಲವೆ
ಅಣ್ಣನ ಮಾತಿಂದ ಅಂತರಂಗ ಶುದ್ಧಿಯಾಯಿತೇ ?

ಆಕಾಶವಾಣಿ ನುಡಿಯಿತು
ಓ ನನ್ನ ಕೃಷ್ಣವರ್ಣದ ಕುವರಿ
ನೋಡಲ್ಲಿ ! ನಿಂತಿಹನು, ಅಮಾವಾಸ್ಯೆಯ ಚಂದಿರ
ಕಾದಿಹನು ನಿನಗಾಗಿ
ಹುಣ್ಣಿಮೆಯ ಚಂದಿರನಂತಹ ಕಣ್ಗಳಿಂದ

**ಶ್ರೀನಿವಾಸಮೂರ್ತಿ ಯು.**
ಉಪನ್ಯಾಸಕರು, ಸರಕಾರಿ ಪದವಿ ಪೂರ್ವ ಕಾಲೇಜು
ಸಿರುಗುಪ್ಪ – ೫೮೩ ೧೨೧, ಬಳ್ಳಾರಿ ಜಿಲ್ಲೆ

ಸಂಬಂಧ ಹೊಂದಿವೆಯೆಂಬ ಗೊಂದಲ ಉಂಟಾಗುತ್ತದೆ. ಏಕೆಂದರೆ ಇಲ್ಲಿ ಏಕಾಏಕಿ ಸೂರ್ಯಾ, ಮಿತ್ರ, ವರುಣ ಹಾಗೂ ಇತರ ದೇವತೆಗಳಿಗೆ ನಮಸ್ಕರಿಸುತ್ತೇನೆ ಎಂಬ ಮಾತು ಬಂದಿದೆ. ನಮಸ್ಕರಿಸುತ್ತಿರುವುದು ವಧುವಾದ ಸೂರ್ಯಾ ಅಲ್ಲ ಎಂಬುದು ಸ್ಪಷ್ಟ, ಏಕೆಂದರೆ ಅವಳಿಗೂ ನಮನ ಸಲ್ಲುತ್ತಿದೆ. ವಧುವಿನ ತಂದೆಯಾದ ಸವಿತೃವೂ ಅಲ್ಲ. ಅವನೇ ಹೊಂದಿರುವ ಇನ್ನೊಂದು ಹೆಸರಿನ ಮಿತ್ರನಿಗೆ ಮತ್ತು ಮಗಳು ಸೂರ್ಯಾಗೆ ಅವನೇಕೆ ನಮಿಸಬೇಕು! ಅಲ್ಲದೆ ಎಲ್ಲ ಭೂತವಸ್ತುಗಳಿಗೂ, ಒಳ್ಳೆಯ ಬುದ್ಧಿ ನೀಡುವ ಎಲ್ಲ ದೇವತೆಗಳಿಗೂ ನಮನ ಸಲ್ಲಿಸಲಾಗಿದೆ (೧೭: ಸೂರ್ಯಾಯೈ ದೇವೇಭ್ಯೋ ಮಿತ್ರಾಯ ವರುಣಾಯ ಚ। ಯೇ ಭೂತಸ್ಯ ಪ್ರಚೇತಸಃ ಇದಂ ತೇಭ್ಯಃ ಅಕರಂ ನಮಃ॥). ಹಾಗಿದ್ದರೆ ನಮಿಸುತ್ತಿರುವುದು ಕವಿಯೇ ಎಂದು ತೀರ್ಮಾನಿಸಬಹುದೆ? ಅವನು ಏತಕ್ಕಾಗಿ ನಮಿಸುತ್ತಿದ್ದಾನೆ? ಪ್ರಕೃತಿಲೋಕದ ಒಂದು ವಿಸ್ಮಯವು ಅವನಲ್ಲಿ ಅಂಕುರಿಸಿದೆ ಮತ್ತು ಸೂರ್ಯಾಳ ಮದುವೆಯ ಹಿನ್ನೆಲೆಯಲ್ಲಿ ಅದನ್ನವನು ದಾಖಲಿಸುತ್ತಿದ್ದಾನೆ. ಅಂತಹ ಸಂದರ್ಭದಲ್ಲಿ "ಎಲ್ಲ ಭೂತವಸ್ತುಗಳಿಗೂ ಸುಮತಿಯನ್ನು ನೀಡುವ ದೇವತೆಗಳನ್ನು" ನೆನೆದಿದ್ದಾನೆ. ಏನದು ವಿಸ್ಮಯ? ಮುಂದಿನ ಎರಡು ಮಂತ್ರಗಳು ಅದನ್ನು ಪ್ರಸ್ತಾಪಿಸಿವೆ. ಆದರೆ ಸೋಮನನ್ನು ಮದುವೆಯಾಗಲು ಹೊರಟಿರುವ ಸೂರ್ಯಾಳಿಗೂ ಈ ವಿಸ್ಮಯದ ಪ್ರಕಟಣೆಗೂ ಸಂಬಂಧ ಕಲ್ಪಿಸುವುದು ಹೇಗೆ? ವಿಸ್ಮಯವು ಸೂರ್ಯ ಮತ್ತು ಚಂದ್ರರಿಗೆ ಸಂಬಂಧಿಸಿದ್ದು. ಅವು ಅವಳಿ ಮಕ್ಕಳಿದ್ದಂತೆ. ತಮ್ಮದೇ ಅಂತರ್ಗತ ಶಕ್ತಿಯಿಂದ (ಅದನ್ನು ಕವಿಯು 'ಮಾಯಾ' ಎಂದು ಕರೆದಿದ್ದಾನೆ) ಅವು ಸತತವಾಗಿ ಒಂದರ ನಂತರ ಒಂದು ಬರುತ್ತಿರುತ್ತವೆ, ಹೋಗುತ್ತಿರುತ್ತವೆ. ಎಲ್ಲೋ ಒಂದು ಯಜ್ಞ ನಡೆಯುತ್ತಿರುವ ಸ್ಥಳದಲ್ಲಿ ಆಡಿಕೊಳ್ಳುತ್ತಿರುವ ಇಬ್ಬರು ಮಕ್ಕಳಿಗೆ ಸಮ ಈ ಸೂರ್ಯ ಮತ್ತು ಚಂದ್ರರು. ಆ ಮಕ್ಕಳಂತೆ ಸೂರ್ಯ–ಚಂದ್ರರು ನಿಯಮಿತವಾಗಿ ಅಡ್ಡಾಡುತ್ತಿದ್ದಾರೆ. ಮಕ್ಕಳು ಯಜ್ಞಶಾಲೆಯಲ್ಲಿ ಅಡ್ಡಾಡುವಂತೆ ಸೂರ್ಯ–ಚಂದ್ರರು ಅಂತರಿಕ್ಷದಲ್ಲಿ ಅಡ್ಡಾಡುತ್ತಿದ್ದಾರೆ. ಅವರಲ್ಲಿ ಒಂದು ಶಿಶುವು ಅಸ್ತಿತ್ವದಲ್ಲಿರುವ ಎಲ್ಲವನ್ನೂ ಪರಿವೀಕ್ಷಣೆ ಮಾಡುತ್ತಿರುತ್ತದೆ; ಅದು ಸೂರ್ಯ. ಇನ್ನೊಂದು ಶಿಶುವು ಋತುಗಳನ್ನು ಉಂಟುಮಾಡುತ್ತಾ ಕಾಲವನ್ನು ಮಾಪನ ಮಾಡುತ್ತಿರುತ್ತದೆ; ಅದು ಚಂದ್ರ ಅಥವಾ ಸೋಮ. ಋತುಗಳನ್ನು ನಿಯಮಿಸುವ ಚಂದ್ರನು ಋತುಗಳಂತೆ ತಾನೂ ಅಸ್ತಿತ್ವಕ್ಕೆ ಬರುತ್ತಾನೆ, ಬೆಳೆಯುತ್ತಾನೆ, ನಿಷ್ಕ್ರಮಿಸುತ್ತಾನೆ ಮತ್ತು ಮತ್ತೆ ಬರುತ್ತಾನೆ. ಚಂದ್ರನು ತನ್ನ ಬದಲಾವಣೆಯಿಂದ ದಿನ, ವಾರ, ಪಕ್ಷ, ಋತು, ವರ್ಷ, ಹೀಗೆ ಕಾಲದ ಮಾಪಕನಾಗಿದ್ದು ಸದಾ ಹೊಸ ಹೊಸ ರೂಪಗಳನ್ನು ತಳೆಯುತ್ತಿರುತ್ತಾನೆ. ಕ್ಷೀಣಿಸುವುದು ಮತ್ತು ವರ್ಧಿಸುವುದು ಅವನ ಲಕ್ಷಣ. ಹೀಗಾಗಿ ಅವನು ನಿತ್ಯನೂತನ; ಕ್ಷೀಣಿಸಿದರೂ ನೂತನ, ವರ್ಧಿಸಿದರೂ ನೂತನ. ನಿನ್ನೆಯಂತೆ ಇಂದಿಲ್ಲ, ಇಂದಿನಂತೆ ನಾಳೆಯಿಲ್ಲ. ಅವನ ಮಾರ್ಪಾಟು ಒಂದು ಕಾಲಚಕ್ರದ ಸೂಚನೆ, ಸಂಕೇತ. ಪ್ರಾತಃಕಾಲಕ್ಕೆ ಮುನ್ನ ನಡೆದುಹೋಗುವ ಧ್ವಜಧಾರಕ ಈ ಚಂದ್ರ. ಹಾಗೆ ಹೋದವನು ಮತ್ತೆ ಬರುತ್ತಾನೆ ಮತ್ತು ದೇವತೆಗಳಿಗೆ ಸಲ್ಲಬೇಕಾದ ಪಾಲನ್ನು ಕೊಡಿಸುತ್ತಾನೆ. ಬಹುಶಃ "ದರ್ಶಪೂರ್ಣಮಾಸ" ಎಂದು ನಂತರದ ಕಾಲದಲ್ಲಿ ಕರೆಯಲಾದ ಪ್ರಾತಸ್ಸಂಧ್ಯಾವಿಧಿಗಳನ್ನು ಕವಿಯು ದೃಷ್ಟಿಯಲ್ಲಿರಿಸಿಕೊಂಡಿದ್ದಾನೆ. ಬೆಳಿಗ್ಗೆ ಮತ್ತು ಸಂಜೆ, ಹೀಗೆ ಎರಡು ಹೊತ್ತುಗಳಲ್ಲೂ ದೇವತೆಗಳಿಗೆ ಹವಿರ್ಭಾಗ ಕೊಡಿಸುವವನು ಚಂದ್ರ. ಈ ರೀತಿಯಲ್ಲಿ ಮಾನವನ ಜೀವಿತಕಾಲವನ್ನು ಮಾಪನ ಮಾಡಲು ಚಂದ್ರನು ಸಾಧನವಾಗಿದ್ದಾನೆ. ಸೂರ್ಯನೂ ಬರುತ್ತಾನೆ, ಹೋಗುತ್ತಾನೆ; ಆದರೆ ಅವನಲ್ಲಿ ಬದಲಾವಣೆ ಇಲ್ಲವಾದ್ದರಿಂದ ಅವನು ಮಾಪಕ ಸಾಧನ ವಾಗಲಾರ. ಚಂದ್ರನ ಗತಿ ಮತ್ತು ವಿಗತಿಗಳಿಂದ ಸಮಯವನ್ನು ಅಳೆಯಬಹುದು. ಈಗಲೂ ಕೆಲವರು 'ಸಹಸ್ರಚಂದ್ರ ದರ್ಶನ' ಮಾಡಿದುದಕ್ಕಾಗಿ ಕೆಲವು ಆಚರಣೆಗಳನ್ನು ಇಟ್ಟುಕೊಳ್ಳುವುದುಂಟು; ಅಂದರೆ, ಅವರು ಒಂದು ಸಾವಿರ ತಿಂಗಳುಗಳ ಬದುಕನ್ನು ಕಳೆದುದರ ಸಮಾರಂಭ ಅದು. ೧೮ ಮತ್ತು ೧೯ನೆಯ ಮಂತ್ರಗಳಲ್ಲಿ ಈ ವಿಚಾರಗಳೆಲ್ಲಾ ಅಡಕಗೊಂಡಿವೆ. (೧೮:ಪೂರ್ವಾಪರಂ ಚರತೋ ಮಾಯಯಾ ಏತೌ ಶಿಶೂ ಕ್ರೀಳಂತೌ ಪರಿ ಯಾತೋ ಅಧ್ವರಂ। ವಿಶ್ವಾನಿ ಅನ್ಯೋ ಭುವನಾ ಅಭಿಚಷ್ಟೇ ಋತೂನ್ ಅನ್ಯಃ ವಿದಧತ್ ಜಾಯತೇ ಪುನಃ॥ ೧೯:ನವೋನವೋ ಭವತಿ ಜಾಯಮಾನಃ ಅಹ್ನಾಂ ಕೇತುಃ ಉಷಸಾಂ ಏತಿ ಅಗ್ರಂ। ಭಾಗಂ ದೇವೇಭ್ಯೋ ವಿ ದಧತಿ ಆಯನ್ ಪ್ರ ಚಂದ್ರಮಾಃ ತಿರತೇ ದೀರ್ಘಮಾಯುಃ॥).

ಇಲ್ಲಿ ಎರಡು ಅಂಶಗಳನ್ನು ಸ್ಪಷ್ಟಪಡಿಸಿಕೊಳ್ಳಬಹುದು: (ಅ) ಚಾಂದ್ರಮಾನ ರೀತ್ಯಾ ದಿನಗಳ ಎಣಿಕೆಯು ಸೌರಮಾನ ರೀತ್ಯಾ ದಿನಗಳನ್ನು ಎಣಿಸುವುದಕ್ಕಿಂತಲೂ ಹೆಚ್ಚು ಸುಲಭಸಾಧ್ಯ. ಇಂದಿನ ನಮ್ಮ ರಾಷ್ಟ್ರೀಯ ಪಂಚಾಂಗವು ಸೌರಮಾನ ಪದ್ಧತಿಯದು. ಅಲ್ಲಿ ಕಾಲದ ಎಣಿಕೆಗೆ ಅಗತ್ಯವಾದ ಖಗೋಳಶಾಸ್ತ್ರೀಯ ಜ್ಞಾನವು ಹೆಚ್ಚು ನಿಖರವಾದ್ದು. ಚಾಂದ್ರಮಾನ ಪಂಚಾಂಗದ ಎಣಿಕೆಯಲ್ಲಿ ಅಧಿಕ ಮಾಸವನ್ನು ಸೇರಿಸಿಕೊಳ್ಳಬೇಕಾಗುತ್ತದೆ. ಸೇರಿಸಿಕೊಳ್ಳದಿದ್ದರೆ ವರ್ಷದ ೩೬೫ ಚಿಲ್ಲರೆ ದಿನಗಳ ಲೆಕ್ಕ ಒಂದು ಹಂತದಲ್ಲಿ ಸರಿಬರದೆ ಉಳಿದುಬಿಡುತ್ತದೆ. ಋಗ್ವೇದದಲ್ಲಿ ವರ್ಷವು ಸೌರಮಾನದ ಲೆಕ್ಕದಲ್ಲಿ ಉಕ್ತವಾಗಿದೆಯೆಂದು ಕೆಲವು ವಿದ್ವಾಂಸರು ಹೇಳಿದ್ದಾರೆ. ಅದನ್ನು ಡಾ॥ ಎಸ್. ಬಾಲಚಂದ್ರರಾವ್ ಅವರು ಪ್ರಸ್ತುತ ಲೇಖಕನ ಗಮನಕ್ಕೆ ತಂದಿದ್ದಾರೆ. ಬಹುಶಃ ಋಗ್ವೇದದ ಆರ್ಯರಿಗೆ ಆದಿಯಲ್ಲಿ ಚಾಂದ್ರಮಾನ ಎಣಿಕೆಯು ಸಿದ್ಧಿಸಿರಬೇಕು. ಸೌರಮಾನದ ಪ್ರಕಾರ ಎಣಿಕೆಯ ತಿಳಿವೇನಾದರೂ ಇದ್ದರೆ ಅದು ಹರಪ್ಪ ಸಂಸ್ಕೃತಿಯ ಕಾಲದ್ದು ಮತ್ತು ಹರಪ್ಪ ಸಂಸ್ಕೃತಿಯ ನಿರ್ಮಾತೃಗಳ ಕೊಡುಗೆ ಯಾಗಿರುತ್ತದೆ. ನಿಜಕ್ಕೂ ಋತುಗಳು ಸಂಭವಿಸುವುದು ಭೂಮಿಯು ಸೂರ್ಯನ ಸುತ್ತ ಪರಿಭ್ರಮಣ ಮಾಡುವುದರಿಂದ ಎಂಬುದು ಇಂದಿನ ತಿಳಿವಳಿಕೆ. ಋಗ್ವೇದದ ಕವಿಗೆ ಋತುಗಳ ಕಾರಣಕರ್ತ ಚಂದ್ರನೆಂಬ ಮೋಹವಿದೆ, ಅಷ್ಟೆ. ಋಗ್ವೇದದಲ್ಲಾಗಲಿ, ನಂತರದ ಬ್ರಾಹ್ಮಣ ಮತ್ತು ಆರಣ್ಯಕಗಳೆಂಬ ಗ್ರಂಥಗಳಲ್ಲಾಗಲಿ ನಿಖರವಾದ ಖಗೋಳ ಶಾಸ್ತ್ರೀಯ ಅಂಶಗಳು ದಾಖಲಾಗಿದ್ದರೆ ಅದು ಅವರ ಸ್ವಂತದ ವೀಕ್ಷಣೆ ಮತ್ತು ಅಧ್ಯಯನಗಳಿಂದ ಮೂಡಿದುದಾಗಿರದೆ, ಅವರಿಗೂ ಹಿಂದಿನ ಹರಪ್ಪ ನಾಗರಿಕತೆಯ ಕಾಲದ ಜ್ಞಾನದ ದಾಖಲಾತಿಯಾಗಿರುತ್ತದೆ. ಅದನ್ನು ಅವರು ಕೇಳಿ ತಿಳಿದಿದ್ದೇ ಹೊರತು ನೋಡಿ ತಿಳಿದುದಲ್ಲ. ಹೀಗಾಗಿ ವೈದಿಕ ಸಾಹಿತ್ಯದಲ್ಲಿ ಕೆಲವೆಡೆ ತಪ್ಪು ಖಗೋಳಶಾಸ್ತ್ರೀಯ ಅವಲೋಕನಗಳು ದಾಖಲಾಗಿವೆ. ಅದಕ್ಕೊಂದು ನಿದರ್ಶನವನ್ನು ನೋಡಬಹುದು. ಅದನ್ನು ಪ್ರಸ್ತುತ ಲೇಖಕನ 'ಭಾರತೀಯ ವಿಜ್ಞಾನದ ಹಾದಿ' (ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು. ೪೬–೪೮) ಎಂಬ ಗ್ರಂಥದಿಂದ ಉದ್ಧರಿಸಲಾಗಿದೆ.

ಅಥರ್ವವೇದದ ೧೯ನೆಯ ಕಾಂಡದಲ್ಲಿ ಮೊಟ್ಟಮೊದಲಿಗೆ ೨೭ ನಕ್ಷತ್ರಗಳ ಪಟ್ಟಿ ದಾಖಲಾಗಿದೆ. ತೈತ್ತಿರೀಯ ಮತ್ತು ಕಾಠಕ ಶಾಖೆಗಳ ಯಜುರ್ವೇದ ಸಂಹಿತೆಯಲ್ಲಿ ಇದೇ ಪಟ್ಟಿಯನ್ನು ಕೊಡಲಾಗಿದೆ. ಅದೇ ವೇದದ ಮೈತ್ರಾಯಣಿ ಶಾಖೆಯ ಸಂಹಿತೆಯಲ್ಲಿ ಮಾತ್ರ 'ಅಭಿಜಿತ್' ಎಂಬೊಂದು ನಕ್ಷತ್ರವನ್ನು ಸೇರಿಸಿ ಪಟ್ಟಿಯನ್ನು ೨೮ ನಕ್ಷತ್ರಗಳ ಪಟ್ಟಿಯನ್ನಾಗಿ ಮಾಡಲಾಗಿದೆ. ಭೂಮಿಯು ತನ್ನ ಅಕ್ಷದ ಮೇಲೆ ಸೂರ್ಯನ ಸುತ್ತ ಸುತ್ತುವಾಗ ಸೂರ್ಯನು ವಿಷುವದ್ವೃತ್ತವನ್ನು ಹಾಯುವಂತೆ ಕಾಣುವ ಸಮಯವನ್ನು ಸಂಕ್ರಾಂತಿ ಅಥವಾ ವಿಷುವತ್ಸಂಕ್ರಾಂತಿ ಎನ್ನುತ್ತಾರೆ. ಆಗ ಹಗಲು–ರಾತ್ರಿಗಳು ಬಹಳಷ್ಟು ಸಮಸಮನಾಗಿರುತ್ತವೆ. ಅದು ವರ್ಷಕ್ಕೆರಡು ಬಾರಿ ಸಾಧ್ಯ; ಒಂದನ್ನು ಮೇಷಸಂಕ್ರಾಂತಿ (ಮಾರ್ಚ್ ೨೧)ಯೆಂದೂ ಇನ್ನೊಂದನ್ನು ತುಲಾಸಂಕ್ರಾಂತಿ (ಸೆಪ್ಟೆಂಬರ್ ೨೩)ಯೆಂದೂ ಕರೆಯುತ್ತಾರೆ. ಮೇಷಾಯನ ಮತ್ತು ತುಲಾಯನ ಎಂಬ ಹೆಸರುಗಳೂ ಅವಕ್ಕಿವೆ. ನಕ್ಷತ್ರಗಳ ಪಟ್ಟಿಯಲ್ಲಿ ಕೃತ್ತಿಕಾ ಮೊದಲನೆಯದು. (ಅದಕ್ಕಿರುವ ಇನ್ನೊಂದು ಹೆಸರು 'ಆರ್–ಮೀನು'; ನಿಜಕ್ಕೂ ಇದು ಏಳು ನಕ್ಷತ್ರಗಳ ಪುಂಜವೆಂದು ಹೇಳುತ್ತಾರೆ. 'ಪ್ಲೈಡೀಸ್' ಎಂಬುದು ಇದರ ಇಂಗ್ಲಿಷ್ ಹೆಸರು). ಅದೇಕೆ ಮೊದಲನೆಯದಾಯಿತು? ಏಕೆಂದರೆ ಅದು ಮೇಷಸಂಕ್ರಾಂತಿಯ ಸ್ಥಾನದಲ್ಲಿ ಇರುತ್ತದೆ. ನಭೋಮಂಡಲವನ್ನು ಇಂದು ವೀಕ್ಷಣೆ ಮಾಡುವವರನ್ನು ಕೇಳಿದರೆ ಕೃತ್ತಿಕಾ ನಕ್ಷತ್ರವು ಮೇಷಸಂಕ್ರಾಂತಿಯ ಸ್ಥಾನದಲ್ಲಿರುವುದಿಲ್ಲವೆನ್ನುತ್ತಾರೆ. ಶತಮಾನಗಳು ಉರುಳುತ್ತಾ ಬಂದಂತೆ ಕೃತ್ತಿಕೆಯ ಸ್ಥಾನದಲ್ಲಿ ಕೆಲವು ಡಿಗ್ರಿಗಳ ಪಲ್ಲಟ ಆಗಿದೆ. ಮುಂದೆ ಎಷ್ಟೋ ಶತಮಾನಗಳ ನಂತರ ಮತ್ತೆ ಅದು ಮೇಷ ಸಂಕ್ರಾಂತಿಯ ಸ್ಥಾನಕ್ಕೆ ಬರಬಹುದು. ಯಾಕೋಬಿಯ ಲೆಕ್ಕಾಚಾರದಂತೆ ಸುಮಾರು ಕ್ರಿ.ಪೂ. ೩೦೦೦ದ ವೇಳೆಯಲ್ಲಿ ಕೃತ್ತಿಕೆಯು ಮೇಷಸಂಕ್ರಾಂತಿಯಲ್ಲಿತ್ತು. (ಆದ್ದರಿಂದ ಅದನ್ನು ದಾಖಲು ಮಾಡಿದ ಸಾಹಿತ್ಯವು ಆ ಕಾಲದ್ದೆಂದು ಆತನ ಅನಿಸಿಕೆ). ಶತಪಥ ಬ್ರಾಹ್ಮಣದಲ್ಲಿ (೨.೧.೨.೧–೫) ಗಾರ್ಹಪತ್ಯ ಮತ್ತು ಆಹವನೀಯ ಅಗ್ನಿಗಳನ್ನು (ಯಜ್ಞಶಾಲೆಯಲ್ಲಿ) ಸ್ಥಾಪಿಸಲು ಪ್ರಶಸ್ತವಾದ ಸಮಯ ಯಾವುದೆಂಬ ಚರ್ಚೆ ಬಂದಾಗ ಎರಡು ಅಭಿಪ್ರಾಯಗಳನ್ನು ಹೇಳಿದೆ: (ಅ) ಕೃತ್ತಿಕಾ ನಕ್ಷತ್ರದಲ್ಲಿ ಸ್ಥಾಪಿಸಬೇಕು, ಮತ್ತು (ಆ) ಕೃತ್ತಿಕಾ ನಕ್ಷತ್ರದಲ್ಲಿ ಸ್ಥಾಪಿಸಬಾರದು. 'ಸ್ಥಾಪಿಸಬಾರದು' ಎಂಬುದಕ್ಕೆ ಕಾರಣವೇನು? ಬ್ರಾಹ್ಮಣ ಗ್ರಂಥವು

ಅದಕ್ಕೊಂದು ಕಥಾರೂಪದ ವಿವರಣೆ ನೀಡುತ್ತದೆ: ಪ್ರಾರಂಭದಲ್ಲಿ ಕೃತ್ತಿಕೆಯರು ಸಪ್ತರ್ಷಿಮಂಡಲದಲ್ಲಿರುವ ಋಷಿಗಳ ಪತ್ನಿಯರಾಗಿದ್ದರು. ಆದರೆ ಋಷಿಗಳು ಉತ್ತರದಲ್ಲಿ ಹಾಗೂ ಕೃತ್ತಿಕೆಯರು ಪೂರ್ವದಲ್ಲಿ ಇದ್ದಾರೆ. ಹೀಗಾಗಿ ಅವರಿಗೆ ಸಂಭೋಗಕ್ರಿಯೆ ಇಲ್ಲ, ಪ್ರಜೋತ್ಪತ್ತಿಯೂ ಇಲ್ಲ. ಕೃತ್ತಿಕೆಯಲ್ಲಿ ಅಗ್ನಿಗಳನ್ನು ಸ್ಥಾಪಿಸಿದರೆ ಯಜ್ಞಕ್ರಿಯೆಯೂ ಹಾಗೇ ಆಗುತ್ತದೆ; ಅಂದರೆ ಫಲೋತ್ಪತ್ತಿ ಇರುವುದಿಲ್ಲ!




ಶತಪಥ ಬ್ರಾಹ್ಮಣವು ಈ ಅಭಿಮತವನ್ನು ನಿರಾಕರಿಸಿ ಕೃತ್ತಿಕೆಯಲ್ಲಿ ಅಗ್ನಿಗಳ ಸ್ಥಾಪನೆ ಮಾಡುವುದು ಸರಿ ಎನ್ನುತ್ತದೆ. ಅದು ಹೇಗೆ? ಅದಕ್ಕೆ ಮೂರು ವಿವರಣೆಗಳಿವೆ: (ಅ) ಕೃತ್ತಿಕೆಯು ಅಗ್ನಿಯ ನಕ್ಷತ್ರಪುಂಜ; ಆದ್ದರಿಂದ ಇದು ಒಳ್ಳೆಯ ಸಮಯ ಮತ್ತು ಅಧಿಕವಾದ ಫಲೋತ್ಪತ್ತಿ ಇರುತ್ತದೆ; (ಆ) ಬೇರೆ ನಕ್ಷತ್ರಪುಂಜಗಳಲ್ಲಿ ಎರಡು–ಮೂರು–ನಾಲ್ಕು ನಕ್ಷತ್ರಗಳಿದ್ದರೆ ಇಲ್ಲಿ ಆರು–ಏಳು ಇವೆ; ಆದ್ದರಿಂದ ಫಲೋತ್ಪತ್ತಿ ಅಧಿಕವಾಗಿರುತ್ತದೆ; (ಇ) ಕೃತ್ತಿಕೆಯರು ಪೂರ್ವದಿಂದ ಚಲಿಸಿಹೋಗಿಬಿಡುವುದಿಲ್ಲ; ಆದರೆ ಬೇರೆ ನಕ್ಷತ್ರಪುಂಜಗಳು ಹಾಗೆ ಮಾಡುತ್ತವೆ. ಆದ್ದರಿಂದ ಅದು ಪ್ರಶಸ್ತವಾದ ಸಮಯ (ಏತಾ ಹ ವೈ ಪ್ರಾಚ್ಯೈ ದಿಶೋ ನ ಚ್ಯವಂತೇ। ಸರ್ವಾಣಿ ಹ ವಾ ಅನ್ಯಾನಿ ನಕ್ಷತ್ರಾಣಿ ಪ್ರಾಚ್ಯೈ ದಿಶಃ ಚ್ಯವಂತೇ॥).

ಇದರರ್ಥವೇನು? ಕೃತ್ತಿಕೆಯು ಪೂರ್ವದಲ್ಲಿಯೇ ಹುಟ್ಟುತ್ತದೆ, ಎಂದು. ಬೇರೆ ನಕ್ಷತ್ರಪುಂಜಗಳಿಗೂ ಕೃತ್ತಿಕೆಗೂ ಇರುವ ವ್ಯತ್ಯಾಸ ಅದೇ. ನಭೋಮಂಡಲದಲ್ಲಿ ಇದು ಯಾವಾಗಿನ ಘಟನೆಯೆಂಬುದನ್ನು ಆಧುನಿಕ ಕಲನಕಾರರು ಲೆಕ್ಕಮಾಡಿ ಹೇಳುವುದು ಸಾಧ್ಯ. ಇದು ಸುಮಾರು ಕ್ರಿ.ಪೂ. ೨೫೦೦ರ ಸಮಯದಲ್ಲಿ ಸಾಧ್ಯವಿತ್ತೆಂದು ಅವರು ಹೇಳಿದ್ದಾರೆ. ಕೃತ್ತಿಕೆಗಳಲ್ಲಿ ಪ್ರಮುಖವಾದ ನಕ್ಷತ್ರ ಏಟಾ ಟಾವ್ರಿ ಎಂಬುದು. ಅದರ ಆಕಾಶ ರೇಖಾಂಶವು ಸೊನ್ನೆ ಇದ್ದು ಆಕಾಶ ಅಕ್ಷಾಂಶವು ನಗಣನೀಯವಾಗಿದ್ದಾಗ, ಅಂದರೆ ಮೇಷ ಸಂಕ್ರಾಂತಿಯಲ್ಲಿ ಮಾತ್ರ, ಅದು ಪೂರ್ವದಲ್ಲಿ ಉದಯಿಸಬಲ್ಲುದು. ೧೯೮೫ರಲ್ಲಿ ಈ ನಕ್ಷತ್ರದ ಆಕಾಶ ರೇಖಾಂಶವು ೫೯° ೪೭' ೨೪'' ಇದ್ದಿತಂತೆ. ಪೂರ್ಣವಾಗಿ ಪೂರ್ವದಲ್ಲಿ ಉದಯಿಸಲು ಅದಕ್ಕೆ ಕ್ರಿ.ಪೂ. ೨೩೩೪ರಲ್ಲಿ ಸಾಧ್ಯವಿದ್ದಿತೆಂದು ಲೆಕ್ಕಾಚಾರ ಮಾಡಲಾಗಿದೆ. ಶತಪಥ ಬ್ರಾಹ್ಮಣದ ವೇಳೆಗೆ, ಅಂದರೆ ಕ್ರಿ.ಪೂ. ೧೦೦೦ದ ಸುಮಾರಿಗೆ, ಅದರ ಆಕಾಶ ರೇಖಾಂಶವು ಆಗಲೇ ೧೮ ಡಿಗ್ರಿಗಳನ್ನು ತಟಾಯಿಸಿತ್ತು. ಇದರಿಂದ ತೀರ್ಮಾನಿಸಬಹುದಾದ್ದೇನೆಂದರೆ ಸುಮಾರು ಕ್ರಿ.ಪೂ. ೨೪೦೦ರ ಘಟನೆಯನ್ನು ಸುಮಾರು ಕ್ರಿ.ಪೂ. ೧೦೦೦ದಲ್ಲಿ ಅಂದಿನ ಘಟನೆಯೇನೋ ಎಂಬಂತೆ ದಾಖಲಿಸಲಾಗಿದೆ. ನಿಜಕ್ಕೂ ಪೂರ್ವದಲ್ಲೇ ಉದಯಿಸುತ್ತಿದ್ದಾಗ ಕೃತ್ತಿಕೆಯನ್ನು ಅವಲೋಕನ ಮಾಡಿದ್ದು ಹರಪ್ಪ ನಾಗರಿಕತೆಯ ಕಾಲದ ಜನ. ಹಾಗೆ ಅದನ್ನು ಗುರುತಿಸಲು ಅವರಿಗೆ ಖಗೋಳಶಾಸ್ತ್ರದ ಪರಿಚಯವಿದ್ದಿತು ಹಾಗೂ ಅದರ ಅಗತ್ಯವಿದ್ದಿತು. ಶತಪಥ ಬ್ರಾಹ್ಮಣದ ಕಾಲಕ್ಕೆ ಗ್ರಂಥಕರ್ತೃವು ನೇರವಾಗಿ ಅವಲೋಕನವನ್ನು ಮಾಡದೆ ಹಿಂದೆ ಹೇಳಲಾಗುತ್ತಿದ್ದ ಮಾತನ್ನು ಜನಜನಿತವಾಗಿ ನಡೆದುಬಂದಂತೆ ದಾಖಲಿಸಿಬಿಟ್ಟಿದ್ದಾನೆ. ಇಂತಹ ಸಂಗತಿಗಳು ಬೇರೆಡೆಯಲ್ಲೂ ನಡೆದಿವೆ. ಸ್ವತಃ ಈ ಬ್ರಾಹ್ಮಣಗ್ರಂಥವು ಖಗೋಳಶಾಸ್ತ್ರದಲ್ಲಿ ಹೇಳಿಕೊಳ್ಳಬಹುದಾದಂತಹ ಆಸಕ್ತಿಯನ್ನು ಹೊಂದಿಲ್ಲ. ಅಗ್ನಿಕುಂಡಗಳ ಸ್ಥಾಪನೆಗೆ ಕೃತ್ತಿಕಾ ನಕ್ಷತ್ರವು ಪ್ರಶಸ್ತವೆಂದು ಹೇಳಿದ್ದಾದನಂತರ ರೋಹಿಣಿ, ಮೃಗಶಿರ, ಫಲ್ಗುಣಿ, ಹಸ್ತ, ಇತ್ಯಾದಿ ನಕ್ಷತ್ರಗಳೂ ಅಷ್ಟೇ ಪ್ರಶಸ್ತವೆಂದು ಹೇಳುತ್ತಾ ಆ ನಕ್ಷತ್ರಗಳ ಐತಿಹ್ಯವನ್ನು ಕುರಿತಂತೆ ಬಾಲಿಶವಾದ ವಿವರಣೆಗಳನ್ನು ಈ ಗ್ರಂಥವು ನೀಡುತ್ತದೆ. ಉದಾಹರಣೆಗೆ, ಮೃಗಶಿರ: "ಅದು ಪ್ರಜಾಪತಿಯ ತಲೆ. ತಲೆಯೆಂದರೆ ಯಾವಾಗಲೂ ಶ್ರೇಷ್ಠ; ತಲೆಯ ಅರ್ಥವೇ ಶ್ರೇಷ್ಠ ಎಂದು. ಆದ್ದರಿಂದಲೇ ಸಮುದಾಯದ ಯಜಮಾನನನ್ನು ಶ್ರೇಷ್ಠನೆನ್ನುವುದು." ಇಂತಹ ವಿವರಣೆ ನೀಡುವ ಪುರೋಹಿತ ವರ್ಗಕ್ಕೆ ಖಗೋಳಶಾಸ್ತ್ರದಲ್ಲಿ ಎಷ್ಟು ನಿರಾಸಕ್ತಿ ಇದೆಯೆಂದು ಒತ್ತಿಹೇಳುವ ಅಗತ್ಯವಿಲ್ಲ. ಅವರಿಗೆ ನಕ್ಷತ್ರವೆಂದರೆ "ನ–ಕ್ಷತ್ರ" (ಕ್ಷಾತ್ರಶಕ್ತಿ ಇಲ್ಲದಿರುವುದು). ಅವುಗಳ ಕ್ಷಾತ್ರಶಕ್ತಿಯನ್ನು ಸೂರ್ಯನು ಅಪಹರಿಸಿಬಿಟ್ಟಿದ್ದಾನಂತೆ; ಅದಕ್ಕೇ ಅವನಿಗೆ ಆದಿತ್ಯನೆಂಬ ಹೆಸರಿದೆಯಂತೆ.

ಖಗೋಳಶಾಸ್ತ್ರ ಜ್ಞಾನವು ವೈದಿಕ ಆರ್ಯರಿಗೆ ಯಾವುದೋ ಅಸುರರಿಂದ ದೊರೆಯಿತೆನ್ನುವ ರೀತಿಯಲ್ಲಿ ತೈತ್ತಿರೀಯ ಬ್ರಾಹ್ಮಣವು ಉಲ್ಲೇಖ ಮಾಡಿದೆ (೧.೧.೨.೪–೬). ಅಸುರರು ಆರ್ಯರಿಂದ ಭಿನ್ನರಾದವರು. ಇಲ್ಲಿ ಅವರನ್ನು ಕಾಲತಜ್ಞರು (ಕಾಲವನ್ನು ತಿಳಿದವರು) ಎಂದು ಕರೆಯಲಾಗಿದೆ. ಅಂದರೆ, ಬಹುಶಃ ವರ್ಷದ ಪಂಚಾಂಗವನ್ನು ತಿಳಿದಿದ್ದವರು, ಎಂದರ್ಥ. ಈ ಅಸುರರು ಯಾರೆಂಬುದು ಬಹಳವಾಗಿ ಚರ್ಚೆಯಾಗಿದೆ. ಅವರು ಹರಪ್ಪ ನಾಗರಿಕತೆಯ ಜನರಿರಬಹುದೆ? ಅವರು 'ಕಾಲತಜ್ಞರು' ಎಂಬ ನಿಟ್ಟಿನಲ್ಲಿ ನೋಡಿದರೆ 'ಬಹುಶಃ ಇರಬಹುದು', ಎಂಬ ಉತ್ತರ ಅಪ್ರಾಸಂಗಿಕವಲ್ಲ.

(ಆ) ಇನ್ನು ಎರಡನೆಯ ಅಂಶ: "ನವೋನವೋ ಭವತಿ..." ಎಂಬ ಮಂತ್ರವು ಚಂದ್ರನ ಕ್ರಮೇಣ ಕ್ಷೀಣಿಸುವಿಕೆ ಮತ್ತು ವರ್ಧನೆಯನ್ನು ಹೇಳಿ, ಧ್ವಜವನ್ನು ಹಿಡಿದು ಉಷಃಕಾಲಕ್ಕೆ ಮುನ್ನ ಚಂದ್ರನು ನಿರ್ಗಮಿಸುತ್ತಾನೆ ಎಂದು ಹೇಳಿದೆ. ಚಂದ್ರನು ನಮ್ಮ ಆಯುಷ್ಯವನ್ನು ಹೆಚ್ಚಿಸುತ್ತಾನೆಂದು ಸಹ ಹೇಳಿದೆ. ನಾವು ಗಮನಿಸಬೇಕಾದ್ದೇನೆಂದರೆ ಇಲ್ಲಿ ಎಂತಹ ಆಶೀರ್ವಚನವೂ ಇಲ್ಲವೆಂಬುದು. ಕೇವಲ ಒಂದು ಸಂಗತಿಯನ್ನು ಮತ್ತು ಆಶಯವನ್ನು ಅದು ವ್ಯಕ್ತಪಡಿಸಿದೆ. ಉಚ್ಚ ವರ್ಣದವರೆನ್ನಲಾದವರಲ್ಲಿ ಈ ಮಂತ್ರವನ್ನು ಆಶೀರ್ವಾದದ ರೂಪದಲ್ಲಿ ಪ್ರಯೋಗಿಸುವುದು ರೂಢಿ. ಒಬ್ಬ ಮಹಿಳೆಯು ಹಿರಿಯರಿಗೆ ಅಥವಾ ದೇವರ ದಯೆಯನ್ನು ಕೊಡಿಸಿಕೊಡುವುದಾಗಿ ಭಾವಿಸಿಕೊಳ್ಳುವ ಪುರೋಹಿತನಿಗೆ ನಮಸ್ಕರಿಸಿದರೆ ಅಕ್ಷತೆಯ ಕಾಳನ್ನು ಆಕೆಯ ತಲೆಯ ಮೇಲೆ ಹಾಕುವಾಗ ಈ ಮಂತ್ರವನ್ನು ಹೇಳಲಾಗುತ್ತದೆ. ಮಂತ್ರದ ಅರ್ಥಕ್ಕೂ ಮಹಿಳೆಗೆ ಆಶೀರ್ವಚನವೆಂದು ಹೇಳಲಾಗುವುದಕ್ಕೂ ಯಾವ ಸಂಬಂಧವೂ ಇಲ್ಲ. ಮಹಿಳೆಗೆ ಹೇಳಿದಂತೆಯೇ ಪುರುಷನಿಗೂ ಏಕೆ ಹೇಳಬಾರದು? ಉತ್ತರವೇನೂ ಇಲ್ಲ. "ನವೋನವೋ" ಮತ್ತು "ದೀರ್ಘಮಾಯುಃ" ಎಂಬ ಪದಗಳು ಮಂತ್ರವನ್ನು ಆಶೀರ್ವಚನವೆಂದು ಬಗೆಯಲು ಕಾರಣವಾಗಿದ್ದಿರಬಹುದು. ಯಾವ ಅರ್ಥದಲ್ಲಿ ಮಹಿಳೆಗೂ ಚಂದ್ರನಿಗೂ ಸಾಮ್ಯವಿದೆಯೆಂದು ಭಾವಿಸಬೇಕು? ನಮಸ್ಕರಿಸುವ ಮಹಿಳೆಯು ಕ್ಷೀಣಿಸಿ ನಂತರ ವರ್ಧಿಸಲಿ ಎಂದು ಹೇಳುವುದುಂಟೆ? ಇಲ್ಲಿ ಎಲ್ಲೂ "ನೀನು ಚಂದ್ರನ ಕಾಂತಿಯುಳ್ಳವಳಾಗು" ಎಂಬ ಆಶಯವು ಪ್ರಕಟವಾಗಿಲ್ಲ. ಮಂತ್ರಗಳ ಅರ್ಥದ ಗೋಜಿಗೆ ಹೋಗದೆ ವಿವಿಧ ಸಂದರ್ಭಗಳಿಗೆ ಅವನ್ನು ಅಳವಡಿಸಿಕೊಂಡಿರುವುದು ವೇದಾರ್ಥವು ತೀರಾ ಗೌಣ ಎಂಬಂತಾಗಿದೆ. ಇದೇ ಸೂಕ್ತದಲ್ಲಿ ಮುಂದೆ ಇಂತಹ ಇನ್ನೊಂದು ಮಂತ್ರವೂ ವಿಪರ್ಯಾಸಕ್ಕೆ ಗುರಿಯಾಗಿದೆ. ಅದನ್ನು ಮುಂದೆ ನೋಡೋಣ.

**ಜಿ. ರಾಮಕೃಷ್ಣ**
೨ – ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫



## ಸ್ವಾತಂತ್ರ್ಯಾನಂತರದ ಭಾರತ – 6

# ಪ್ರಧಾನಿಯಾಗಿ ಲಾಲ್ ಬಹದ್ದೂರ್ ಶಾಸ್ತ್ರಿ ಭಾರತ–ಪಾಕಿಸ್ತಾನ ಯುದ್ಧ

ಜವಹರಲಾಲ್ ನೆಹರೂ ನಿಧನಾನಂತರ ಒಂದು ವಾರದಲ್ಲೇ ಲಾಲ್‌ಬಹದ್ದೂರ್ ಶಾಸ್ತ್ರಿ ಭಾರತದ ಎರಡನೇ ಪ್ರಧಾನಿಯಾಗಿ ಅಧಿಕಾರ ವಹಿಸಿಕೊಂಡರು. ೧೯೬೪ರ ಜೂನ್ ೨ರಂದು ಕಾಂಗ್ರೆಸ್ ಪಾರ್ಲಿಮೆಂಟರಿ ಪಾರ್ಟಿಯಲ್ಲಿ 'ಸರ್ವಾನುಮತ'ದಿಂದ ಆಯ್ಕೆಗೊಂಡಿದ್ದ ಶಾಸ್ತ್ರಿಯವರು ಪ್ರಧಾನಿಯಾದರು. ಹತ್ತೊಂಬತ್ತು ತಿಂಗಳಷ್ಟೇ ಅಧಿಕಾರದಲ್ಲಿದ್ದ ಅವರು ನೆಹರೂ ನೀತಿಗಳನ್ನೇ ಮುಂದುವರಿಸಿಕೊಂಡು ಹೋದರು. ಸ್ವತಂತ್ರ ಭಾರತದ ಮೊದಲ ಪ್ರಧಾನಿಯಾಗಿ ಸುದೀರ್ಘ ಕಾಲ ಆಡಳಿತ ನಡೆಸಿದ ಜವಹರಲಾಲ್ ನೆಹರೂ ಅವರ ಸಾಧನೆಗಳನ್ನು, ನ್ಯೂನತೆಗಳನ್ನು ಪರಿಶೀಲಿಸುವುದು ಈ ಲೇಖನದ ಉದ್ದೇಶವಲ್ಲ. ಅದರ ಕುರಿತು ಸಾಕಷ್ಟು ವ್ಯಾಖ್ಯಾನಗಳು, ಪ್ರಕಟಗೊಂಡಿವೆ, ಪ್ರಕಟಗೊಳ್ಳುತ್ತಿವೆ. ದೇಶವಿಭಜನೆಯ ಪರಿಣಾಮವಾಗಿ ನಡೆದ ಹತ್ಯಾಕಾಂಡ, ಲಕ್ಷಗಟ್ಟಲೆ ನಿರಾಶ್ರಿತರ ಆಗಮನ, ಕೋಮುಗಲಭೆಗಳಿಂದಾದ ಹಿಂಸಾಚಾರದಂಥ ಕಠಿಣ ಪರಿಸ್ಥಿತಿಯಲ್ಲಿ ಅಧಿಕಾರದ ಚುಕ್ಕಾಣಿ ಹಿಡಿದ ಪ್ರಧಾನಿ ನೆಹರೂ ನವಭಾರತ ನಿರ್ಮಾಣಕ್ಕೆ ಬುನಾದಿ ನಿರ್ಮಿಸಿದರೆಂಬುದು ನಿರ್ವಿವಾದ ಸಂಗತಿ. ಯೋಜನಾಬದ್ಧವಾದ ಆರ್ಥಿಕ ವ್ಯವಸ್ಥೆಯನ್ನು ರೂಪಿಸಿದ, ವಿದೇಶಾಂಗ ನೀತಿಗೆ ನಿರ್ದಿಷ್ಟವಾದ ದಿಶೆಯನ್ನು ನೀಡಿದ ಅವರು ಸ್ವತಂತ್ರ ಭಾರತದ ಇತಿಹಾಸದಲ್ಲಿ ತಮ್ಮದೇ ಆದ ಸ್ಥಾನವನ್ನು ಪಡೆದುಕೊಂಡಿದ್ದಾರೆ.

ಆದರ್ಶವಾದಿಯಾಗಿದ್ದ ನೆಹರೂ ನಿರ್ಮಿಸಲು ಹೊರಟ 'ಸಮಾಜವಾದಿ ಮಾದರಿ' ಸಮಾಜ, ಅದಕ್ಕಾಗಿ ಅವರು ಅನುಸರಿಸಿದ ನೀತಿಗಳು ಜನಸಾಮಾನ್ಯರಿಗಿಂತ ಹೆಚ್ಚಾಗಿ ಬಂಡವಾಳಗಾರರಿಗೆ, ಶ್ರೀಮಂತರಿಗೆ ಹೆಚ್ಚು ಅನುಕೂಲವಾಗಿ ಪರಿಣಮಿಸಿತು. ಭಾರತದಲ್ಲಿ ಬಂಡವಾಳಶಾಹಿ ವ್ಯವಸ್ಥೆಯ ನಿರ್ಮಾಣಕ್ಕೆ ಭದ್ರವಾದ ಅಸ್ತಿಭಾರ ಹಾಕಿತು. ಸಾಕಷ್ಟು ದೀರ್ಘಕಾಲ ನೆಹರೂ ರೂಪಿಸಿದ ನೀತಿಗಳು ಅನುಸರಣೆಯಲ್ಲಿದ್ದಾಗ್ಯೂ ಕ್ರಮೇಣ ಅದು ಅದೃಶ್ಯವಾಗತೊಡಗಿತು. ನವಭಾರತದ ನಿರ್ಮಾಣದಲ್ಲಿ ಗಾಂಧಿ ತತ್ವಗಳಾಗಲಿ, ನೆಹರೂ ಆದರ್ಶಗಳಾಗಲಿ ಇಂದು ಅನುಷ್ಠಾನದಲ್ಲಿಲ್ಲ. ಪರಿಸ್ಥಿತಿಯನ್ನು ಅವಲೋಕಿಸಿದರೆ ದೇಶದಲ್ಲಿ ಈಗ ಶ್ರೀಮಂತರು ಹೆಚ್ಚು ಶ್ರೀಮಂತರಾಗಿದ್ದಾರೆ, ಬಡಜನರ ಸ್ಥಿತಿ ಇನ್ನಷ್ಟು ಹೀನಾಯವಾಗಿರುವುದು ಗೋಚರ ವಾಗುತ್ತದೆ. ಸಮಾಜವಾದಿ ಮಾದರಿ, ಜಾತ್ಯತೀತತೆ, ಜನಪರನೀತಿ ಎಲ್ಲ ಕಾಗದದ ಮೇಲೆ ಮಾತ್ರ ಉಳಿದಿದೆ. ಬಂಡವಾಳಶಾಹಿ ವ್ಯವಸ್ಥೆ ಭದ್ರವಾಗಿ ನೆಲೆಗೊಂಡಿದೆ, ವಿದೇಶೀ ಬಂಡವಾಳದ ಮೇಲೆ ಅವಲಂಬನೆ ಅಧಿಕ ಗೊಂಡಿದೆ, ಕೃಷಿಕ್ಷೇತ್ರಕ್ಕೂ ಬಂಡವಾಳದ ವಿಸ್ತರಣೆ ಯಾಗಿದ್ದು ಬಡರೈತರ ಸ್ಥಿತಿ ಮತ್ತಷ್ಟು ಚಿಂತಾಜನಕ ವಾಗಿದೆ. ಬೇರೆ ಮಾರ್ಗ ಕಾಣದೆ ಬಡರೈತ ಆತ್ಮಹತ್ಯೆಗೆ ಶರಣಾಗುವಂತಾಗಿದೆ. ಅಭಿವೃದ್ಧಿಯ ಹೆಸರಿನಲ್ಲಿ ಆಗುತ್ತಿರುವುದೆಲ್ಲ ಬಂಡವಾಳಶಾಹಿಗಳ ಏಳಿಗೆ. ಉಳಿದಿರುವುದು ವ್ಯವಸ್ಥೆ ಮಾತ್ರ.

ತೀವ್ರವಾದ ಹಣಕಾಸಿನ ಕೊರತೆಯ ಕಾಲದಲ್ಲಿ, ಅದರಲ್ಲೂ ವಿದೇಶೀ ವಿನಿಮಯದ ಅಭಾವದ ಹಿನ್ನೆಲೆಯಲ್ಲಿ ಜಾರಿಗೆ ತರಲಾದ ನಿರ್ಬಂಧಗಳು ಕಾಳಸಂತೆ ನಿರ್ಮಾಣಕ್ಕೆ ಎಡೆಕೊಟ್ಟವು. ವಿದೇಶೀ ಐಷಾರಾಮಿ ಸರಕುಗಳಿಗೆ ಮಾರುಹೋದವರು ಅಡ್ಡದಾರಿ ಹಿಡಿಯುವಂತಾಯಿತು. ಲೈಸನ್ಸ್–ಪರ್ಮಿಟ್ ರಾಜ್ ಎಂದು ಕರೆಯಲಾದ ವ್ಯವಸ್ಥೆ ಸೃಷ್ಟಿಯಾಯಿತು. ಇದರ ಲಾಭ ಪಡೆದುಕೊಂಡು ದಿಢೀರ್ ಶ್ರೀಮಂತ ರಾದವರು ಎಷ್ಟೋ ಮಂದಿ. ಇದು ಒಂದು ರೀತಿಯಲ್ಲಿ ಭ್ರಷ್ಟಾಚಾರದಲ್ಲಿ ತೊಡಗಲು ಅನುವು ಮಾಡಿಕೊಟ್ಟಿತು. ಇಂಥ ನಿರ್ಬಂಧಗಳು ಸಾಕಷ್ಟು ದೀರ್ಘಕಾಲ ನಮ್ಮ ದೇಶದಲ್ಲಿದ್ದುವು. ಅದು ಕ್ರಮೇಣ ಅದೃಶ್ಯವಾಗಿ ಹೋದದ್ದು ಎಂಭತ್ತರ ದಶಕದಲ್ಲಿ. ಜಾಗತೀಕರಣ, ಉದಾರೀಕರಣ, ವಿದೇಶೀ ಬಂಡವಾಳಕ್ಕೆ ಮುಕ್ತ ಅವಕಾಶದ ನೀತಿಗಳು ಅನುಷ್ಠಾನಗೊಂಡಮೇಲೆ, ಕಾಂಗ್ರೆಸ್ ಆಡಳಿತದಲ್ಲೇ. ವಿದೇಶೀ ಬಂಡವಾಳವನ್ನು ನಿಯಂತ್ರಿಸಿ ದೇಸೀ ಉದ್ಯಮಿಗಳಿಗೆ ಪ್ರೋತ್ಸಾಹ ನೀಡಲು ನೆಹರೂ ಮುಂದಿದ್ದರು. ಉದ್ಯಮಗಳು ದೇಸೀಯರ ಒಡೆತನದಲ್ಲೇ ಇರಬೇಕೆಂಬ ಇರಾದೆಯಿಂದ ವಿದೇಶೀ ಬಂಡವಾಳ ಹೂಡಿಕೆಯನ್ನು ಶೇಕಡ ೪೯ರಷ್ಟಕ್ಕೆ ನಿಗದಿ ಗೊಳಿಸಿದ್ದರು. ಅಗತ್ಯವಾದ ಕ್ಷೇತ್ರಗಳಲ್ಲಿ ಸರಕಾರವೇ ಪ್ರವೇಶಿಸಿ ಸಾರ್ವಜನಿಕ ವಲಯ ಉದ್ಯಮಗಳನ್ನು ವಿಸ್ತರಿಸಲಾಯಿತು. ದೊಡ್ಡ ಕೈಗಾರಿಕೋದ್ಯಮಿಗಳು ಸಣ್ಣ ಕೈಗಾರಿಕೆಗಳ ಕ್ಷೇತ್ರದಲ್ಲಿ ಪ್ರವೇಶ ಮಾಡದಂತೆ ಪ್ರತಿಬಂಧ ಹೇರಲಾಗಿತ್ತು. ಮೂಲ ಉದ್ದೇಶ ಸಣ್ಣ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡಿ ಸರಕು ಉತ್ಪಾದನೆಯನ್ನು ವಿಸ್ತಾರಗೊಳಿಸುವುದಾಗಿತ್ತು. ಈಗ ಅವೆಲ್ಲ ಹೋಗಿ ಸಣ್ಣ ಕೈಗಾರಿಕೆಗಳಿಗೆ ಉಳಿಗಾಲವೇ ಇಲ್ಲದಂತಾಗಿದೆ.

ಭಾರತದ ಆಡಳಿತ ಭಾಷೆಯ ವಿಷಯದಲ್ಲಿ ಜವಹರಲಾಲ್ ನೆಹರೂ ಕಾಂಗ್ರೆಸ್ಸಿನಲ್ಲಿದ್ದ ಹಿಂದಿ ದುರಭಿಮಾನಿಗಳ ಒತ್ತಡಕ್ಕೆ ಮಣಿದು ಹಿಂದಿ ಭಾಷೆಗೆ ಪ್ರಾಧಾನ್ಯತೆ ನೀಡಿದ್ದು ದಕ್ಷಿಣ ಭಾರತದಲ್ಲಿ ಅಸಮಾಧಾನದ ಭುಗಿಲೆಬ್ಬಿಸಿತು. ತಮಿಳುನಾಡಿನಲ್ಲಿ ಇದರ ಲಾಭ ಪಡೆದುಕೊಂಡು ದೊಡ್ಡ ಪ್ರಮಾಣದಲ್ಲಿ ಹೋರಾಟ ನಡೆಸಿದ್ದು ದ್ರಾವಿಡ ಮುನ್ನೇತ್ರ ಕಳಗಂ (ಡಿಎಂಕೆ). ಪ್ರತ್ಯೇಕತೆಯ ಅಜೆಂಡಾ ಇರಿಸಿಕೊಂಡಿದ್ದ ಈ ಪಕ್ಷದ ಪ್ರಭಾವದ ವರ್ಧನೆಗೆ ಹಿಂದಿ ಹೇರಿಕೆ ಅನುಕೂಲವಾದ ವಾತಾವರಣ ನಿರ್ಮಿಸಿತು. ಈ ಸಮಸ್ಯೆ ಪರಿಹಾರಗೊಂಡಿದ್ದು ೧೯೬೬ರಲ್ಲಿ, ಹಿಂದಿ ಮತ್ತು ಇಂಗ್ಲಿಷ್ ಎರಡನ್ನು ಅಧಿಕೃತ ಭಾಷೆ ಎಂದು ಪ್ರಕಟಿಸಿದ ಮೇಲೆ. ಇದಕ್ಕೆ ಕಾಂಗ್ರೆಸ್ ತೆತ್ತಬೆಲೆ ತಮಿಳುನಾಡಿನಲ್ಲಿ ಅಧಿಕಾರ ಕಳೆದುಕೊಂಡದ್ದು. ಆಗ ಪ್ರಾರಂಭವಾದ ಈ ಪ್ರಾದೇಶಿಕ ಪಕ್ಷದ ಆಳ್ವಿಕೆ ಇವತ್ತೂ ಮುಂದುವರಿದಿದೆ. ನೆಹರೂ ರೂಪಿಸಿದ ಅಲಿಪ್ತ ವಿದೇಶೀ ನೀತಿ ಸಾಕಷ್ಟು ವರ್ಷಗಳು ಇತ್ತು ಸುಮಾರು ನಾಲ್ಕು ದಶಕಗಳ ಕಾಲ. ಸೋವಿಯೆತ್ ಒಕ್ಕೂಟದ ವಿಘಟನೆಯವರೆಗೆ ಅದರೊಂದಿಗೆ ಸಂಬಂಧಗಳು

ನಿಕಟವಾಗಿದ್ದುವು. ಹಾಗಿದ್ದರೂ ಅಮೆರಿಕ ಪರನೀತಿಗೆ ಕುಂದೇನೂ ಇರಲಿಲ್ಲ. ಏಕಕೇಂದ್ರೀಯ ವ್ಯವಸ್ಥೆ ಜಗತ್ತಿನಲ್ಲಿ ಬಂದಮೇಲೆ ಅಲಿಪ್ತನೀತಿಗೆ ಗ್ರಹಣ ಹಿಡಿಯಿತು. ಈಗ ಅದು ಹೆಚ್ಚು ಕಡಿಮೆ ನಿಷ್ಕ್ರಿಯ ಗೊಂಡಿದೆ, ಭಾರತ ಅಮೆರಿಕದ ಹಿಂಬಾಲಕವಾಗಿದೆ. ಪ್ರಥಮ ಪ್ರಧಾನಿ ಅನುಸರಿಸಿದ ನೀತಿಗಳಾವುವೂ ಈಗ ಚಾಲ್ತಿಯಲ್ಲಿಲ್ಲದಿರುವುದು ಬೇರೆಯೇ ವಿಷಯ.

ಪಂಡಿತ ಜವಹರಲಾಲ್ ನೆಹರೂ ಕಾಲದಲ್ಲಿ ದೇಶದ ಔದ್ಯೋಗೀಕರಣಕ್ಕೆ ಚಾಲ್ತಿ ದೊರೆತ ಮೇಲೆ ನುರಿತ ಸಿಬ್ಬಂದಿಯ ಕೊರತೆ ನಿವಾರಿಸಲು ವಿದ್ಯಾಭ್ಯಾಸಕ್ಕೆ, ಅದರಲ್ಲೂ ತಾಂತ್ರಿಕ ಶಿಕ್ಷಣಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಲಾಯಿತು. ಇಂಜಿನಿಯರಿಂಗ್ ಶಿಕ್ಷಣ – ಮುಖ್ಯವಾಗಿ 'ಯುನೆಸ್ಕೋ'ದ ನೆರವಿನಿಂದ ದೇಶದಲ್ಲಿ ಕೆಲವೆಡೆ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ (ಐಐಟಿ)ಗಳು ಸ್ಥಾಪನೆಗೊಂಡವು. ಅದೇ ಬಗೆಯಲ್ಲಿ ಉದ್ಯಮಗಳ ನಿರ್ವಹಣೆಗೆ ತರಬೇತಿ ನೀಡಲು ದೇಶದಲ್ಲಿ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ (ಐಐಎಂ)ಗಳು ಪ್ರಾರಂಭ ವಾದುವು. ಆದರೆ ಈ ಸಂಸ್ಥೆಗಳಲ್ಲಿ ತರಬೇತಿ ಪಡೆದ ಬಹುಪಾಲು ಪದವೀಧರರ ಲಾಭ ಪಡೆದುಕೊಂಡದ್ದು ಅಮೆರಿಕ ಮತ್ತು ಐರೋಪ್ಯ ರಾಷ್ಟ್ರಗಳು. ಮುಂದುವರಿದ ಈ ಶ್ರೀಮಂತ ರಾಷ್ಟ್ರಗಳಲ್ಲಿ ಹೆಚ್ಚಿನ ಅವಕಾಶಗಳಿದ್ದು ದರಿಂದ ನಮ್ಮ ದೇಶದ ಪ್ರತಿಭೆಯ ವಲಸೆ ಪ್ರಾರಂಭ ವಾಯಿತು. ಆಗ ಇದನ್ನು ಪ್ರತಿಭಾ ಪಲಾಯನ ಎಂದೇ ಪರಿಗಣಿಸಲಾಗಿತ್ತು. ಈಗ ಪರಿಸ್ಥಿತಿ ಬೇರೆಯಾಗಿದೆ. ವಿದೇಶಗಳಲ್ಲಿ ನೆಲೆಸಿರುವ ಭಾರತೀಯ ವೈದ್ಯರು, ಇಂಜಿನಿಯರುಗಳು ಅನಿವಾಸಿ ಭಾರತೀಯ ರೆನಿಸಿಕೊಂಡು ಸಾಕಷ್ಟು ವಿದೇಶೀ ವಿನಿಮಯ ಗಳಿಸಿಕೊಡುತ್ತಿದ್ದಾರೆ.

ನೆಹರೂ ನಂತರ ಪ್ರಧಾನಿ ಪಟ್ಟಕ್ಕೆ ಕಾಂಗ್ರೆಸ್ ಪಕ್ಷದಲ್ಲಿ ಸಾಕಷ್ಟು ಪೈಪೋಟಿ ಇತ್ತು. ಸರ್ವಾನುಮತದ ಆಯ್ಕೆ ಎನ್ನುವುದು ಕಾಂಗ್ರೆಸ್ಸಿನ ಪರಂಪರೆಗಳಲ್ಲಿ ಒಂದು. ಸ್ವಾತಂತ್ರ್ಯ ಹೋರಾಟದ ಕಾಲದಲ್ಲೂ ಕಾಂಗ್ರೆಸ್ ಅಧ್ಯಕ್ಷ ಸ್ಥಾನಕ್ಕೆ ಪೈಪೋಟಿ ಇದ್ದಾಗ್ಯೂ ಅಂತಿಮವಾಗಿ ಒಮ್ಮತದ ಪ್ರದರ್ಶನ ನಡೆಯುತ್ತಿದ್ದುದು ಗೊತ್ತಿರುವ ವಿಚಾರ. ಪ್ರಧಾನಿ ಹುದ್ದೆಗೆ ಮೊರಾರ್ಜಿ ದೇಸಾಯಿ ಮತ್ತು ಲಾಲ್‌ಬಹದ್ದೂರ್ ಶಾಸ್ತ್ರಿ ಇಬ್ಬರೂ ಸ್ಪರ್ಧಿಗಳು. ಮೊರಾರ್ಜಿ ಸಂಪುಟದಲ್ಲಿ ಹಿರಿಯ, ಅನುಭವಸ್ಥ, ಸಮರ್ಥ ಆಡಳಿತಗಾರ, ನಿಷ್ಕಳಂಕ. ಆದರೆ ಹಠಮಾರಿ ಹಾಗೂ ಬಲಪಂಥೀಯ. ಲಾಲ್‌ಬಹದ್ದೂರ್ ಶಾಸ್ತ್ರಿ ಮೃದುಸ್ವಭಾವದ ವ್ಯಕ್ತಿ, ಗೌರವಾನ್ವಿತ, ನಿಷ್ಠಾವಂತ, ಪ್ರಾಮಾಣಿಕ. ಇವರಿಬ್ಬರ ಮಧ್ಯೆ ಅಂತಿಮ ಆಯ್ಕೆಯನ್ನು ನಿರ್ಧರಿಸಿದ್ದು ೧೯೬೪ರಲ್ಲೇ ಕಾಂಗ್ರೆಸ್ಸಿನಲ್ಲಿ ತಲೆ ಎತ್ತಿದ್ದ ಸಿಂಡಿಕೇಟ್ ಎಂಬ ಪ್ರಭಾವಿ ಗುಂಪಿನಿಂದ. ಇದರಲ್ಲಿ ಕಾಂಗ್ರೆಸ್ ಅಧ್ಯಕ್ಷ ಕಾಮರಾಜ ನಾಡಾರ್, ಮುಂಬಯಿಯ ಎಸ್. ಕೆ. ಪಾಟೀಲ್, ಆಂಧ್ರದ ಎನ್. ಸಂಜೀವ ರೆಡ್ಡಿ, ಬಂಗಾಳದ ಅತುಲ್ಯ ಘೋಷ್, ಕರ್ನಾಟಕದ ಎಸ್. ನಿಜಲಿಂಗಪ್ಪ (ಮುಂದೆ ಇವರು ಕಾಂಗ್ರೆಸ್ಸಿನ ಅಧ್ಯಕ್ಷರಾದರು.) ಇವರುಗಳಿದ್ದರು. ಕಾಂಗ್ರೆಸ್ ಪಾರ್ಲಿಮೆಂಟರಿ ಪಾರ್ಟಿ ಸದಸ್ಯರ ಅಭಿಪ್ರಾಯ


ಯುದ್ಧದಲ್ಲಿ ಟ್ಯಾಂಕ್ ದಾಳಿ

ಸಂಗ್ರಹಣೆಯ ಕಸರತ್ತಿನ ನಂತರ ಸಿಂಡಿಕೇಟ್‌ನ ಆಯ್ಕೆ ಶಾಸ್ತ್ರಿಯವರಾಗಿತ್ತು. ಮೊರಾರ್ಜಿಗೆ ಕಾಂಗ್ರೆಸ್ ಪಕ್ಷದಿಂದ ಪ್ರಧಾನಿಯಾಗುವ ಅವಕಾಶ ದೊರಕಲೇ ಇಲ್ಲ. ಶಾಸ್ತ್ರಿ ನಂತರ ಅಧಿಕಾರಕ್ಕೇರಿದ್ದು ನೆಹರೂ ಪುತ್ರಿ ಇಂದಿರಾ ಗಾಂಧಿ.

ಶಾಸ್ತ್ರಿ ಪ್ರಧಾನಿಯಾದ ಮೇಲೆ ನೆಹರೂ ಸಂಪುಟ ದಲ್ಲಿದ್ದವರನ್ನೇ ಬಹುತೇಕವಾಗಿ ಮುಂದುವರಿಸಿದರು. ಇಂದಿರಾ ಗಾಂಧಿಯವರನ್ನು ಸಂಪುಟಕ್ಕೆ ತೆಗೆದುಕೊಂಡು ವಾರ್ತಾ ಸಚಿವರನ್ನಾಗಿ ನೇಮಿಸಿದ್ದರು. ಒಂದೂವರೆ ವರ್ಷ ಮಾತ್ರ ಅಧಿಕಾರದಲ್ಲಿದ್ದ ಇವರು ನೆಹರೂ ನೀತಿಯನ್ನೇ ಮುಂದುವರಿಸಿಕೊಂಡು ಹೋದರು. ಉತ್ತರ ವಿಯೆಟ್ನಾಮ್‌ನ ಮೇಲೆ ಅಮೆರಿಕ ನಡೆಸಿದ ಬಾಂಬು ದಾಳಿಯನ್ನು ಖಂಡಿಸಿದ ಶಾಸ್ತ್ರಿಯವರು ಸೋವಿಯೆತ್ ಒಕ್ಕೂಟದೊಂದಿಗೆ ಸಂಬಂಧವನ್ನು ಬಲಪಡಿಸಿದರು. ಅಧಿಕಾರದಲ್ಲಿದ್ದಾಗ ಅವರು ಸೃಷ್ಟಿಸಿದ ಪ್ರಧಾನಿ ಕಚೇರಿ ಎಂಬ ಅಧಿಕಾರ ಕೇಂದ್ರ ಇವತ್ತಿಗೂ ಮುಂದುವರಿಯುತ್ತಿದೆ. ಅವರ ಅಧಿಕಾರಾವಧಿಯಲ್ಲಿ ಸಂಭವಿಸಿದ ಪ್ರಮುಖವಾದ ಘಟನೆ ಎಂದರೆ ಭಾರತ–ಪಾಕಿಸ್ತಾನ ಸಮರ. ಈ ಯುದ್ಧ ಅವರ ಅಂತ್ಯಕ್ಕೂ ಕಾರಣವಾಯಿತು. ೧೯೬೫ರಲ್ಲಿ ಕಾಶ್ಮೀರದಲ್ಲಿ ಷೇಕ್ ಅಬ್ದುಲ್ಲಾ ಮತ್ತು ಅವರ ಅನುಯಾಯಿಗಳು ಸಾಕಷ್ಟು


ಕಾಮರಾಜ್ ನಾಡಾರ್

ಅಶಾಂತ ವಾತಾವರಣ ನಿರ್ಮಿಸಿದ್ದರು. ಪ್ರತ್ಯೇಕತೆಯ ಅಬ್ಬರ ಬಲವಾಗಿತ್ತು. ಪರಿಸ್ಥಿತಿಯ ಉಪಯೋಗ ಪಡೆದುಕೊಳ್ಳಲು ಪಾಕಿಸ್ತಾನ ಸರಕಾರ ಸಿದ್ಧವಾಯಿತು. ೧೯೬೫ರ ಏಪ್ರಿಲ್ ತಿಂಗಳಲ್ಲಿ ಗುಜರಾತಿನ ರಾಣ್ ಆಫ್ ಕಚ್ ಪ್ರದೇಶದಲ್ಲಿ ಪಾಕಿಸ್ತಾನಿ ಸೈನಿಕರು ಅತಿಕ್ರಮಣ ನಡೆಸಿದರು. ಭಾರತೀಯ ಸೈನಿಕರು ಅತಿಕ್ರಮಣಕಾರರನ್ನು ಹಿಮ್ಮೆಟ್ಟಿಸಲು ಕ್ರಮ ಕೈಗೊಂಡರು. ಈ ಪ್ರದೇಶದ ಗಡಿ ನಿರ್ಧಾರವಾಗದೆ ಹಾಗೇ ಉಳಿದಿದ್ದ ಜೌಗು ಪ್ರದೇಶ. ಬ್ರಿಟನ್ನಿನ ಮಧ್ಯಸ್ಥಿಕೆಯಿಂದ ಘರ್ಷಣೆ ಅಂತ್ಯಗೊಂಡಿತು. ವಿವಾದವನ್ನು ಅಂತರರಾಷ್ಟ್ರೀಯ ಮಧ್ಯಸ್ಥಿಕೆಗೆ ಒಳಪಡಿಸಲಾಯಿತು. ಈ ಘಟನೆಯ ಹಿನ್ನೆಲೆಯನ್ನು ಪಾಕಿಸ್ತಾನ ಭಾರತ ಸಶಸ್ತ್ರ ಸಂಘರ್ಷಕ್ಕೆ ಸಿದ್ಧವಾಗಿಲ್ಲ ಎಂದು ಅರ್ಥೈಸಿಕೊಂಡು ಕಾಶ್ಮೀರದಲ್ಲಿ ಹಸ್ತಕ್ಷೇಪ ನಡೆಸಲು ಹವಣಿಸಿತು. ದೊಡ್ಡ ಸಂಖ್ಯೆಯಲ್ಲಿ ಕಾಶ್ಮೀರ ಕಣಿವೆಗೆ ಅಕ್ರಮವಾಗಿ ಶಸ್ತ್ರಧಾರಿಗಳಾದ ಯೋಧರನ್ನು ರವಾನಿಸಿತು. ಆಗಸ್ಟ್ ತಿಂಗಳಲ್ಲಿ ಅವರನ್ನು ಹಿಮ್ಮೆಟ್ಟಿಸಿ ಗಡಿಭದ್ರತೆಗೆ ವ್ಯವಸ್ಥೆ ಮಾಡಬೇಕೆಂದು ಪ್ರಧಾನಿ ಶಾಸ್ತ್ರಿಯವರು ಸೇನೆಗೆ ಆದೇಶ ನೀಡಿದರು. ಭಾರತೀಯ ಸೇನೆ ಒಳಗೆ ನುಸುಳಿದ್ದ ಪಾಕಿಸ್ತಾನಿ ಯೋಧರನ್ನು ಹಿಮ್ಮೆಟ್ಟಿಸಿ ಗಡಿಪ್ರದೇಶವನ್ನು ಭದ್ರ ಗೊಳಿಸಲು ಹೊಸ ಚೆಕ್ ಪೋಸ್ಟ್‌ಗಳನ್ನು ಸ್ಥಾಪಿಸಿತು. ಇಡೀ ದೇಶ ಸರಕಾರದ ಈ ಕ್ರಮಕ್ಕೆ ಬೆಂಬಲವಿತ್ತಿತು. ಇದರಿಂದ ರೊಚ್ಚಿಗೆದ್ದ ಪಾಕಿಸ್ತಾನ ೧೯೬೫ರ ಸೆಪ್ಟೆಂಬರ್ ೧ರಂದು ಕಾಶ್ಮೀರದ ಗಡಿಯಲ್ಲಿ ಭಾರಿ ಪ್ರಮಾಣದಲ್ಲಿ ಮಿಲಿಟರಿ ಕಾರ್ಯಾಚರಣೆ ನಡೆಸಿತು. ಟ್ಯಾಂಕುಗಳು ಮತ್ತು ಇನ್ಫೆಂಟರಿ ದಾಳಿ ಪ್ರಾರಂಭಿಸಿದುವು. ಪ್ರಧಾನಿ ಶಾಸ್ತ್ರಿಯವರು ಒಡನೆಯೇ ಭಾರತದ ಸೇನೆಗೆ ಅತಿಕ್ರಮಣಕಾರರನ್ನು ಹಿಮ್ಮೆಟ್ಟಿಸಲು ಹಾಗೂ ಗಡಿದಾಟಿ ಮುಂದುವರಿಯಲು ಆಜ್ಞೆ ನೀಡಿದರು. ಇದು ಭಾರತ–ಪಾಕಿಸ್ತಾನಗಳ ನಡುವಣ ಎರಡನೇ ಯುದ್ಧ. ಘರ್ಷಣೆಗಳು ಪ್ರಾರಂಭವಾದ್ದು ಕೂಡ ಕಾಶ್ಮೀರದ ಗಡಿಯಲ್ಲೆ. ಈ ಬಾರಿ ಭಾರತದ ಸೇನೆ ಪಾಕಿಸ್ತಾನಿ ಸೇನೆಯನ್ನು ಹಿಮ್ಮೆಟ್ಟಿಸಿ ಗಡಿರೇಖೆಯನ್ನು ದಾಟಿ ಪಾಕಿಸ್ತಾನದ ಪ್ರಾಂತಗಳಾದ ಲಾಹೋರ್ ಮತ್ತು ಸಿಯಾಲ್ ಕೋಟ್‌ಗಳತ್ತ ಮುನ್ನುಗ್ಗಿತು. ಗಡಿ ಪ್ರದೇಶದಲ್ಲಿ ಘರ್ಷಣೆಗಳು ಪ್ರಾರಂಭವಾಗುತ್ತಿದ್ದಂತೆಯೇ ಅಮೆರಿಕ ಮತ್ತು ಬ್ರಿಟನ್‌ಗಳು ಎರಡೂ ದೇಶಗಳಿಗೆ ಶಸ್ತ್ರಾಸ್ತ್ರಗಳನ್ನು



ತಾಷ್ಕೆಂಟ್ ಸಮ್ಮೇಳನ

ಒಳಗೊಂಡಂತೆ ಎಲ್ಲ ಸಾಮಗ್ರಿಗಳ ಸರಬರಾಜನ್ನು ನಿಲ್ಲಿಸಿದುವು. ಚೀಣಾ ಭಾರತವನ್ನು ದುರಾಕ್ರಮಣಕಾರಿ ಎಂದು ಖಂಡಿಸಿತು. ಸೋವಿಯೆತ್ ಒಕ್ಕೂಟ ಭಾರತಕ್ಕೆ ಸಹಾನುಭೂತಿ ವ್ಯಕ್ತಗೊಳಿಸಿ ಚೀಣಾ ಪಾಕಿಸ್ತಾನಕ್ಕೆ ಬೆಂಬಲ ನೀಡದಂತೆ ನೋಡಿಕೊಂಡಿತು. ಮೂರು ವಾರಗಳು ನಡೆದ ಈ ಯುದ್ಧದಲ್ಲಿ ಎರಡೂ ಕಡೆ ಭಾರಿ ನಷ್ಟ ಸಂಭವಿಸಿದುವು. ಭಾರತದ ಮಟ್ಟಿಗೆ ಕಾಶ್ಮೀರ ಪ್ರದೇಶದಲ್ಲಿ ಪರಿಣಾಮಕಾರಿಯಾಗಿ ಶತ್ರುಗಳನ್ನು ಹಿಮ್ಮೆಟ್ಟಿಸಿದ ಯಶಸ್ಸು ಲಭಿಸಿತು. ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಮಧ್ಯಪ್ರವೇಶದಿಂದ ಸೆಪ್ಟೆಂಬರ್ ೨೩ರಂದು ಭಾರತ–ಪಾಕಿಸ್ತಾನ ಎರಡೂ ದೇಶಗಳು ಯುದ್ಧಸ್ತಂಭನಕ್ಕೆ ಸಮ್ಮತಿಸಿದುವು. ಹೀಗೆ ಮುಕ್ತಾಯಗೊಂಡ ಯುದ್ಧದಲ್ಲಿ ಎರಡೂ ಕಡೆ ಜಯಾಪಜಯಗಳ ಲೆಕ್ಕಾಚಾರ ನಡೆಯತೊಡಗಿತು. ೧೯೬೨ರಲ್ಲಿ ಚೀಣೀಯರೊಂದಿಗೆ ಸಂಘರ್ಷದಲ್ಲಿ ಪರಾಜಯವನ್ನನುಭವಿಸಿದ್ದ ಭಾರತೀಯ ಸೇನಾಪಡೆಗಳಿಗೆ ಈ ಸಂಘರ್ಷ ಹೊಸ ಹುರುಪು ಹಾಗೂ ವಿಶ್ವಾಸ ಮೂಡಿಸಿತು. ಆದರೆ ದೇಶದ ರಕ್ಷಣಾ ವೆಚ್ಚ ದೊಡ್ಡ ಪ್ರಮಾಣದಲ್ಲಿ ಹೆಚ್ಚಿತು.

ಪಾಕಿಸ್ತಾನದೊಂದಿಗೆ ನಡೆದ ಈ ಯುದ್ಧದ ಕಾಲದಲ್ಲಿ ಪ್ರಧಾನಿ ಶಾಸ್ತ್ರಿಯವರು ತೆಗೆದುಕೊಂಡ ದಿಟ್ಟ ನಿಲುವಿನಿಂದಾಗಿ ಅವರು ಗೌರವ ಮನ್ನಣೆಗಳಿಗೆ ಪಾತ್ರರಾದರು, ರಾಜಕೀಯ ಪ್ರಭಾವವೂ ವರ್ಧಿಸಿತು. ೧೯೬೬ರ ಜನವರಿ ೪ರಂದು ಸೋವಿಯೆತ್ ಒಕ್ಕೂಟದ ಮಧ್ಯಸ್ಥಿಕೆಯಿಂದ ತಾಷ್ಕೆಂಟಿನಲ್ಲಿ ಭಾರತದ ಪ್ರಧಾನಿ ಲಾಲ್‌ಬಹದ್ದೂರ್ ಶಾಸ್ತ್ರಿ ಮತ್ತು ಪಾಕಿಸ್ತಾನದ ಅಧ್ಯಕ್ಷ ಜನರಲ್ ಅಯೂಬ್ ಖಾನ್ ತಾಷ್ಕೆಂಟ್ ನಗರದಲ್ಲಿ ಪರಸ್ಪರ ಭೇಟಿಯಾಗಿ ಮಾತುಕತೆ ಪ್ರಾರಂಭಿಸಿದರು. ಹೆಚ್ಚು ಕಡಿಮೆ ಒಂದು ವಾರದ ಕಠಿಣವಾದ ಸಂಧಾನಗಳು ನಡೆದು ಕೊನೆಗೆ ಎರಡೂ ಕಡೆಯವರು ಒಂದು ಒಪ್ಪಂದಕ್ಕೆ ಬಂದರು. ತಾಷ್ಕೆಂಟ್ ಘೋಷಣೆ ಎಂದೇ ಹೆಸರಾಗಿರುವ ಈ ಒಪ್ಪಂದದ ಪ್ರಕಾರ ಎರಡೂ ಕಡೆಯವರು ಯುದ್ಧ ಪೂರ್ವದ ಸ್ಥಾನಗಳಿಗೆ ಮರಳಲು ಸಮ್ಮತಿಸಿದರು. ಅರ್ಥಾತ್ ಎರಡೂ ಕಡೆಯ ಸೇನೆಗಳು ಆಕ್ರಮಿಸಿಕೊಂಡಿದ್ದ ಪ್ರದೇಶಗಳಿಂದ ವಾಪಸ್ಸಾಗಲು ಒಪ್ಪಿದುವು. ಭಾರತದ ಮಟ್ಟಿಗೆ ಈ ಒಪ್ಪಂದ ಹಿತಕರವಾಗಿರಲಿಲ್ಲ. ಯುದ್ಧದಲ್ಲಿ ಮೇಲುಗೈ ಸಾಧಿಸಿದ್ದ ಭಾರತ ಯಥಾಸ್ಥಿತಿಗೆ ಮರಳುವುದು ಕಠಿಣವಾದ ನಿರ್ಧಾರವಾಗಿತ್ತು. ಅದರಲ್ಲೂ ಕೆಲವೆಡೆಗಳಲ್ಲಿ ಗಡಿಯಲ್ಲಿ ನುಸುಳುವ ಪಾಕಿಸ್ತಾನಿ ಸೈನಿಕರನ್ನು ತಡೆಯುವಂಥ ಪ್ರದೇಶಗಳನ್ನು ಬಿಟ್ಟುಕೊಡುವುದು ಸಮಂಜಸವಾಗಿರಲಿಲ್ಲ. ಆದರೆ ಆ ಸಂದರ್ಭದಲ್ಲಿ ಭಾರತದ ಸನ್ಮಿತ್ರನಾಗಿದ್ದ ಸೋವಿಯೆತ್ ಒಕ್ಕೂಟದ ಒತ್ತಡಕ್ಕೆ ಕಟ್ಟುಬಿದ್ದು ಪ್ರಧಾನಿ ಶಾಸ್ತ್ರಿಯವರು ಷರತ್ತುಗಳಿಗೆ ಸಮ್ಮತಿ ಸೂಚಿಸ ಬೇಕಾಯಿತು. ಮೊದಲಿನಿಂದಲೂ ಸೋವಿಯೆತ್ ಒಕ್ಕೂಟ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಸಭೆಯಲ್ಲಿ ಭಾರತದ ಬೆಂಬಲಕ್ಕೆ ನಿಂತು ವೀಟೋ ಹಕ್ಕು ಚಲಾಯಿಸಿತ್ತು. ಅದಲ್ಲದೆ ಆ ದೇಶ ಭಾರತಕ್ಕೆ ದೊಡ್ಡ ಪ್ರಮಾಣದಲ್ಲಿ ಶಸ್ತ್ರಾಸ್ತ್ರಗಳನ್ನು ಮುಖ್ಯವಾಗಿ ಟ್ಯಾಂಕುಗಳು ಮತ್ತು ಫೈಟರ್ ವಿಮಾನಗಳನ್ನು ಸರಬರಾಜು ಮಾಡುತ್ತಿತ್ತು. ಹಾಗಾಗಿ ಪಾಕಿಸ್ತಾನದೊಂದಿಗಿನ ಯುದ್ಧದಲ್ಲಿ ಪಡೆದುಕೊಂಡಿದ್ದ ಅನುಕೂಲಗಳನ್ನು ಬಿಟ್ಟುಕೊಡಬೇಕಾಯಿತು.

ಒಪ್ಪಂದಕ್ಕೆ ಸಹಿಯಾದ ಮರುದಿನ ಶಾಸ್ತ್ರಿಯವರು ಭಾರತಕ್ಕೆ ವಾಪಸ್ಸಾಗು ವುದಿತ್ತು. ಒಪ್ಪಂದಕ್ಕೆ ಸಹಿ ಹಾಕಿದ್ದು ಜನವರಿ ೧೦ರಂದು ತಡರಾತ್ರೆಯಲ್ಲಿ. ಇದಾದ ಕೆಲವೇ ಘಂಟೆಗಳಲ್ಲಿ ಪ್ರಧಾನಿ ಶಾಸ್ತ್ರಿಯವರು ತೀವ್ರವಾದ ಹೃದಯಾಘಾತಕ್ಕೆ ಬಲಿಯಾಗಿ ಅಸುನೀಗಿದರು. ಮೊದಲೇ ಹೃದ್ರೋಗದಿಂದ ಬಳಲುತ್ತಿದ್ದ ಶಾಸ್ತ್ರಿಯವರಿಗೆ ಮಾತುಕತೆ ಸಂಧಾನಗಳ ಒತ್ತಡ ವಿಪರೀತವಾಗಿ ಪರಿಣಮಿಸಿತ್ತು. ಶಾಸ್ತ್ರಿಯವರ ಹಠಾತ್ ನಿಧನದಿಂದ ಇಡೀ ಭಾರತ ಶೋಕಸಾಗರದಲ್ಲಿ ಮುಳುಗಿತು. ಮುಂದಿನ ಪ್ರಧಾನಿಗಾಗಿ ಹುಡುಕಾಟ ಪ್ರಾರಂಭವಾಯಿತು.

*(ಮುಂದುವರಿಯುವುದು)*

ಸಿ. ಆರ್. ಕೃಷ್ಣರಾವ್
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್‌ಕತ್ರಿಗುಪ್ಪೆ
ಬೆಂಗಳೂರು – ೫೬೦ ೦೮೫

# ಅಕ್ಷರ

೧

ಯಾರಿಲ್ಲವೆಂದರೂ –
ಪತ್ರಿಕೆಯಲ್ಲಿ ಬರುವ
ಅಕ್ಷರಗಳು
ನಮ್ಮ ಈ ದಿನದ
ಅತಿಥಿಗಳು.

೨

ಪತ್ರಿಕೆಯಲ್ಲಿ ಅಚ್ಚಾದ
ಕೆಂಪು ಅಕ್ಷರಗಳನ್ನು
ಹಸಿ ರಕ್ತದಲ್ಲಿ ಅದ್ದಿರಬಹುದೇ ?

ಕಪ್ಪು ಅಕ್ಷರಗಳನ್ನು
ಆಗತಾನೆ ಸುಟ್ಟು
ಕರಕಲಾದವನ
ಮೂಳೆಯಿಂದ ಕದ್ದಿರಬಹುದೇ ?

ವಾರಸುದಾರರ ಪಾಲಿಗೆ
ನನ್ನದೊಂದು
ಪುಟ್ಟ ವಿಷಾದವಿದೆ !

೩

ನಾ ಕಲಿತ
ನಾಲ್ಕಕ್ಷರಗಳು
ಸಾರ್ಥಕವಾದವು
ಅವಳ ಗೋರಿಗೊಂದು
ಸುಂದರ ಹೆಸರನಿಟ್ಟವು.

ಕಾವ್ಯಲೋಕ



**ಪ್ರವೀಣಕುಮಾರ ದೈವಜ್ಞಾಚಾರ್ಯ**
ರಾಯಪ್ಪ ಕಾಂಪೌಂಡ್, ಹೂವಿನಹಡಗಲಿ ಬಳ್ಳಾರಿ ಜಿಲ್ಲೆ – ೫೮೩ ೨೧೯

## ಕ್ಷ - ಕಿರಣ

# ಲೋಕಸಭಾ ಸೈಡ್ ಎಫೆಕ್ಟ್

- ಪ್ರಕಾಶ್ ಎಸ್.

ಕಾರ್ಪೊರೇಟ್(ಪೇ)ಟಾ



ಚುನಾವಣೋತ್ತರ ಹೊಂದಾಣಿಕೆ



ಮನಮೋಹನ ಉತ್ತರಾಧಿಕಾರಿ

ಲೆಫ್ಟ್ ಈಸ್ ಲೆಫ್ಟ್



ಅಂತಿಮ ಮೊಳೆ



ಡಾ॥ ಕೆ. ಷರೀಫಾ



# ಲೈಂಗಿಕ ಕಿರುಕುಳಕ್ಕೆ ಕೊನೆ ಎಂದು?

> ಮಹಿಳೆಯ ಘನತೆಗೆ ದೊಡ್ಡ ಪೆಟ್ಟು ಈ ಲೈಂಗಿಕ ಹಿಂಸಾಚಾರ. ಅದು ಅವಳಿಗೆ ಅತ್ಯಂತ ನೋವಿನ ಮತ್ತು ಅಪಮಾನಕರ ಸಂಗತಿ. ಆರ್ಥಿಕ ಸ್ವಾವಲಂಬಿತರಾಗಿ ಸಮಾನತೆ ಬಯಸುತ್ತಿರುವ ಇವರಿಗೆ ದೊರಕುತ್ತಿರುವುದಾದರೂ ಏನು ? ಏರ್‌ಲೈನ್ಸ್‌ನಲ್ಲಿ ಕೆಲಸ ಮಾಡುತ್ತಿದ್ದ ಷೆಹನಾಜ಼್ ಲೈಂಗಿಕ ಕಿರುಕುಳದ ಬಗ್ಗೆ ದೂರು ನೀಡಿದ್ದಕ್ಕಾಗಿ ಕೆಲಸ ಕಳೆದುಕೊಂಡರು. ಇಂದಿನ ಬೆಲೆ ಏರಿಕೆಯ ಕಾಲದಲ್ಲ ಸಂಸಾರ ಸರಿದೂಗಿಸಲು ಹೆಣ್ಣಿನ ದುಡಿಮೆ ಅನಿವಾರ್ಯ. ಆದರೆ ಕೆಲಸದ ಸ್ಥಳಗಳಲ್ಲಿ ಇಂತಹ ಅಪಮಾನಕ್ಕೆ ಗುರಿಯಾಗಿ ತಕರಾರು ತೆಗೆದರೆ ಕೆಲಸ ಕಳೆದುಕೊಳ್ಳುವ ಭೀತಿ ಮಹಿಳೆಯರಿಗೆ ತಪ್ಪಿದ್ದಲ್ಲ. ಹೆಣ್ಣಿನ ಘನತೆಯನ್ನು ಕಾಪಾಡದ, ಗೌರವಿಸದ ವ್ಯವಸ್ಥೆ ಎಂದಿಗೂ ಮಾದರಿಯಲ್ಲ.

**ಬೆಂ**ಗಳೂರಿನಲ್ಲಿಯೇ ಅತ್ಯಧಿಕ ಪ್ರಮಾಣದಲ್ಲಿ ಮಹಿಳೆಯರ ಮೇಲೆ ಲೈಂಗಿಕ ಕಿರುಕುಳ, ದೌರ್ಜನ್ಯಗಳು ನಡೆಯುತ್ತಿವೆ. ಇದನ್ನು ಮಹಿಳಾ ಆಯೋಗದ ಅಂಕಿ–ಅಂಶಗಳೇ ಹೇಳುತ್ತವೆ. ಮಹಾನಗರವಾಗಿ ಬೆಳೆದಿರುವ ಬೆಂಗಳೂರು ಎ–ಒನ್ ನಗರದ ಮಾನ್ಯತೆ ಪಡೆದಿದೆ. ಸಿಲಿಕಾನ್ ಸಿಟಿಯಾಗಿ ವಿವಿಧ ಉದ್ಯಮಗಳಿಗೆ ನೆಲೆಯೊದಗಿಸಿದೆ. ಅಪರಾಧಗಳೂ ಗಣನೀಯ ಪ್ರಮಾಣದಲ್ಲಿ ಹೆಚ್ಚಾಗಿವೆ. ವಾಹನ ದಟ್ಟಣೆ, ಹೊಗೆ, ಕಸ, ಪರಿಸರ ಮಾಲಿನ್ಯ, ಅಪಘಾತ, ಆತ್ಮಹತ್ಯೆ, ಕೊಲೆ, ಸುಲಿಗೆ, ದರೋಡೆಗಳು ಅತ್ಯಧಿಕವಾಗಿ ನಡೆಯುತ್ತಿವೆ. ಉದ್ಯಾನ ನಗರಿ ಇಂದು ಲೈಂಗಿಕ ದೌರ್ಜನ್ಯಗಳ, ಆತ್ಮಹತ್ಯೆಗಳ ರಾಜಧಾನಿಯಾಗಿ ಹೆಸರು ಮಾಡುತ್ತಿದೆ.

ವರದಕ್ಷಿಣೆ ಕಿರುಕುಳ, ಲೈಂಗಿಕ ಕಿರುಕುಳಗಳು ಮಹಿಳೆಯ ದೇಹ, ಮನಸ್ಸಿನ ಮೇಲೆ ಹಲವು ರೂಪಗಳಲ್ಲಿ ನಡೆಯುತ್ತಿವೆ. ಅಪ್ಯಾರಲ್ ಎಕ್ಸ್‌ಪೋರ್ಟ್ ಪ್ರಮೋಷನ್ ಕೌನ್ಸಿಲ್‌ನಲ್ಲಿ ಟೈಪಿಸ್ಟ್ ಮತ್ತು ಕ್ಲರ್ಕ್ ಆಗಿ ಉದ್ಯೋಗದಲ್ಲಿದ್ದ ವಿಶಾಖ ತನಗೆ ಛೇರ್‌ಮನ್‌ನ ಆಪ್ತ ಕಾರ್ಯದರ್ಶಿ ಎ. ಕೆ. ಚೋಪ್ರಾ ಮುಟ್ಟುವುದು, ಲಿಫ್ಟ್‌ನಲ್ಲಿ ಸಂಚರಿಸಿದಾಗ ಹಿಂಸಿಸುವುದು, ಮುಂತಾದ ಕಿರುಕುಳ ನೀಡುತ್ತಿದ್ದುದರ ವಿರುದ್ಧ ದೂರು ಸಲ್ಲಿಸಿದಳು. ಸುಪ್ರೀಂ ಕೋರ್ಟು ಈ ಸಂದರ್ಭದಲ್ಲಿ ನೀಡಿದ ತೀರ್ಪು ಮಹಿಳಾ ಚಳುವಳಿಗೆ ಬಲ ನೀಡಿದೆ. 'ಲೈಂಗಿಕ ಕಿರುಕುಳ'ದ ಪರಿಕಲ್ಪನೆಯನ್ನು ಪುನರ್ ವ್ಯಾಖ್ಯಾನಿಸಿದೆ ಹಾಗೂ ವಿಸ್ತಾರಗೊಳಿಸಿದೆ. "ಲೈಂಗಿಕ ಕಿರುಕುಳವೆಂದರೆ, ಅದು ದೈಹಿಕ ಸಂಪರ್ಕವನ್ನು ಒಳಗೊಳ್ಳಲೇಬೇಕಿಲ್ಲ" ಎಂದು ಹೇಳಿದೆ. ಮುಂದುವರಿದು, "ಲೈಂಗಿಕ ಕಿರುಕುಳವೆನ್ನುವುದು ಲೈಂಗಿಕ ತಾರತಮ್ಯದ ಮತ್ತೊಂದು ರೂಪ. ಒಲ್ಲದ ಲೈಂಗಿಕ ವರ್ತನೆಗಳಿಂದ, ಲೈಂಗಿಕ ಬೇಡಿಕೆಗಳನ್ನೊಡ್ಡುತ್ತಾ ಮಾತು ಮತ್ತು ಸಂಜ್ಞೆ, ಹಾವಭಾವಗಳಿಂದ ನೇರವಾಗಿ, ಇಲ್ಲವೇ ಸೂಚ್ಯವಾಗಿ ಲೈಂಗಿಕ ಅರ್ಥ"ಗಳನ್ನು ಹೊರಹೊಮ್ಮಿಸುತ್ತಾ ದುಡಿಯುವ ಸ್ಥಳದಲ್ಲಿ ಕೆಲಸಕ್ಕೆ ಅಡಚಣೆಯನ್ನುಂಟುಮಾಡುವುದು ಲೈಂಗಿಕ ಕಿರುಕುಳವಾಗುತ್ತದೆ. ಇಂತಹ ವರ್ತನೆಗಳಿಗೆ ಒಗ್ಗದ ಮಹಿಳೆಯರಿಗೆ ಕೆಲಸದ ಪರಿಸರವನ್ನು ಅಸಹನೀಯಗೊಳಿಸುವದು ಸಹ ಲೈಂಗಿಕ ಕಿರುಕುಳ ಎನಿಸಿಕೊಳ್ಳುತ್ತದೆ. ಸಂವಿಧಾನದ ಪ್ರಕಾರ ಲೈಂಗಿಕ ಸಮಾನತೆಯು ಪ್ರತಿಯೊಬ್ಬ ಮಹಿಳೆಯ ಹಕ್ಕು. ಮಹಿಳೆಯ ಮೂಲಭೂತ ಹಕ್ಕುಗಳನ್ನು ಸಂರಕ್ಷಿಸುವಲ್ಲಿ ನ್ಯಾಯಾಲಯಗಳ ಪಾತ್ರ ಮಹತ್ವದ್ದಾಗಿದೆ. ಹೆಣ್ಣಿನ ಘನತೆ ಗೌರವಗಳನ್ನು ರಕ್ಷಿಸುವಲ್ಲಿ ಕೋರ್ಟುಗಳ ಪಾತ್ರವನ್ನು ಕಡೆಗಣಿಸಲಾಗದು.

ಲೈಂಗಿಕ ಕಿರುಕುಳ ವಿಕೃತ ಮನಸ್ಸಿನ ಸ್ವರೂಪ. ಈ ಹಿಂಸೆಯನ್ನು ಸಹಿಸಲಾಗದೆ ಸಾಯುತ್ತಿರುವ ಮಹಿಳೆಯರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದೆ. ಲೈಂಗಿಕ ಕ್ರಿಯೆಗೆ ಸಹಕರಿಸದಿದ್ದರೆ ಒಂದು ಕಾಲದಲ್ಲಿ ಇರಿಯಲಾಗುತ್ತಿತ್ತು. ಈಗ ಆ್ಯಸಿಡ್ ಎರಚಿ ವಿಕಾರಗೊಳಿಸಲಾಗುತ್ತಿದೆ. ಮಹಿಳೆಯ ಬದುಕನ್ನೇ ಸರ್ವನಾಶಗೊಳಿಸಲಾಗುತ್ತಿದೆ. ಅಪರಾಧದ ಸ್ವರೂಪಗಳು ದಿನೇ ದಿನೇ ಬದಲಾಗುತ್ತಿವೆ. ಐಟಿ–ಬಿಟಿ ಸಂಸ್ಥೆಗಳಲ್ಲಿ ದುಡಿದು ಅಪಾರ ಹಣ ಸಂಪಾದನೆ ಮಾಡುವ ಮಹಿಳೆಗೆ ಅಸುರಕ್ಷತೆಯ ಭೀತಿ ಎದುರಾಗಿದೆ. ಪ್ರತಿಭಾ ಅತ್ಯಾಚಾರ ಕೊಲೆ ಪ್ರಕರಣ ಒಂದು ಕಡೆಯಾದರೆ, ಇನ್ನೊಂದೆಡೆ ಹೈಟೆಕ್ ವೇಶ್ಯಾವಾಟಿಕೆಗೆ ತಳ್ಳುವುದೂ ನಡೆಯುತ್ತಿದೆ. ಮಹಿಳೆಯರ ಮೇಲಿನ ಹಿಂಸೆ ದೌರ್ಜನ್ಯಗಳನ್ನು, ಸರ್ಕಾರ, ಕೋರ್ಟು, ಪೊಲೀಸು ಇಲಾಖೆಗಳು ಗಂಭೀರವಾಗಿ ಪರಿಗಣಿಸಬೇಕಾದ ಅವಶ್ಯಕತೆಯಿದೆ. ಮಹಿಳೆಯರು ತಮ್ಮ ಮೇಲೆ ನಡೆಯುವ ದೌರ್ಜನ್ಯಗಳನ್ನು ಧೈರ್ಯದಿಂದ

ಎದುರಿಸುವ ಇಚ್ಛಾಶಕ್ತಿಯನ್ನು ರೂಢಿಸಿಕೊಳ್ಳಬೇಕಿದೆ.

ಈ ನಡುವೆಯಂತೂ ಲೈಂಗಿಕ ಕಿರುಕುಳ ದಿನನಿತ್ಯದ ಸುದ್ದಿಯಾಗಿಬಿಟ್ಟಿದೆ. ಅದು ಕುಟುಂಬದ ಹೊರಗೂ ನಡೆಯುತ್ತಿದೆ. ಕುಟುಂಬದ ಪುಟ್ಟ ಪ್ರಪಂಚದಾಚೆ ಸಮಾಜದ ವಿವಿಧ ವಲಯಗಳನ್ನು ಆವರಿಸಿಕೊಳ್ಳುತ್ತಿದೆ. ಇದರ ಮೂಲ ಕಾರಣ ಪುರುಷ ಪ್ರಾಬಲ್ಯದ ನಡವಳಿಕೆ. ಅದು ಸರ್ಕಾರಿ ಅರೆ ಸರಕಾರಿ, ಖಾಸಗಿ ಉದ್ಯಮ, ಮಾರುಕಟ್ಟೆ, ಪೊಲೀಸು ಸ್ಟೇಷನ್, ಕೋರ್ಟು, ಜೈಲು, ಧಾರ್ಮಿಕ, ಶಿಕ್ಷಣ, ಕೊನೆಗೆ ಕುಟುಂಬದ ಒಳಗೂ ಇಂತಹ ಲೈಂಗಿಕ ಕಿರುಕುಳದ ಬೇರುಗಳು ಬಿಚ್ಚಿಕೊಳ್ಳುತ್ತಿವೆ. ಬೇಜವಾಬ್ದಾರಿಯುತ ಅನಾಗರಿಕ ಲೈಂಗಿಕ ಕಿರುಕುಳಕ್ಕೆ ಕೃಷಿ, ಕಾರ್ಖಾನೆ, ಕಂಪನಿ ಹಾಗೂ ಸರ್ಕಾರಿ ವಲಯದಲ್ಲಿ ದುಡಿಯುತ್ತಿರುವ ಮಹಿಳೆಯರು ಬಲಿಯಾಗುತ್ತಿದ್ದಾರೆ. ಉದ್ಯಮ, ಗಣಿ, ರಸ್ತೆ ಕಾಮಗಾರಿ ಕೆಲಸ, ರೈಲ್ವೆ, ಅರಣ್ಯ, ಪ್ಲ್ಯಾಂಟೇಶನ್, ಸಾಮಗ್ರಿ ಉತ್ಪಾದನಾ ಘಟಕ, ಹೊಟೇಲ್, ಅಂಗಡಿ, ಎಲ್ಲಾ ಕಡೆಗಳಲ್ಲೂ ಮಹಿಳೆಯರು ಲೈಂಗಿಕ ಶೋಷಣೆ, ಕಿರುಕುಳಕ್ಕೆ ಬಲಿಯಾಗುತ್ತಿದ್ದಾರೆ.

ಡಿಸೆಂಬರ್ ೧೦, ೧೯೪೮ರ ಜಾಗತಿಕ ಮಾನವ ಹಕ್ಕುಗಳನ್ವಯ ಯಾವುದೇ ರೀತಿಯ ಲೈಂಗಿಕ ಆಧಾರದ ತಾರತಮ್ಯವನ್ನು ಆ್ಯಕ್ಟ್–೩ರಂತೆ ನಿಷೇಧಿಸಿದೆ. ಡಿಸೆಂಬರ್ ೧೬, ೧೯೬೬ರಲ್ಲಿ ಜರುಗಿದ ಎರಡೂ ಅಂತರರಾಷ್ಟ್ರೀಯ ಸಮ್ಮೇಳನಗಳ ತೀರ್ಮಾನದಂತೆ ಲೈಂಗಿಕ ತಾರತಮ್ಯವನ್ನು ನಿಷೇಧಿಸಲಾಗಿದೆ. ಎಲ್ಲಾ ರಾಷ್ಟ್ರಗಳೂ ಉದ್ಯೋಗಸ್ಥ ಮಹಿಳೆಯರ ಮೇಲಿನ ತಾರತಮ್ಯ ಹಾಗೂ ಕಿರುಕುಳವನ್ನು ಕೊನೆಗಾಣಿಸಲು ತೆಗೆದುಕೊಳ್ಳಬೇಕಾದ ಸೂಕ್ತ ಕಾನೂನು ಕ್ರಮಗಳ ಬಗ್ಗೆ ಆಗ್ರಹಿಸಿವೆ. ಮಹಿಳೆಯರ ಮೇಲಿನ ತಾರತಮ್ಯ ನಿವಾರಣಾ ಸಮಿತಿಯನ್ನು ಸ್ಥಾಪಿಸಲಾಗಿದೆ. ೧೯೭೦ ರಿಂದೀಚೆಗೆ, ಆರಂಭವಾದ ಸ್ತ್ರೀವಾದಿ ಮಹಿಳಾ ವಿಮೋಚನಾ ಚಳುವಳಿಯ ಕಾರಣದಿಂದಾಗಿ ಲೈಂಗಿಕ ಕಿರುಕುಳದ ಬಗ್ಗೆಯೂ ಚರ್ಚೆಗಳು ನಡೆಯತೊಡಗಿದವು. ಇಂತಹ ಅಪರಾಧಗಳನ್ನು ಹತ್ತಿಕ್ಕಲು ನಮ್ಮ ಕಾನೂನಿನಲ್ಲಿ ನಿಖರವಾದ, ಪ್ರತ್ಯೇಕ ಕಾನೂನು ತರದೆ, ಕ್ರಿಮಿನಲ್ ಹಾಗೂ ಸಿವಿಲ್ ಕಾನೂನಿನಲ್ಲಿರುವ ಪ್ರಾವಿಧಾನಗಳನ್ನೇ ಅನ್ವಯಿಸುವ ಅನಿವಾರ್ಯತೆ ಉಂಟಾಯಿತು.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಬೇರೂರಿರುವ ಮಹಿಳೆಯರ ಮೇಲಿನ ಲೈಂಗಿಕ ಕಿರುಕುಳವು ಅವ್ಯಾಹತವಾಗಿ ನಡೆಯುತ್ತಿದೆ. ಪ್ರತಿನಿತ್ಯ ಸಾವಿರಾರು ಮಹಿಳೆಯರು ಇದಕ್ಕೆ ಬಲಿಯಾಗುತ್ತಿರುವುದು ವಾಸ್ತವ. ಭಾರತದಲ್ಲಿ ಮೊದಲು ದೆಹಲಿ ವಿಶ್ವವಿದ್ಯಾಲಯದಲ್ಲಿ ಲೈಂಗಿಕ ಕಿರುಕುಳಕ್ಕೆ ಸಂಬಂಧಿಸಿದಂತೆ ಮುಕ್ತ ಚರ್ಚೆ ಪ್ರಾರಂಭವಾಯಿತು. ನಂತರ ೧೯೮೭ರಲ್ಲಿ ರಜನಿ ಪರಾಷರ್ ಅವರು ವಿಭಾಗ ಮುಖ್ಯಸ್ಥರಿಂದ ಲೈಂಗಿಕ ಕಿರುಕುಳಕ್ಕೆ ತುತ್ತಾಗಿ ಆತ್ಮಹತ್ಯೆ ಮಾಡಿಕೊಂಡರು. ಪಂಜಾಬಿನ ಐ.ಎ.ಎಸ್. ಅಧಿಕಾರಿಯಾದ ಮಹಿಳೆ ರೂಪನ್ ದಿಯೋಲ್ ಬಜಾಜ್ ಅವರು ಅಲ್ಲಿನ ಡಿ.ಜಿ.ಪಿ.ಯಾಗಿದ್ದ ಕೆ. ಪಿ. ಎಸ್. ಗಿಲ್ ಅವರಿಂದ ಲೈಂಗಿಕ ಹಿಂಸೆಗೊಳಗಾದರು. ಇದರ ವಿರುದ್ಧ ದಾವೆ ಹೂಡಿದ ರೂಪನ್ ಬಜಾಜ್ ಅವರಿಗೆ ದೀರ್ಘ ವಿಚಾರಣೆಯ ನಂತರ ನ್ಯಾಯ ದೊರೆಯಿತು.

ಮಹಿಳಾ ಅಭಿವೃದ್ಧಿಗಾಗಿ ದುಡಿಯುತ್ತಿರುವ ಗ್ರಾಮೀಣ ಮಹಿಳೆ ಬನ್ವಾರಿ ದೇವಿ ಬಾಲ್ಯ ವಿವಾಹ ತಡೆದದ್ದಕ್ಕೆ ಸಾಮೂಹಿಕ ಅತ್ಯಾಚಾರಕ್ಕೊಳಗಾದಳು. ಕಾನೂನಿನನ್ವಯ ರಕ್ಷಣೆ ಕೇಳಿದ್ದಕ್ಕೆ ಕೊನೆಗೂ ೧೯೯೭ರಲ್ಲಿ ಸುಪ್ರೀಂ ಕೋರ್ಟು ಅದನ್ನೊಂದು ಲೈಂಗಿಕ ಕಿರುಕುಳವೆಂದು ಗುರುತಿಸಿ ಕಲಂ ೨೧ ಜೀವದ ಹಕ್ಕಿನ ಉಲ್ಲಂಘನೆಯನ್ನು ಗುರುತಿಸಿತು. ಆದರೆ ಅನೇಕ ಪ್ರಕರಣಗಳಲ್ಲಿ ಆಡಳಿತ ವರ್ಗವು ತನ್ನ ಅಧಿಕಾರವನ್ನು ಬಳಸಿ, ಇಂತಹ ಮಹಿಳಾ ದೂರುಗಳನ್ನು ದಮನಮಾಡುತ್ತದೆ. ಮಹಿಳಾ ಸಂಘಟನೆಗಳ ಸತತ ಪ್ರಯತ್ನದ ಫಲವಾಗಿ ದೂರು ನಿವಾರಣಾ ಸಮಿತಿಯನ್ನು ರಚಿಸಲಾಗಿದೆ. ಇದು ಕೇವಲ ತೋರಿಕೆಗೆ ಮಾತ್ರ. ಇಲ್ಲಿ ದೂರು ಕೊಟ್ಟವರನ್ನೇ ಹೀನಾಯವಾಗಿ ಕಾಣಲಾಗುತ್ತದೆ. ಕೆಲಸದಿಂದ ತೆಗೆಯಲಾಗುತ್ತದೆ. ಅವರಿಗೆ ಬೆಂಬಲಿಸಿದವರನ್ನೂ ಹಿಂಸೆಗೊಳಪಡಿಸಲಾಗುತ್ತದೆ. ಅನೇಕ ಬಾರಿ ಪ್ರಕರಣಗಳನ್ನು ಕಾರ್ಮಿಕ ನ್ಯಾಯಾಲಯಕ್ಕೆ ವರ್ಗಾಯಿಸಿ ಕೈತೊಳೆದುಕೊಳ್ಳುತ್ತಾರೆ. ಅಧಿಕಾರ ಹಾಗೂ ಹಣಬಲ ಇಲ್ಲಿ ಕೆಲಸ ಮಾಡುತ್ತದೆ. ಹಿಂಸೆಗೆ ಒಳಗಾಗುವುದಲ್ಲದೆ ಆಡಳಿತವರ್ಗದ ಕೆಂಗಣ್ಣಿಗೆ ಗುರಿಯಾಗಿ ಕೆಲಸ ಕಳೆದುಕೊಳ್ಳಬೇಕು, ಇಲ್ಲವೇ ಹಿಂಸೆ, ಕುಹಕ, ದ್ವಂದ್ವಾರ್ಥದ ಮಾತುಗಳನ್ನು ಸಹಿಸಿಕೊಳ್ಳಬೇಕು. ಹೆಣ್ಣಿನ ಮುಂದಿರುವ ಆಯ್ಕೆಗಳು ಇವೆರಡೇ. ಒಂದೋ ಕಿರುಕುಳ ಸಹಿಸಬೇಕು, ಇಲ್ಲ ಕೆಲಸ ಬಿಡಬೇಕು.

ಭಾರತೀಯ ದಂಡಸಂಹಿತೆ (ಐ.ಪಿ.ಸಿ.) ಕಲಂ ೫೦೯ರಂತೆ 'ಮಹಿಳೆಯ ಗೌರವದ ತುಚ್ಛೀಕರಣ' ಹಾಗೂ ಕಲಂ ೩೫೪ರಂತೆ 'ಮಹಿಳೆಯ ಮೇಲಿನ ಹಲ್ಲೆ' ಅಥವಾ ಅವರ 'ಗೌರವಕ್ಕೆ ಧಕ್ಕೆ ತರುವಂತಹ' ಕ್ರಮದ ಕುರಿತು ಹೇಳುತ್ತದೆ. ಕೋರ್ಟಿನವರೆಗೂ ಹೋದರೆ ಅಲ್ಲಿ ಹೆಣ್ಣಿನ ವ್ಯಕ್ತಿತ್ವವನ್ನು, ಚಾರಿತ್ರ್ಯವನ್ನು ಧೂಳೀಪಟ ಮಾಡಲಾಗುತ್ತದೆ. ಭ್ರಷ್ಟಾಚಾರ ವ್ಯಾಪಕವಾಗಿರುವ ಇಂದಿನ ಕಾಲದಲ್ಲಿ ಧನಬಲ, ತೋಳ್ಬಲವಿಲ್ಲದೆ ಹಿಂಸೆಗೊಳಗಾಗುವ ಮಹಿಳಾಪರ ಪೊಲೀಸ್ ವ್ಯವಸ್ಥೆಯನ್ನು ಎಲ್ಲಿಂದ ತರುವುದು ? ಪೊಲೀಸರೂ ಹಣ ನೀಡಿದವರ ಪರವಾಗಿರುತ್ತಾರೆ. ಆರಂಭದಲ್ಲೇ ದಿಕ್ಕು ತಪ್ಪಿಸುವ ಕೆಲಸ ಮಾಡುತ್ತಾರೆ. ದೆಹಲಿಯ ಕಮಿಷನರ್ ಒಬ್ಬರು ದೂರು ಕೊಡಲು ಬಂದ ಮಹಿಳೆಯನ್ನು ಗದರಿಸಿ, "ಸರಿಯಾಗಿ ಬಟ್ಟೆ ಹಾಕ್ಕೊಂಡ್ರೆ ಇದೆಲ್ಲಾ ಯಾಕೆ ನಡೆಯುತ್ತೆ ?" ಎಂದು ಮಹಿಳಾ ವಿರೋಧಿಯಾಗಿ ಮಾತನಾಡಿದ ಪ್ರಕರಣ ನಡೆದಿದೆ.

ದೈಹಿಕ ಹಿಂಸೆ, ಲೈಂಗಿಕ ಹಿಂಸೆಗಳಿಗೆ ಕ್ರಿಮಿನಲ್ ಕಾನೂನಿನಡಿ ಕಠಿಣವಾದ ಶಿಕ್ಷೆ ವಿಧಿಸುತ್ತಿಲ್ಲ. ಕ್ರಿಮಿನಲ್ ಕಾನೂನಿನಲ್ಲಿಯೂ ಬದಲಾವಣೆ ತರಲು ಪ್ರಭುತ್ವದ ಮೇಲೆ ಒತ್ತಡ ತರಬೇಕು. ಪ್ರಭುತ್ವದ ಪ್ರತಿನಿಧಿ ಮಂತ್ರಿ ಹಾಗೂ ಮಹಿಳಾ ಆಯೋಗದ ಅಧ್ಯಕ್ಷೆ ಮಂಜುಳಾ ಅವರು, "ಮಹಿಳೆ ಧರಿಸುವ ಉಡುಪುಗಳೇ ಇದಕ್ಕೆ ಕಾರಣ" ಎಂದು ಹೇಳಿದ್ದಾರೆ. ಇಂತಹ ಬಾಲಿಶ ಹೇಳಿಕೆಗಳನ್ನು ನೀಡದೆ ಸಮಸ್ಯೆಯ ಮೂಲಕ್ಕೆ ಹೋಗಿ ಸೂಕ್ಷ್ಮವಾಗಿ ಪರಿಶೀಲಿಸಿ ಮಾತಾಡಬೇಕು. ಆದಿವಾಸಿ ಶಾಲಾ ಶಿಕ್ಷಕಿ ಸೋನಿ ಸೋರಿ ಅವರ ಮೇಲೆ ಲೈಂಗಿಕ ಅತ್ಯಾಚಾರಕ್ಕೆ ಕಾರಣರಾದ ಛತ್ತೀಸ್‌ಘಡದ ಎಸ್. ಪಿ. ಅಂಕಿತ್ ಗರ್ಗ್, ಅವರಿಗೆ ರಾಷ್ಟ್ರಪತಿಯವರು ಶೌರ್ಯ ಪ್ರಶಸ್ತಿ ನೀಡಿರುವುದು ವಿಪರ್ಯಾಸ ! ಇದು ಪ್ರಶಸ್ತಿಗೇ ಅವಮಾನ ಎಸಗಿದಂತೆ, ಅಲ್ಲವೇ ?



ಮಹಿಳೆಯ ಘನತೆಗೆ ದೊಡ್ಡ ಪೆಟ್ಟು ಈ ಲೈಂಗಿಕ ಹಿಂಸಾಚಾರ. ಅದು ಅವಳಿಗೆ ಅತ್ಯಂತ ನೋವಿನ ಮತ್ತು ಅಪಮಾನಕರ ಸಂಗತಿ. ಆರ್ಥಿಕ ಸ್ವಾವಲಂಬಿತರಾಗಿ ಸಮಾನತೆ ಬಯಸುತ್ತಿರುವ ಇವರಿಗೆ ದೊರಕುತ್ತಿರುವುದಾದರೂ ಏನು ? ಏರ್‌ಲೈನ್ಸ್‌ನಲ್ಲಿ ಕೆಲಸ ಮಾಡುತ್ತಿದ್ದ ಷೆಹನಾಜ್ ಲೈಂಗಿಕ ಕಿರುಕುಳದ ಬಗ್ಗೆ ದೂರು ನೀಡಿದ್ದಕ್ಕಾಗಿ ಕೆಲಸ ಕಳೆದುಕೊಂಡರು. ಇಂದಿನ ಬೆಲೆ ಏರಿಕೆಯ ಕಾಲದಲ್ಲಿ ಸಂಸಾರ ಸರಿದೂಗಿಸಲು ಹೆಣ್ಣಿನ ದುಡಿಮೆ ಅನಿವಾರ್ಯ. ಆದರೆ ಕೆಲಸದ ಸ್ಥಳಗಳಲ್ಲಿ ಇಂತಹ ಅಪಮಾನಕ್ಕೆ ಗುರಿಯಾಗಿ ತಕರಾರು ತೆಗೆದರೆ ಕೆಲಸ ಕಳೆದುಕೊಳ್ಳುವ ಭೀತಿ ಮಹಿಳೆಯರಿಗೆ ತಪ್ಪಿದ್ದಲ್ಲ. ಹೆಣ್ಣಿನ ಘನತೆಯನ್ನು ಕಾಪಾಡದ, ಗೌರವಿಸದ ವ್ಯವಸ್ಥೆ ಎಂದಿಗೂ ಮಾದರಿಯಲ್ಲ.

**ಡಾ॥ ಕೆ. ಷರೀಫಾ**
೫ ಎ, ೧ನೇ ಮಹಡಿ, ೧ನೇ ಬ್ಲಾಕ್, ೨ನೇ ಮುಖ್ಯರಸ್ತೆ
ಆರ್. ಟಿ. ನಗರ, ಬೆಂಗಳೂರು – ೫೬೦ ೦೩೨

# ಆಹಾರ ಭದ್ರತೆ : ಜನರನ್ನು ಒಳಗೊಳ್ಳುವ ಯೋಜನೆ

ಟಿ. ಆರ್. ಚಂದ್ರಶೇಖರ

**ಪ್ರಸ್ತಾವನೆ**

ಆಹಾರಕ್ಕೆ ನಮ್ಮ ಜನರು ಬಹಳ ಹಿಂದಿನಿಂದಲೂ ಪ್ರಮುಖವಾದ ಸ್ಥಾನವನ್ನು ನೀಡುತ್ತಾ ಬಂದಿದ್ದಾರೆ. ಉದಾಹರಣೆಗೆ, ೧೨ನೆಯ ಶತಮಾನದ ಅಂಬಿಗರ ಚೌಡಯ್ಯನ ವಚನವನ್ನು ನೋಡಿ :

ದೇಹಾರವ ಮಾಡುವ ಅಣ್ಣಗಳಿರಾ, ಅಣ್ಣಗಳಿರಾ
ಒಂದು ತುತ್ತು ಆಹಾರವನ್ನಿಕ್ಕಿರಯ್ಯಾ
ದೇಹಾರಕ್ಕೆ ಆಹಾರವೇ ನಿಚ್ಚಣಿಕೆ
ದೇಹಾರ ಮಾಡುತ್ತೆ ಆಹಾರವನಿಕ್ಕದಿದ್ದರೆ
ಆ ಹರನಿಲ್ಲೆಂದನಂಬಿಗರ ಚೌಡಯ್ಯ

ಚೌಡಯ್ಯನ ಪ್ರಕಾರ ದೇವಾಲಯ/ದೇವರ ಪೂಜೆಗಳಿಗಿಂತ ಆಹಾರ ಮುಖ್ಯ. ಅದು ಪ್ರಥಮ–ಪ್ರಾಥಮಿಕ. ಇವೆರಡರ ನಡುವೆ ಆಯ್ಕೆಯ ಪ್ರಶ್ನೆ ಬಂದರೆ ಚೌಡಯ್ಯ ಆಹಾರವನ್ನು ಆಯ್ಕೆ ಮಾಡಿಕೊಳ್ಳುತ್ತಾನೆ ವಿನಾ ದೇಹಾರವನ್ನಲ್ಲ. ಅಲ್ಲಮಪ್ರಭು ತನ್ನ ಒಂದು ವಚನದಲ್ಲಿ 'ಒಡಲಿಚ್ಚೆಯ ಸವೆಸದೆ ನಿಮಿಷವಿರಬಾರದು' ಅನ್ನುತ್ತಾನೆ. ದಾಸೋಹವು ಆಹಾರಕ್ಕೆ ಸಂಬಂಧಿಸಿದ ಸಂಗತಿಯೇ ಆಗಿದೆ. ಬಸವಣ್ಣನು 'ಅಂಬಲಿ ಸಂಸ್ಕೃತಿ'ಯ ಬಗ್ಗೆ ಮಾತನಾಡುತ್ತಾನೆ. 'ಎಲ್ಲ ದೇವರು ಬಂದರೂ ಅನ್ನ ದೇವರು ಬರಲಿಲ್ಲ' ಎಂದು ಕನ್ನಡದ ಪ್ರಸಿದ್ಧ ಕವಿಯೊಬ್ಬರು ಹೇಳುತ್ತಾರೆ.

ಸಮಾಜದಲ್ಲಿ ಯಾವುದೇ ಬಗೆಯ ಭೇದ–ಭಾವವನ್ನು ಮತ್ತು ಮೇಲು–ಕೀಳನ್ನು ಎಣಿಸದೆ ಎಲ್ಲರಿಗೂ ಆಹಾರ ಭದ್ರತೆಯನ್ನು ಒದಗಿಸುವುದು ಸಾಮಾಜಿಕ ನ್ಯಾಯವಾಗಿದೆ. ಆಹಾರ ಭದ್ರತೆ ಅನ್ನುವುದು ಕೇವಲ ಜನಪ್ರಿಯ ಕಾರ್ಯಕ್ರಮ ಮಾತ್ರವಲ್ಲ. ನಿಜ, ಅಲ್ಲಿ ರೂಪಾಯಿಗೆ ಒಂದು ಕೆ.ಜಿ. ಅಕ್ಕಿಯನ್ನು ನೀಡಲಾಗುತ್ತದೆ. ಅದರಿಂದ ಅದನ್ನು ಜನಪ್ರಿಯ ಕಾರ್ಯಕ್ರಮ ಎಂದು ಕರೆಯಬಹುದು. ಇನ್ನೊಂದು ನೆಲೆಯಿಂದ ನೋಡಿದಾಗ ಅದು ಮುಖ್ಯವಾಗಿ ಜನರನ್ನು ಒಳಗೊಳ್ಳುವ ಯೋಜನೆಯಾಗಿ ಕಾಣುತ್ತದೆ. ಅದು ಜನಪ್ರಿಯ ಕಾರ್ಯಕ್ರಮ ಮಾತ್ರವಲ್ಲ, ಅದು ಜನರನ್ನು ಒಳಗೊಳ್ಳುವ ಕಾರ್ಯಕ್ರಮ. ಹೇಗೆ ? ಇದು ಜನರಲ್ಲಿ ಒಂದು ಬಗೆಯ ಅವಲಂಬನೆ ಭಾವನೆಯನ್ನು ಉಂಟುಮಾಡುವುದಿಲ್ಲವೆ ? ದುಡಿಮೆಗಾರರು ಇದರಿಂದ ಸೋಮಾರಿಗಳಾಗುವುದಿಲ್ಲವೆ ? ಅನ್ನಭಾಗ್ಯದಲ್ಲಿ ಖರೀದಿಸಿದ ಅಕ್ಕಿಯಲ್ಲಿ ಒಂದು ಭಾಗವನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡಿ ದುಡಿಯುವುದನ್ನೇ ಜನರು ಬಿಟ್ಟುಬಿಡುವುದಿಲ್ಲವೆ ? ಇದು ಸರ್ಕಾರದ ಖಜಾನೆಯ ಮೇಲೆ ಅನವಶ್ಯಕ ಹೊರೆಯನ್ನು ಹೇರುವುದಿಲ್ಲವೆ ? ತೆರಿಗೆಗಳ ಮೂಲಕ ಸಂಗ್ರಹಿಸಿದ ಹಣವನ್ನು ಅನ್ನಭಾಗ್ಯದ ಯೋಜನೆಯ ಮೂಲಕ ವ್ಯರ್ಥವಾಗಿ ಪೋಲು ಮಾಡಿದಂತಾಗುವುದಿಲ್ಲವೆ ? ಇದರಿಂದಾಗಿ ಜನರು ಹೊಲ–ಗದ್ದೆಗಳಲ್ಲಿ ದುಡಿಯುವುದನ್ನೇ ಬಿಟ್ಟುಬಿಟ್ಟರೆ ಆಹಾರದ ಉತ್ಪಾದನೆ ಕಡಿಮೆ ಯಾಗುವುದಿಲ್ಲವೇ ? ಇದು ನಿರುತ್ತೇಜನಕಾರಕವಾಗಿ ಕೆಲಸ ಮಾಡುವುದಿಲ್ಲವೆ ? ಒಂದು ವೇಳೆ ಹಾಗೆ ಕಡಿಮೆಯಾದರೆ ಅನ್ನಭಾಗ್ಯಕ್ಕೆ ಅಕ್ಕಿ ಎಲ್ಲಿಂದ ಬರುತ್ತದೆ ? ಅನ್ನಭಾಗ್ಯ ಕಾರ್ಯಕ್ರಮವನ್ನು ಕರ್ನಾಟಕ ಸರ್ಕಾರ ಮತ್ತು ಆಹಾರ ಭದ್ರತೆ ಕಾರ್ಯಕ್ರಮವನ್ನು ಕೇಂದ್ರ ಸರ್ಕಾರ ಜಾರಿಗೊಳಿಸಿದಾಗ ಮಾಧ್ಯಮಗಳಲ್ಲಿ ಎದ್ದ ಬಹುಮುಖ್ಯ ಪ್ರಶ್ನೆಗಳಿವು. ಏನೋ ನಡೆಯಬಾರದ್ದು ನಡೆಯುತ್ತಿದೆ ಅನ್ನುವ ರೀತಿಯಲ್ಲಿ ಅದರ ಬಗ್ಗೆ ಅಣಕವಾಡಲಾಗಿದೆ, ಪದಗಳನ್ನು ಕಟ್ಟಲಾಗಿದೆ, ಸರ್ಕಾರವನ್ನು ಹೀಗಳೆಯಲಾಗಿದೆ ! ಒಂದೆ–ಎರಡೆ. ಬಡವರ ಬಗ್ಗೆ ಅಣಕವಾಡುವುದು ಅತ್ಯಂತ ಅಮಾನುಷ ಅನ್ನುವುದನ್ನು ಮರೆತು ಕೆಲವು ಜನರು, ಜನಪ್ರತಿನಿಧಿಗಳು, ವಿದ್ವಾಂಸರು, ಮಾಧ್ಯಮಗಳು ಅನ್ನಭಾಗ್ಯದ ವಿರುದ್ಧ ಟೀಕೆಯ ಪ್ರವಾಹವನ್ನೇ ಹರಿಸಿದರು. ಕೇಂದ್ರ ಸರ್ಕಾರವೂ ಆಹಾರ ಭದ್ರತೆಯ ಬಿಲ್ಲನ್ನು ಕಳೆದ ಸಂಸತ್ತಿನಲ್ಲಿ ಅನುಮೋದಿಸಿದೆ ಮತ್ತು ಆಹಾರ ಭದ್ರತೆ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಿದೆ.

ಈ ಬಗೆಯ ನೂರಾರು ಪ್ರಶ್ನೆಗಳನ್ನು ಆಹಾರ ಭದ್ರತೆ ಬಿಲ್ಲಿನ ಬಗ್ಗೆ, ಅನ್ನಭಾಗ್ಯ ಯೋಜನೆಯ ಬಗ್ಗೆ ಎತ್ತಲಾಗುತ್ತಿದೆ. ಈ ಎಲ್ಲ ಪ್ರಶ್ನೆಗಳು ಸಮಾನತೆ, ಸಾಮಾಜಿಕ ನ್ಯಾಯ, ಮಾನವ ಹಕ್ಕುಗಳ ಬಗೆಗಿನ ತಪ್ಪು ತಿಳುವಳಿಕೆಯಿಂದ, ತಪ್ಪು ಧೋರಣೆಯಿಂದ ಮೂಡಿಬಂದ ಸಂಗತಿಗಳಾಗಿವೆ. ಈ ಬಗೆಯ ಪ್ರಶ್ನೆಗಳಿಗೆ ಉತ್ತರ ನೀಡುವ ಅಗತ್ಯವಿದೆ. ಪ್ರಸ್ತುತ ಪ್ರಬಂಧದಲ್ಲಿ ಅಂತಹ ಪ್ರಶ್ನೆಗಳಿಗೆ





ಉತ್ತರ ನೀಡಲು ಪ್ರಯತ್ನಿಸಲಾಗಿದೆ. ಪ್ರಸ್ತಾವನೆಯನ್ನು ಬಿಟ್ಟು ಇಲ್ಲಿ ಐದು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಬಡತನದ ಬಗ್ಗೆ ಜನರಲ್ಲಿ ಸಾಮಾನ್ಯವಾಗಿರುವ ತಿರಸ್ಕಾರ ಮನೋಭಾವದ ಜಾಗತಿಕ ಆಯಾಮವನ್ನು ಕುರಿತಂತೆ ಚರ್ಚೆ ಮಾಡಲಾಗಿದೆ. ಎರಡನೆಯ ಭಾಗದಲ್ಲಿ ಆಹಾರ ಭದ್ರತೆಯು ಹಕ್ಕಿನ ಸಂಗತಿಯೇ ವಿನಾ ಹಂಗಿನ ಸಂಗತಿಯಲ್ಲ ಎಂಬುದನ್ನು ಗುರುತಿಸಲಾಗಿದೆ. ಮೂರನೆಯ ಭಾಗದಲ್ಲಿ ದುಡಿಮೆಗಾರರು ಸಲ್ಲಿಸುವ ಶ್ರಮ ಮತ್ತು ಅದಕ್ಕೆ ಅವರು ಪಡೆಯುವ ಕೂಲಿ ನಡುವಿನ ಅಂತರ ಮತ್ತು ಆಹಾರ ಭದ್ರತೆಯು ಅಂತಹ ಅಂತರವನ್ನು ತುಂಬುವ ಕಾರ್ಯಕ್ರಮವಾಗಿದೆ ಎಂಬುದನ್ನು ಸ್ಪಷ್ಟೀಕರಿಸಲು ಪ್ರಯತ್ನಿಸಲಾಗಿದೆ. ಅನ್ನಭಾಗ್ಯವು ಮಹಿಳೆಯರ ದೃಷ್ಟಿಯಲ್ಲಿ ಯಾಕೆ ಮುಖ್ಯ ಎಂಬುದನ್ನು ನಾಲ್ಕನೆಯ ಭಾಗದಲ್ಲಿ ವಿವರವಾಗಿ ಪರಿಶೀಲಿಸಲಾಗಿದೆ. ಆಹಾರ ಭದ್ರತೆಯ ಮೇಲಿನ ಸರ್ಕಾರದ ವೆಚ್ಚವು ಅದು ಇತರೆ ಸಂಗತಿಗಳಿಗೆ ನೀಡುವ ಸಬ್ಸಿಡಿಗಿಂತ ಕಡಿಮೆ ಇರುವುದನ್ನು ಐದನೆಯ ಭಾಗದಲ್ಲಿ ತೋರಿಸಲಾಗಿದೆ. ಈ ಪ್ರಬಂಧದಲ್ಲಿ ಆಹಾರದ ಮಹತ್ವವನ್ನು ಸಾಧಿಸಲು ಕೆಲವು ವಚನಗಳನ್ನು ಬಳಸಿಕೊಳ್ಳಲಾಗಿದೆ. ಇಲ್ಲಿ ತಾತ್ವಿಕ ಹಾಗೂ ಅನುಭವಾತ್ಮಕ ನೆಲೆಯಲ್ಲಿ ಆಹಾರ ಭದ್ರತೆಯ ಪರವಾಗಿ ವಾದವನ್ನು ಮಂಡಿಸಲಾಗಿದೆ.

**೧. ಬಡವರ ಬಗೆಗಿನ ತಿರಸ್ಕಾರ ಮನೋಭಾವದ ಜಾಗತಿಕ ಆಯಾಮ**

ಬಡವರಿಗೆ, ಹಸಿದಿರುವವರಿಗೆ, ದುಸ್ಥಿತಿಯಲ್ಲಿರುವವರಿಗೆ, ಚಾರಿತ್ರಿಕ ತಾರತಮ್ಯವನ್ನು ಅನುಭವಿಸುತ್ತಿರುವವರಿಗೆ ಉತ್ತೇಜನ ನೀಡುವುದು, ಸಬ್ಸಿಡಿಯಲ್ಲಿ ನೆರವು ನೀಡುವುದು, ಮೀಸಲಾತಿ ಒದಗಿಸುವುದು ಮುಂತಾದ ಸಂಗತಿಗಳನ್ನು ತಾತ್ಸಾರದಿಂದ ನೋಡುವ ಧೋರಣೆಗೆ ಜಾಗತಿಕ ಆಯಾಮವಿದೆ. ಬಡವರ ಬಗ್ಗೆ, ಹಸಿದವರ ಬಗ್ಗೆ ಹಗುರವಾಗಿ ಮಾತನಾಡುವ ಕ್ರಮ ಕರ್ನಾಟಕಕ್ಕೆ, ಭಾರತಕ್ಕೆ ಮಾತ್ರ ಸೀಮಿತವಾದ ಸಂಗತಿಯಲ್ಲ. ಅಮೆರಿಕೆಯಲ್ಲೂ ಇಂತಹ ಮನೋಭಾವ ಕೆಲಸ ಮಾಡುತ್ತಿರುವುದನ್ನು ಕಾಣಬಹುದು. ನಾವು ಯಾವುದನ್ನು ಆಹಾರ ಭದ್ರತೆಯೆಂದು ಕರೆಯುತ್ತೇವೆಯೋ ಅಂತಹದ್ದೇ ಕಾರ್ಯಕ್ರಮವನ್ನು ಅಲ್ಲಿ ಫುಡ್ ಸ್ಟ್ಯಾಂಪ್ಸ್ ಪ್ರೋಗ್ರಾಮ್ ಎಂದು ಕರೆಯಲಾಗುತ್ತದೆ. ಈಗ ಅದನ್ನು 'ಪೂರಕ ಪೌಷ್ಟಿಕತೆ ನೆರವು ಕಾರ್ಯಕ್ರಮ' (ಎಸ್ಎನ್ಎಪಿ) ಎಂದು ಬದಲಾಯಿಸಲಾಗಿದೆ. ಇದಕ್ಕಾಗಿ ಅಮೆರಿಕ ಸರ್ಕಾರ ೨೦೧೩ರಲ್ಲಿ ಖರ್ಚು ಮಾಡಿದ ಮೊತ್ತ ೭೬ ಬಿಲಿಯನ್ ಡಾಲರುಗಳು (ರೂಪಾಯಿಗಳ ಲೆಕ್ಕದಲ್ಲಿ ಅದು ರೂ. ೪.೫೬ ಲಕ್ಷ ಕೋಟಿಯಾಗುತ್ತದೆ. \$ ೭೬ ಬಿಲಿಯನ್ x ೧೦೦ ಕೋಟಿ = ೭೬೦೦ ಕೋಟಿ ಡಾಲರುಗಳು. \$ ೭೬೦೦ ಕೋಟಿ x ರೂ. ೬೦ = ರೂ. ೪.೫೬ ಲಕ್ಷ ಕೋಟಿ). ಅಮೆರಿಕೆಯಲ್ಲಿ ಸುಮಾರು ೪೫ ದಶಲಕ್ಷ ಜನರು ಇದರಿಂದ ಲಾಭ ಪಡೆಯುತ್ತಿದ್ದಾರೆ. ಅಮೆರಿಕೆಯ ಒಟ್ಟು ಜನಸಂಖ್ಯೆಯ ಶೇಕಡ ೧೫ರಷ್ಟು ಮಂದಿಗೆ ಇದರ ಉಪಯೋಗ ದೊರೆಯುತ್ತಿದೆ ಎನ್ನಲಾಗಿದೆ. ಈ ಕಾರ್ಯಕ್ರಮದ ಮೇಲೆ ಸರ್ಕಾರ ಮಾಡುವ ಒಂದು ಡಾಲರ್ ಖರ್ಚಿಗೆ ಪ್ರತಿಯಾಗಿ ಅದು ೧.೭೫ ಡಾಲರಿನಷ್ಟು ಆರ್ಥಿಕ ಚಟುವಟಿಕೆಗಳನ್ನು ಉಂಟುಮಾಡುತ್ತಿದೆ ಎಂದು ಅಧ್ಯಯನಗಳು ತಿಳಿಸುತ್ತವೆ. ಯಾವಾಗಲೂ ವರಮಾನದ ಸಮಾನ ವಿತರಣೆಯು ಅಭಿವೃದ್ಧಿಯ



ಮಟ್ಟವನ್ನು ಉತ್ತಮಪಡಿಸುತ್ತದೆ ವಿನಾ ಅದನ್ನು ಅದು ತಗ್ಗಿಸುವುದಿಲ್ಲ. ವರಮಾನದ ಸಮಾನ ವಿತರಣೆ ಮತ್ತು ಆರ್ಥಿಕ ಬೆಳವಣಿಗೆಗಳ ನಡುವೆ ವಿಲೋಮ ಸಂಬಂಧವಿದೆ ಎಂದು ಹೇಳಲಾಗುತ್ತಿದೆ. ಆದರೆ ವಸ್ತುಸ್ಥಿತಿಯು ಇದಕ್ಕೆ ಭಿನ್ನವಾಗಿದೆ. 'ವಿತರಣಾ ನ್ಯಾಯ' ಎಂಬುದು ಆರ್ಥಿಕ ಬೆಳವಣಿಗೆಯ ಮೇಲೆ ನಿರುತ್ತೇಜನ ಪರಿಣಾಮ ಬೀರುತ್ತದೆ ಎಂಬುದು ಕೆಲವರ ನಿಲುವು. ಇವೆಲ್ಲ ತಪ್ಪು ನಿಲುವುಗಳು. ವಿತರಣಾ ನ್ಯಾಯ ಅನ್ನುವುದು ಅಭಿವೃದ್ಧಿಯ ಸಂಗತಿ. ಅಭಿವೃದ್ಧಿ ಮತ್ತು ವರಮಾನದ ಸಮಾನ ವಿತರಣೆಗಳ ನಡುವೆ ಸಕಾರಾತ್ಮಕವಾದ ಸಂಬಂಧ ಇರುತ್ತದೆ ಎಂಬುದನ್ನು ಪಾಲ್ ಕೃಗ್‌ಮನ್ ತನ್ನ ಅಂಕಣದಲ್ಲಿ ಪ್ರತಿಪಾದಿಸಿದ್ದಾನೆ (ಲಿಬರ್ಟಿ, ಈಕ್ವಾಲಿಟಿ, ಎಫಿಷಿಯನ್ಸಿ. ದಿ ಹಿಂದು. ಮಾರ್ಚ್ ೧೧, ೨೦೧೪). ಈ ದೃಷ್ಟಿಯಿಂದ ಆಹಾರ ಭದ್ರತೆ ಕಾರ್ಯಕ್ರಮ ಯಾವ ಕಾರಣಕ್ಕೂ ಅಭಿವೃದ್ಧಿಗೆ ಮಾರಕವಾಗುವುದಿಲ್ಲ ಎಂದು ಹೇಳಲಾಗಿದೆ. ದುರದೃಷ್ಟದ ಸಂಗತಿಯೆಂದರೆ ಇದರ ಬಗ್ಗೆ ಅನೇಕರಿಗೆ ನಂಬಿಕೆಯಿಲ್ಲ.

ಈ ಬಗ್ಗೆ ಪಾಲ್ ಕೃಗ್‌ಮನ್ ತನ್ನ ಇತ್ತೀಚಿಗಿನ ಮತ್ತೊಂದು ಅಂಕಣದಲ್ಲಿ ಜನರಲ್ಲಿ, ಸಂಸತ್ ಸದಸ್ಯರಲ್ಲಿ ಬಡತನ ನಿವಾರಣಾ ಕಾರ್ಯಕ್ರಮ, ಆಹಾರ ಭದ್ರತೆ ಮುಂತಾದವುಗಳ ಬಗ್ಗೆ ಇರುವ ಧೋರಣೆಯ ಬಗ್ಗೆ ಚರ್ಚೆ ಮಾಡಿದ್ದಾನೆ. ಅಲ್ಲಿನ ಸಂಸತ್ತಿನ ಬಜೆಟ್ ಸಮಿತಿಯ ಮುಖ್ಯಸ್ಥ ಪಾಲ್ ರೈಯಾನ್ ಮಂಡಿಸಿದ್ದ 'ಬಡತನ ನಿವಾರಣಾ ಕಾರ್ಯಕ್ರಮಗಳು ಬಡವರನ್ನು ತೂಗುಯ್ಯಾಲೆಯಲ್ಲಿ ಕೂರಿಸಿಬಿಡುವ ಸಾಧ್ಯತೆಯಿದೆ. ಅದಕ್ಕೆ ನಾವು ಅವಕಾಶ ಮಾಡಿಕೊಡುವುದಿಲ್ಲ. ಏಕೆಂದರೆ ಅಂತಹ ಕಾರ್ಯಕ್ರಮಗಳು ಜನರಲ್ಲಿ ಸಂತುಷ್ಟ ಭಾವನೆಯನ್ನು ಉಂಟುಮಾಡಿ ಅವರಲ್ಲಿ ದುಡಿಯುವ ಹುಮ್ಮಸ್ಸಿನ ಭಾವನೆಯನ್ನು ಹತ್ತಿಕ್ಕಿ ಬಿಡುತ್ತವೆ' ಎಂಬ ಅಭಿಪ್ರಾಯದ ಜೊಳ್ಳುತನದ ಬಗ್ಗೆ ತನ್ನ ಅಂಕಣದಲ್ಲಿ ಮಾತನಾಡಿದ್ದಾನೆ. ಈ ವಿಚಾರದ ಬಗ್ಗೆ ಅಲ್ಲಿನ ಸಂಸತ್ತಿನಲ್ಲಿ ಮಂಡಿತವಾದ ಎರಡು ಅಭಿಪ್ರಾಯಗಳ ಬಗ್ಗೆ ನಮ್ಮ ಗಮನ ಸೆಳೆಯುತ್ತಾನೆ :

೧. ಬಡತನ ನಿವಾರಣಾ ಕಾರ್ಯಕ್ರಮಗಳು ಜನರಲ್ಲಿ ಒಂದು ಬಗೆಯ ಸಂತುಷ್ಟ ಭಾವನೆಯನ್ನು ಬೆಳೆಸಿಬಿಡುತ್ತವೆ. ಅಂತಹ ಕಾರ್ಯಕ್ರಮಗಳು ಜನರಲ್ಲಿ ದುಡಿಯುವ ಉತ್ಸಾಹವನ್ನು ಹತ್ತಿಕ್ಕಿಬಿಡುತ್ತವೆ.

೨. ಇಂತಹ ಕಾರ್ಯಕ್ರಮಗಳಿಂದಾಗಿ ಬಡವರಲ್ಲಿ ಉಂಟಾಗುವ ಸಂತುಷ್ಟ-ಸಂತೃಪ್ತ ಭಾವನೆಯು ಮತ್ತು ದುಡಿಮೆಯ ಬಗ್ಗೆ ತಾತ್ಸಾರ ಮನೋಭಾವ ಮುಂತಾದವು ಬಡತನವು ಮುಂದುವರಿಯುತ್ತಿರುವುದಕ್ಕೆ ಕಾರಣವಾಗುತ್ತಿವೆ.

ಇಂತಹ ತೀರ್ಮಾನಗಳಲ್ಲಿ ಯಾವುದೇ ಹುರುಳಿಲ್ಲ ಎಂಬುದನ್ನು ಅವನು ಬಹಿರಂಗಪಡಿಸಿದ್ದಾನೆ. ಬಡತನವು ಏಕೆ ಮುಂದುವರಿಯುತ್ತಿದೆ ? ಪಾಲ್ ರೈಯಾನ್ ವಾದಿಸುವಂತೆ ಅದಕ್ಕೆ ಕಾರಣ ಬಡತನ ನಿವಾರಣಾ ಕಾರ್ಯಕ್ರಮಗಳಾಗಲಿ ಅಥವಾ ಸಬ್ಸಿಡಿಯಲ್ಲಿ ನೀಡುತ್ತಿರುವ ನೆರವುಗಳಾಗಲಿ ಅಲ್ಲ. ಅಲ್ಲಿನ ಬಡತನ ನಿವಾರಣಾ ಕಾರ್ಯಕ್ರಮಗಳ ಬಗ್ಗೆ ಸಂಶೋಧನೆಗಳು ಹೇಳುವ ಸತ್ಯ ಬೇರೆಯೇ ಇದೆ ಎಂಬುದನ್ನು ಕೃಗ್‌ಮನ್ ದಾಖಲಿಸಿದ್ದಾನೆ. ಇದು ನಮ್ಮ ದೇಶ/ರಾಜ್ಯಕ್ಕೂ ಅನ್ವಯವಾಗುತ್ತದೆ. ಅಮೆರಿಕೆಯಲ್ಲಿ ಬಡವರಿಗೆ ವರಮಾನ ಶ್ರೇಣಿಯಲ್ಲಿ ಮೇಲು ಚಲನೆಯನ್ನು ಸಾಧಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ, ಏಕೆ ? ಅದಕ್ಕೆ ಮುಖ್ಯ ಕಾರಣವೆಂದರೆ ಅವರಲ್ಲಿ ಬಹುಪಾಲು ಜನರು ಅಪೌಷ್ಟಿಕತೆಯಿಂದ ನರಳುತ್ತಿದ್ದಾರೆ, ಅವರಿಗೆ ಸಾಕಷ್ಟು ಪ್ರಮಾಣದಲ್ಲಿ ವೈದ್ಯಕೀಯ ನೆರವು ದೊರೆಯುತ್ತಿಲ್ಲ. ಮುಖ್ಯವಾಗಿ ಅವರಿಗೆ ಒಳ್ಳೆಯ ಶಿಕ್ಷಣ ದೊರೆಯುತ್ತಿಲ್ಲ. ಕೃಗ್‌ಮನ್ ಪ್ರಕಾರ ಅಮೆರಿಕೆಯಲ್ಲಿನ ಬಡತನ ನಿವಾರಣಾ ಕಾರ್ಯಕ್ರಮಗಳು ವಿವಿಧ ರೀತಿಯಲ್ಲಿ ಬಡವರಿಗೆ ನೆರವಾಗುತ್ತಿವೆ. ಉದಾಹರಣೆಗೆ, ಅಲ್ಲಿ ಯಾರು ಆಹಾರ ಸ್ಟ್ಯಾಂಪುಗಳ ಕಾರ್ಯಕ್ರಮದಡಿ ನೆರವು ಪಡೆಯುತ್ತಿದ್ದಾರೋ ಅವರ ಆರೋಗ್ಯ ಸ್ಥಿತಿಗತಿಯು ಅಂತಹ ನೆರವು ಪಡೆಯದೆ ಇರುವವರಿಗಿಂತ ಉತ್ತಮವಾಗಿದೆ. ಈ ಕಾರ್ಯಕ್ರಮಗಳಿಂದ ಉಪಯೋಗ ಪಡೆಯುತ್ತಿರುವವರ ದುಡಿಮೆಯ ಕಾರ್ಯಕ್ಷಮತೆಯು ನೆರವು ಪಡೆಯುವುದಕ್ಕೆ ಹಿಂದೆ ಇದ್ದುದಕ್ಕಿಂತಲೂ ಈಗ ಉತ್ತಮವಾಗಿದೆ. ಕೃಗ್‌ಮನ್ ಪ್ರಕಾರ ಅನೇಕ ಮುಂದುವರಿದ ದೇಶಗಳಲ್ಲಿರುವುದಕ್ಕಿಂತ ಅಮೆರಿಕೆಯಲ್ಲಿ ಸಾಮಾಜಿಕ ಮೇಲು ಚಲನೆಯ ನಡೆ ಮಂದಗತಿಯಲ್ಲಿದೆ. ಅಮೆರಿಕೆಯಲ್ಲಿ ಬಡತನವು ಮುಂದುವರಿಯುತ್ತಿರುವುದಕ್ಕೆ ಸರ್ಕಾರವು ಹೆಚ್ಚು ಹೆಚ್ಚು ನೆರವನ್ನು ಬಡವರಿಗೆ ಉಚಿತವಾಗಿ ನೀಡುತ್ತಿದೆ ಎಂಬುದಕ್ಕಿಂತ ಅವರಿಗೆ ಸರ್ಕಾರ ಹೆಚ್ಚು

ಹೆಚ್ಚು ನೆರವನ್ನು ನೀಡುತ್ತಿಲ್ಲ ಎಂಬುದು ಮುಖ್ಯ ಕಾರಣವಾಗಿದೆ. ಬಡವರಿಗೆ ನೆರವು ನೀಡುವುದಕ್ಕೆ ಸಂಬಂಧಿಸಿದಂತೆ ಎಲ್ಲ ದೇಶಗಳಲ್ಲೂ ತಿರಸ್ಕಾರವಿದೆ. ಇದು ಅರ್ಥವಿಲ್ಲದ ಧೋರಣೆ. ಇಂತಹ ಧೋರಣೆಯನ್ನು ಕಟುವಾಗಿ ಟೀಕಿಸುವ ಕೃಗ್‌ಮನ್ ಅದನ್ನು ಬೂಟಾಟಿಕೆಯ, ಕಪಟತನದ ಮತ್ತು ಆಷಾಢಭೂತಿತನದ ಧೋರಣೆ ಎಂದು ಕರೆಯುತ್ತಾನೆ (ಪಾಲ್ ಕೃಗ್‌ಮನ್. 'ದಿ ಹ್ಯಾಮಕ್ ಫ್ಯಾಲಸಿ'. ದಿನಾಂಕ ೦೮ ಮಾರ್ಚ್ ೨೦೧೪, ವರ್ಲ್ಡ್‌ವ್ಯೂ: **ದಿ ಹಿಂದು**. ಪು: ೦೯). ಮತ್ತೊಬ್ಬ ಅಂಕಣಗಾರ ಅಮೆರಿಕೆಯಲ್ಲಿನ ಸಬ್ಸಿಡಿ ರಾಜಕಾರಣದ ಬಗ್ಗೆ ಹೇಳುವ ಮಾತು ಕುತೂಹಲಕಾರಿಯಾಗಿದೆ. ಅಮೆರಿಕೆಯಲ್ಲಿ ಖಾಸಗಿ ವಿಮಾನ ಮಾಲೀಕರಿಗೆ, ಖಾಸಗಿ ಲಕ್ಷುರಿ ತೆಪ್ಪ ರೂಪದ (ಯಾಟ್) ಹಡಗುಗಳ ಮಾಲೀಕರಿಗೆ, ಬೃಹತ್ ಖಾಸಗಿ ಬ್ಯಾಂಕುಗಳಿಗೆ ಮುಂತಾದ ಕಾರ್ಪೋರೇಟ್ ಸಂಸ್ಥೆಗಳಿಗೆ ಬಿಲಿಯನ್‌ಗಟ್ಟಲೆ ಡಾಲರ್ ಸಬ್ಸಿಡಿಯನ್ನು ನೀಡಲಾಗುತ್ತಿದೆ. ಉದಾಹರಣೆಗೆ, ಅಮೆರಿಕೆಯ ಹತ್ತು ಬೃಹತ್ ಬ್ಯಾಂಕುಗಳಿಗೆ ಪ್ರತಿವರ್ಷ ನೀಡಲಾದ ಸಬ್ಸಿಡಿ ೮೩ ಬಿಲಿಯನ್ ಡಾಲರ್ ಎಂದು ಒಂದು ಅಧ್ಯಯನ ಹೇಳುತ್ತದೆ. ಅಮೆರಿಕೆಯ ರಾಜ್ಯಗಳು ಮತ್ತು ದೊಡ್ಡ ಪಟ್ಟಣಗಳು ಕಾರ್ಪೋರೇಟ್ ಸಂಸ್ಥೆಗಳಿಗೆ ನೀಡುತ್ತಿರುವ ಸಬ್ಸಿಡಿ ವಾರ್ಷಿಕ ೮೦ ಬಿಲಿಯನ್ ಡಾಲರ್ ಎಂದು ಅಂದಾಜು ಮಾಡಲಾಗಿದೆ. ಆದರೆ ಅಮೆರಿಕೆಯ ಸಂಸತ್ತಿನಲ್ಲಿರುವ ಕೋಟ್ಯಾಧಿಪತಿ ಸದಸ್ಯರುಗಳೆಲ್ಲ ಉಳ್ಳವರಿಗೆ ನೀಡುವ ಸಬ್ಸಿಡಿಯ ಬಗ್ಗೆ ಮಾತನಾಡದೆ ಉಳಿದವರಿಗೆ ಮತ್ತು ಬಡವರಿಗೆ ನೀಡುವ ಆಹಾರ ಮತ್ತು ಪೌಷ್ಟಿಕ ಆಹಾರದ ಸಬ್ಸಿಡಿಯನ್ನು ರದ್ದು ಪಡಿಸುವುದರ ಬಗ್ಗೆ ಉಗ್ರವಾದ ವಾದ ಮಾಡುತ್ತಿದ್ದಾರೆ. ಅಂಕಣಗಾರ ನಿಕೋಲಾಸ್ ಕ್ರಿಸ್ಟೋಫ್‌ನ ಪ್ರಕಾರ ಸಬ್ಸಿಡಿ ಕಾರ್ಯಕ್ರಮ ಅದೆಷ್ಟೇ ಅಪರಿಪೂರ್ಣವಾಗಿರಲಿ, ಬಡವರಿಗೆ ನೀಡುವ ಆಹಾರ ಸಬ್ಸಿಡಿ ಮತ್ತು ಪೌಷ್ಟಿಕತೆ ನೆರವು ಕಾರ್ಯಕ್ರಮಗಳು ಬಡವರ ಪಡಿಪಾಟಲನ್ನು ಮತ್ತು ಹಸಿವನ್ನು ನೀಗುವುದರಲ್ಲಿ ಯಶಸ್ವಿಯಾಗಿವೆ. ಶ್ರೀಮಂತರಿಗೆ ನೀಡುವ ಸಬ್ಸಿಡಿಯಿಂದ ಖಾಸಗಿ ವಿಮಾನಗಳ ಮತ್ತು ಖಾಸಗಿ ಲಕ್ಷುರಿ ಹಡಗುಗಳ ಸಂಖ್ಯೆ ಅಧಿಕವಾಗುತ್ತದೆ ವಿನಾ ಜನರ ಸಂಕಷ್ಟಗಳು ಕಡಿಮೆ ಯಾಗುವುದಿಲ್ಲ. ಅಮೆರಿಕೆಯ ಸಂಸತ್ ಸದಸ್ಯರಿಗೆ ಅಂಕಣಗಾರರ ಪ್ರಶ್ನೆಯೆಂದರೆ ಬಡವರ ಹಸಿವನ್ನು ನೀಗುವ ಕಾರ್ಯಕ್ರಮಗಳಿಗೆ ಸಬ್ಸಿಡಿ ನೀಡುವುದನ್ನು ಮುಂದು ವರಿಸಬೇಕೋ ಅಥವಾ ಖಾಸಗಿ ವಿಮಾನ ಮತ್ತು ಹಡಗುಗಳ ಸಂಖ್ಯೆಯನ್ನು ಹೆಚ್ಚಿಸುವ ಕಾರ್ಯಕ್ರಮಗಳಿಗೆ ಸಬ್ಸಿಡಿ ನೀಡುವುದನ್ನು ಮುಂದುವರಿಸಬೇಕೋ ಎಂಬುದಾಗಿದೆ (ವಿವರಗಳಿಗೆ ನೋಡಿ: ನಿಕೊಲಾಸ್ ಕ್ರಿಸ್ಟೋಫ್, 'ಎ ನೇಷನ್ ಆಫ್ ಟೇಕರ್ಸ್'. ವರ್ಲ್ಡ್ ವ್ಯೂ: ದಿ ಹಿಂದು. ಮಾರ್ಚ್ ೨೮, ೨೦೧೪). ಬಡವರ ಬಗ್ಗೆ ಶ್ರೀಮಂತರಿಗೆ ಎಲ್ಲ ದೇಶಗಳಲ್ಲೂ ಅಸೂಯೆ ಮತ್ತು ತಿರಸ್ಕಾರವಿದೆ.




### ೨. ಆಹಾರ ಭದ್ರತೆಯು ಹಕ್ಕಿನ ಸಂಗತಿಯೇ ವಿನಾ ಹಂಗಿನ ಸಂಗತಿಯಲ್ಲ

ಇಂದು ನಾವು ಹಕ್ಕಿನ ಪರಿಭಾಷೆಯ ಜಗತ್ತಿನಲ್ಲಿ ಬದುಕುತ್ತಿದ್ದೇವೆ. ನಾವೆಲ್ಲರೂ ಮನುಷ್ಯರು ಎಂಬ ಕಾರಣಕ್ಕೆ ನಮಗೆ ಕೆಲವು ಹಕ್ಕುಗಳು ಪ್ರಾಪ್ತವಾಗಿವೆ. ಬದುಕು ಅನ್ನುವುದು ಕೇವಲ ಊಟ, ಬಟ್ಟೆ, ಸೂರಿಗೆ ಮಾತ್ರ ಸಂಬಂಧಿಸಿದ ಸಂಗತಿಯಲ್ಲ. ಅವೆಲ್ಲ ಬಹಳ ಮುಖ್ಯ, ನಿಜ. ಆದರೆ ಅಭಿವೃದ್ಧಿ ಅನ್ನುವುದು ಘನತೆಯಿಂದ ಬದುಕು ಸಾಗಿಸುವುದಕ್ಕೆ ಸಂಬಂಧಿಸಿದ ಸಂಗತಿಯಾಗಿದೆ. ತಾರತಮ್ಯ, ಭೇದ-ಭಾವ, ಪವಿತ್ರ-ಅಪವಿತ್ರ ಭಾವನೆ, ಜಾತೀಯತೆ, ಜನಾಂಗೀಯತೆ ಮುಂತಾದುವು ಚಾರಿತ್ರಿಕವಾಗಿ ಹರಿದುಕೊಂಡು ಬರುತ್ತಿವೆ. ಅವುಗಳಿಂದ ಬಿಡುಗಡೆ ಪಡೆದು ಕೊಳ್ಳುವುದು ಸುಲಭದ ಕೆಲಸವಲ್ಲ. ಉದಾಹರಣೆಗೆ, ಅಮೆರಿಕೆಯು ಗುಲಾಮಿ ಪದ್ಧತಿಯನ್ನು ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಲ್ಲಿ ನಿಷೇಧಿಸಿತು. ಆದರೂ ಆ ಪದ್ಧತಿಯು ಜನರಲ್ಲಿ ಉಂಟುಮಾಡಿರುವ ಮಾನಸಿಕ ಮತ್ತು ಸಾಂಸ್ಕೃತಿಕ ಪರಿಣಾಮಗಳು ಅಲ್ಲಿ ಇಂದಿಗೂ ಜೀವಂತವಾಗಿರುವುದು ಕಂಡುಬರುತ್ತದೆ. ಗುಲಾಮಿ ಪದ್ಧತಿಯಲ್ಲಿ ನಲುಗಿದ ಜನರ ಚರಿತ್ರೆಯನ್ನು ಸಂಶೋಧಿಸುವುದರಲ್ಲಿ ಈಗಲೂ ಅಲ್ಲಿ ವಿದ್ವಾಂಸರು ನಿರತರಾಗಿದ್ದಾರೆ. ಅಮೆರಿಕೆಯ ಸೆನೆಟ್ ಜೂನ್ ೧೮, ೨೦೦೯ರಲ್ಲಿ ಮೂಲಭೂತವಾಗಿ ಅನ್ಯಾಯದ, ಕ್ರೌರ್ಯದಿಂದ ಕೂಡಿದ ಮತ್ತು ಅಮಾನವೀಯವಾದ ಗುಲಾಮಿ ಪದ್ಧತಿಯನ್ನು ಆಚರಿಸಿದ್ದುದರ ಬಗ್ಗೆ ಕ್ಷಮಾಪಣೆಯ ನಿರ್ಣಯವನ್ನು ಅನುಮೋದಿಸಿದೆ. ಅಲ್ಲಿ ೨೦೧೩ರ ಹಾಲಿವುಡ್ ಅಕಾಡೆಮಿ ಪ್ರಶಸ್ತಿಯನ್ನು ಪಡೆದ 'ಟ್ವೆಲ್ವ್ ಇಯರ್ಸ್ ಎ ಸ್ಲೇವ್' ಎಂಬ ಚಲನಚಿತ್ರ ಗುಲಾಮಿ ಪದ್ಧತಿಯನ್ನು ಕುರಿತದ್ದಾಗಿದೆ. ಸಾಲೊಮನ್ ನಾರ್‌ತಫ್ ಅನ್ನುವ ವ್ಯಕ್ತಿಯ ನಿಜ ಜೀವನದ ಕಥೆಯನ್ನು ಆಧರಿಸಿದ ಹಾಲಿವುಡ್‌ನ ಸಿನಿಮಾ ೨೦೧೩ರ ಅಕಾಡೆಮಿಯ 'ಅತ್ಯುತ್ತಮ ಚಿತ್ರ' ಪ್ರಶಸ್ತಿಗೆ ಪಾತ್ರವಾಗಿದೆ. ಇದು ಅಮೆರಿಕೆಯ ಹತ್ತೊಂಬತ್ತನೆಯ ಶತಮಾನದ ಅರವತ್ತರ ದಶಕದಲ್ಲಿ ನಡೆದ ಒಂದು ನಿಜವಾದ ಘಟನೆ. ಇದು ಸಾಲೊಮನ್ ನಾರ್‌ತಫ್ ೧೮೪೧ರಿಂದ ೧೮೫೩ರವರೆಗೆ ಅನುಭವಿಸಿದ ಗುಲಾಮಿತನದ ಹಿಂಸೆಯ ಕಥೆ. ಇಂದಿಗೂ ಅಮೆರಿಕೆಗೆ ಗುಲಾಮಿ ಪದ್ಧತಿಯ ಮಾನಸಿಕ ತೊಳಲಾಟದಿಂದ-ಹಿಂಸೆಯಿಂದ ಹೊರಬರುವುದು ಸಾಧ್ಯವಾಗಿಲ್ಲ. ಚಾರಿತ್ರಿಕ ತಾರತಮ್ಯಗಳು ಹೇಗೆ ಕೆಲಸ ಮಾಡುತ್ತವೆ ಅನ್ನುವುದು ನಮ್ಮ ಸಮಾಜದಲ್ಲಿನ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸಮುದಾಯಗಳ ಸ್ಥಿತಿಗತಿಯನ್ನು ಪರಿಶೀಲಿಸಿದರೆ ತಿಳಿಯುತ್ತದೆ. ಆಹಾರ ಭದ್ರತೆ ಅನ್ನುವುದು ನಮ್ಮ ಸಂದರ್ಭದಲ್ಲಿ ಅಂತಹ ಚಾರಿತ್ರಿಕ ತಾರತಮ್ಯಗಳನ್ನು ಹೋಗಲಾಡಿಸುವ ದಾರಿಯಲ್ಲಿನ ಒಂದು ಕ್ರಮವಾಗಿದೆ. ಅನ್ನಭಾಗ್ಯ ಅನ್ನುವುದು ದತ್ತಿ-ದಾನದ ಸಂಗತಿಯಲ್ಲ. ಅದು ಹಕ್ಕಿನ ಸಂಗತಿ. ಆದರೆ ದಾನ-ದತ್ತಿಗಳ ವಿಷಚಕ್ರದಲ್ಲಿ ಸಿಲುಕಿಕೊಂಡಿರುವ ನಮ್ಮ ಸಮಾಜದಲ್ಲಿ ಇಂದಿಗೂ ದಾನದ ಪರಿಭಾಷೆಯು ಬಳಕೆಯಲ್ಲಿರುವುದನ್ನು ಕಾಣಬಹುದು. ಉದಾಹರಣೆಗೆ, ೨೦೦೪ರಲ್ಲಿ ನಾವು ಆರಂಭಿಸಿದ ಮಧ್ಯಾಹ್ನದ ಬಿಸಿಯೂಟದ ಕಾರ್ಯಕ್ರಮವು 'ಅಕ್ಷರ ದಾಸೋಹ'ವಾಗಿತ್ತು. ಆದರೆ ಅದನ್ನು ಇಂದು 'ಅಕ್ಷಯ ಪಾತ್ರೆ'ಯನ್ನಾಗಿ ಮಾಡಲಾಗಿದೆ. ಅಕ್ಷಯ ಪಾತ್ರೆ ಅನ್ನುವುದು ದಾನದ ಸಂಗತಿ. ಅಕ್ಷರ ದಾಸೋಹ ಹಕ್ಕಿನ ಸಂಗತಿ. ಯಾಕೆ ಹೀಗೆ ಇದು ಬದಲಾಯಿತು? ಯಾರಿಗೂ ತಿಳಿದಿಲ್ಲ. ಕಣ್ಣಿಗೆ ಕಾಣದ ಶಕ್ತಿಗಳು ಇಂತಹ ಪ್ರತಿಗಾಮಿ ಸಂಗತಿಗಳಿಗೆ ಜೀವ ನೀಡುತ್ತಿವೆ. ಇವೆಲ್ಲವೂ ದಾನ ಪರಂಪರೆಯನ್ನು ಪುನರುಜ್ಜೀವನಗೊಳಿಸುವ ಕ್ರಮಗಳಾಗಿವೆ. ಇದರ ಬಗ್ಗೆ ನಾವು ಎಚ್ಚರದಿಂದಿರ ಬೇಕು. ಇಲ್ಲಿ ದಾನದ ಪರಿಭಾಷೆಯು ಕೆಲಸ ಮಾಡಿದೆ. ಆದರೆ ನಾವು ತಿಳಿದುಕೊಳ್ಳ ಬೇಕಾದ ಸಂಗತಿಯೆಂದರೆ ಬಡವರು ಪಡೆಯುತ್ತಿರುವ ಸಬ್ಸಿಡಿ ಬೆಲೆಯಲ್ಲಿನ ಪಡಿತರವು ಹಕ್ಕಿನ ಸಂಗತಿಯೇ ವಿನಾ ಹಂಗಿನ ಸಂಗತಿಯಲ್ಲ. ಇದಕ್ಕೆ ಮತ್ತಷ್ಟು ವಿವರವನ್ನು ಮತ್ತು ಸಮರ್ಥನೆಯನ್ನು ಮುಂದೆ ನೀಡಿದ್ದೇನೆ.

ಅನ್ನಭಾಗ್ಯ ಅನ್ನುವುದು ಸಂವಿಧಾನಾತ್ಮಕ ಹಕ್ಕು. ನಮ್ಮ ಸಂವಿಧಾನದ ಆರ್ಟಿಕಲ್ ೨೧ರಲ್ಲಿ ಜೀವಿಸುವ ಹಕ್ಕನ್ನು ಎಲ್ಲರಿಗೂ ನೀಡಲಾಗಿದೆ. ಆದರೆ ಆಹಾರದ ಹಕ್ಕನ್ನು ನೀಡದಿದ್ದರೆ ಜೀವಿಸುವ ಹಕ್ಕಿಗೆ ಯಾವುದೇ ಅರ್ಥವಿರು ವುದಿಲ್ಲ. ಜೀವಿಸುವ ಹಕ್ಕು ಜನರ 'ಜೀವನೋಪಾಯದ ಹಕ್ಕ'ನ್ನು ಒಳಗೊಂಡಿದೆ. ಈ ಜೀವನೋಪಾಯ ಹಕ್ಕು ಅನ್ನುವುದು ನಿಜವಾಗಿ ಆಹಾರದ ಹಕ್ಕಾಗಿದೆ.

### ದೇಶದ ಆಹಾರ ಭದ್ರತೆ ಮತ್ತು ಜನರ ಆಹಾರ ಭದ್ರತೆ

ಇಂದು ನಮ್ಮ ದೇಶವನ್ನು 'ಸೂಪರ್ ಪವರ್' ಆಗಿ ಮಾಡುವ ಬಗ್ಗೆ ಉನ್ಮಾದದಿಂದ ಮಾತನಾಡಲಾಗುತ್ತಿದೆ. ಇದು ಒಂದು ಹಂತದವರೆಗೆ ಸರಿ. ಆದರೆ ದೇಶ ಸಮೃದ್ಧವಾಗಿಬಿಟ್ಟರೆ ಜನರ ಬದುಕು ಸಮೃದ್ಧವಾಗುತ್ತದೆ ಎಂದು ಹೇಳಲು ಬರುವುದಿಲ್ಲ. ಇವೆರಡರ ನಡುವೆ ಬದಲಾವಣೆಯು ತನ್ನಷ್ಟಕ್ಕೆ ತಾನು ಸಂಭವಿಸುವ

ರೀತಿಯಲ್ಲಿಲ್ಲ, ಈ ಕಾರಣಕ್ಕೆ ಅಮರ್ತ್ಯ ಸೇನ್ ಮತ್ತೆ ಮತ್ತೆ ಒಂದು ಮಾತು ಹೇಳುತ್ತಿರುತ್ತಾರೆ :

ರಾಷ್ಟ್ರದ ಆಹಾರ ಭದ್ರತೆಯ ಜೊತೆಗೆ ಜನರ ಆಹಾರ ಭದ್ರತೆಯೂ ಮುಖ್ಯ. ಅದು ತನ್ನಷ್ಟಕ್ಕೆ ತಾನೇ ಸಂಭವಿಸುವ ಸಂಗತಿಯಲ್ಲ. ಅದಕ್ಕೆ ಪ್ರಜ್ಞಾಪೂರ್ವಕ ಪ್ರಯತ್ನ ನಡೆಸಬೇಕಾಗುತ್ತದೆ. ಅಂತಹ ಒಂದು ಪ್ರಯತ್ನವನ್ನು ಅನ್ನಭಾಗ್ಯದಲ್ಲಿ ನಾವು ಕಾಣಬಹುದು. ಮಹಿಳೆಯರು ಮತ್ತು ಮಕ್ಕಳು ಅಪೌಷ್ಟಿಕತೆಯಿಂದ ನರಳುವಾಗ, ಜನರು ಅನಕ್ಷರಸ್ಥರಾಗಿ ಉಳಿದಿದ್ದರೆ, ಅಸಮಾನತೆಯಿಂದ ಸಮುದಾಯಗಳು ಅಭಿವೃದ್ಧಿಯ ಪರಿಧಿಯಿಂದ ಹೊರಗಿದ್ದರೆ ದೇಶ ಸೂಪರ್‌ಪವರ್ ಆಗುವುದು ಸಾಧ್ಯವಿಲ್ಲ. ಅಪೌಷ್ಟಿಕತೆ ಅನ್ನುವುದು ಎರಡು ರೀತಿಯ ಪರಿಣಾಮ ಬೀರುತ್ತಿರುತ್ತದೆ. ಮೊದಲನೆಯದಾಗಿ, ಅದು ಪ್ರಸ್ತುತ ಜನಾಂಗದ ಧಾರಣಾ ಸಾಮರ್ಥ್ಯವನ್ನು ಕುಂಠಿತಗೊಳಿಸುತ್ತದೆ. ಎರಡನೆಯದಾಗಿ, ಅದು ಮುಂದಿನ ಜನಾಂಗದ ಧಾರಣಾ ಸಾಮರ್ಥ್ಯದ ಮೇಲೂ ದುಷ್ಪರಿಣಾಮ ಬೀರುತ್ತದೆ. ಆದ್ದರಿಂದ ನಾವು ಆಹಾರ ಭದ್ರತೆಯನ್ನು ಸಮರ್ಥವಾಗಿ ನಿರ್ವಹಿಸುವ ಅಗತ್ಯವಿದೆ. ಅದು ಸದ್ಯದ ತಲೆಮಾರಿನ ಮತ್ತು ಮುಂದಿನ ತಲೆಮಾರಿನ ಧಾರಣಾ ಸಾಮರ್ಥ್ಯವನ್ನು ನಿರ್ಧರಿಸುವ ಸಂಗತಿಯಾಗಿದೆ. ಆದ್ದರಿಂದ ಅದು ಅಭಿವೃದ್ಧಿಗೆ ಸಂಬಂಧಿಸಿದ ಸಂಗತಿ.

**೩. ದುಡಿಯುವ ವರ್ಗ ಪಡೆಯುವ ಕೂಲಿ ಮತ್ತು ಸಲ್ಲಿಸುವ ಶ್ರಮ**

ಅರ್ಥಶಾಸ್ತ್ರದ ನಿಯಮದ ಪ್ರಕಾರ ಕೂಲಿಕಾರರ ಕೂಲಿಯು ಅವರು ಉತ್ಪಾದನೆಗೆ ನೀಡುತ್ತಿರುವ ಕಾಣಿಕೆಯನ್ನು ಅವಲಂಬಿಸಿರುತ್ತದೆ. ಆದರೆ ನಮ್ಮಲ್ಲಿ ಸಾಮಾನ್ಯವಾಗಿ ದುಡಿಮೆಗಾರರು ಸಲ್ಲಿಸುವ ಪರಿಶ್ರಮ ಅಧಿಕವಾಗಿರುತ್ತದೆ. ಆದರೆ ಅವರು ಅದಕ್ಕೆ ಪಡೆಯುವ ಪ್ರತಿಫಲ, ಎಂದರೆ ಕೂಲಿ ಅದಕ್ಕಿಂತ ಸಾಪೇಕ್ಷವಾಗಿ ಕಡಿಮೆಯಿರುತ್ತದೆ. ಪರಿಶ್ರಮ ಮತ್ತು ಕೂಲಿಗಳ ನಡುವೆ ಅಂತರವಿದೆ. ಇದನ್ನು ಅನೇಕ ಅಧ್ಯಯನಗಳು ದೃಢಪಡಿಸಿವೆ. ಆದ್ದರಿಂದ ಅನ್ನಭಾಗ್ಯ ಕಾರ್ಯಕ್ರಮ ವೇನಿದೆ ಅದನ್ನು ವಾಸ್ತವವಾಗಿ ಕೂಲಿ ಮತ್ತು ಶ್ರಮಗಳ ನಡುವಿನ ಅಂತರವನ್ನು–ಕೊರತೆಯನ್ನು ತುಂಬುವ ಕಾರ್ಯಕ್ರಮವನ್ನಾಗಿ ಪರಿಭಾವಿಸಿಕೊಳ್ಳಬಹುದು. ಆದ್ದರಿಂದ ಅನ್ನಭಾಗ್ಯವು ದತ್ತಿ–ದಾನದ ಕಾರ್ಯಕ್ರಮ ಅಲ್ಲ. ಅದರ ಹಿಂದೆ ಆರ್ಥಿಕ ಸಿದ್ಧಾಂತವಿದೆ. ಬಡವರು ಪುಕ್ಕಟೆಯಾಗಿ ಅನ್ನಭಾಗ್ಯವನ್ನು ಪಡೆಯುತ್ತಿಲ್ಲ.

ಅನ್ನಭಾಗ್ಯವನ್ನು ಪಡೆಯುವ ಕುಟುಂಬಗಳು ಇಂದು ಅಕ್ಕಿಯ ಮೇಲೆ ವ್ಯಯಿಸಬೇಕಾದ ಮೊತ್ತವನ್ನು ಉಳಿಸಿ ಅದನ್ನು ಕುಟುಂಬದ ಇತರೆ ಅವಶ್ಯಕತೆಗಳ (ಮಕ್ಕಳ ಶಿಕ್ಷಣ, ವೈದ್ಯಕೀಯ ಸೇವೆ, ಪೌಷ್ಟಿಕ ಆಹಾರ ಮುಂತಾದವು) ಮೇಲೆ ವ್ಯಯಿಸುತ್ತವೆ. ಇದರಿಂದ ಅವರ ಜೀವನಮಟ್ಟವು ಉತ್ತಮವಾಗುತ್ತದೆ. ಈ ಕಾರಣದಿಂದ ಸಮಾಜದಲ್ಲಿ ಆರ್ಥಿಕ ಚಟುವಟಿಕೆಗಳು ವಿಸ್ತೃತಗೊಳ್ಳುತ್ತವೆ. ಅವರ ಕಾರ್ಯಕ್ಷಮತೆಯು ಉನ್ನತ ಮಟ್ಟಕ್ಕೇರುತ್ತದೆ. ಅನ್ನಭಾಗ್ಯ ಕಾರ್ಯಕ್ರಮವು ಆರ್ಥಿಕತೆಯಲ್ಲಿ ಸಮಗ್ರ ಬೇಡಿಕೆಯನ್ನು ಹೆಚ್ಚಿಸಬಲ್ಲದು. ಅನ್ನಭಾಗ್ಯ ಕಾರ್ಯಕ್ರಮವನ್ನು 'ಸ್ಮಾರ್ಟ್ ಎಕನಾಮಿಕ್ಸ್' ಎಂದು ಪರಿಗಣಿಸಬಹುದು. ಅದು ದುಂದುಗಾರಿಕೆಯ ಕಾರ್ಯಕ್ರಮವಲ್ಲ. ಉತ್ಪಾದನಾ ಕಾರ್ಯದಲ್ಲಿ ಬಂಡವಾಳಗಾರರು ಕೂಲಿಕಾರರಿಗಿಂತ ಅಧಿಕ ಪ್ರತಿಫಲ ಪಡೆಯುತ್ತಾರೆ. ಇದು ಶೋಷಣೆ. ಅನ್ನಭಾಗ್ಯವು ಇಂತಹ ಶೋಷಣೆಯಿಂದ ದುಡಿಮೆಗಾರರನ್ನು ಸಂರಕ್ಷಿಸುವ ಕಾರ್ಯಕ್ರಮವಾಗಿದೆ. ಆದರೆ ಅಲ್ಲಿ ಉತ್ಪಾದನೆಯಲ್ಲಿ ಕೂಲಿಕಾರರ ಕಾಣಿಕೆಯು ಅಧಿಕವಾಗಿರುತ್ತದೆ. ಆದರೆ ಅವರು ತಮ್ಮ ಶ್ರಮಕ್ಕೆ ಪ್ರತಿಫಲವಾಗಿ ಪಡೆಯುವ ಸಂಭಾವನೆಯು ಕಡಿಮೆಯಿರುತ್ತದೆ. ಇದಕ್ಕೆ ಅನೇಕ ಆರ್ಥಿಕ, ಸಾಮಾಜಿಕ, ರಾಜಕೀಯ ಕಾರಣಗಳಿರುತ್ತವೆ. ಮೊದಲನೆಯದಾಗಿ, ದುಡಿಮೆಗಾರರ ಪೂರೈಕೆಯು ಅವರ ಬೇಡಿಕೆಗಿಂತ ಅಧಿಕವಿರಬಹುದು. ಇದರಿಂದಾಗಿ ಅವರ ಬಾರ್ಗೈನಿಂಗ್ ಪವರ್ ಕಡಿಮೆಯಿರಬಹುದು. ಎರಡನೆಯದಾಗಿ, ದುಡಿಮೆಗಾರರು ಅನೇಕ ಬಗೆಯ ಸಂಕೋಲೆಗಳಲ್ಲಿ ಬಂಧಿಗಳಾಗಿರಬಹುದು. ಮೂರನೆಯದಾಗಿ, ಚಾರಿತ್ರಿಕ ತಾರತಮ್ಯದಿಂದ ತಮ್ಮ ಹಕ್ಕುಗಳನ್ನು ಒತ್ತಾಯಿಸಲು ಅವರು ಅಸಮರ್ಥರಿರಬಹುದು. ಅನಕ್ಷರತೆಯು ಮತ್ತೊಂದು ಕಾರಣವಾಗಿರಬಹುದು. ಅವರಲ್ಲಿ ಸಂಘಟನೆಯ ಕೊರತೆ ಇರಬಹುದು. ಈ ಎಲ್ಲ ಸಂಕೀರ್ಣತೆಗಳ ಹಿನ್ನೆಲೆಯಲ್ಲಿ ಆಹಾರ ಭದ್ರತೆಯ ಕಾರ್ಯಕ್ರಮವನ್ನು ಪರಿಭಾವಿಸಿಕೊಳ್ಳುವ ಅಗತ್ಯವಿದೆ.

**ದುಡಿಮೆಗಾರರು ಸೋಮಾರಿಗಳಾಗುತ್ತಾರೆ !**

ಈ ಬಗೆಯ ನಿಲುವು ಅತ್ಯಂತ ಬೇಜವಾಬುದಾರಿ ಮತ್ತು ಆಧಾರರಹಿತ ನಿಲುವಾಗಿದೆ. ನಮ್ಮ ಇಂದಿನ ಸಾಮಾಜಿಕ ಸಂದರ್ಭದಲ್ಲಿ ದುಡಿಮೆಗಾರರು ಸೋಮಾರಿಗಳಾಗಿದ್ದರೆ ಈ ರಾಜ್ಯದಲ್ಲಿ ವಾರ್ಷಿಕ ೨೪೦ ಲಕ್ಷ ಟನ್ ಆಹಾರವನ್ನು ಯಾರು ಉತ್ಪಾದನೆ ಮಾಡಿದ್ದು ? ನಮ್ಮ ಹೊಲ–ಗದ್ದೆಗಳಲ್ಲಿ ದುಡಿಯುವವರಾರು ? ನಮ್ಮ ನಮ್ಮ ಮನೆಗಳಿಗೆ ಇಂದು ಇಂಟರ್‌ನೆಟ್ ಸೌಲಭ್ಯ ದೊರೆಯುತ್ತಿದ್ದರೆ ಅದಕ್ಕೆ ಸಂಬಂಧಿಸಿದ ಆಪ್ಟಿಕಲ್ ಫೈಬರ್ ಕೇಬಲ್‌ಗಳನ್ನು ಹಾಕಿದವರಾರು ? ವಿದ್ಯುತ್ ಕಂಬಗಳನ್ನು ನೆಟ್ಟವರಾರು ? ನಮ್ಮ ಮನೆಗಳನ್ನು ಕಟ್ಟಿದವರಾರು ? ನಮ್ಮ ರಸ್ತೆಗಳನ್ನು, ಅಣೆಕಟ್ಟೆಗಳನ್ನು, ಸೇತುವೆಗಳನ್ನು ನಿರ್ಮಿಸಿದವರಾರು ? ನಮ್ಮ ನಗರಗಳನ್ನು ಇಂದು ಸ್ವಚ್ಛವಾಗಿಡುವವರು ಯಾರು ? ನಮ್ಮ ರಾಜ್ಯದಲ್ಲಿ ಸುಮಾರು ೭೨ ಲಕ್ಷ ಭೂರಹಿತ ದಿನಗೂಲಿ ದುಡಿಮೆಗಾರರಿದ್ದಾರೆ (ಜನಗಣತಿ, ೨೦೧೧). ಇವರೆಲ್ಲರೂ ಆಹಾರ ಅಭದ್ರತೆಯನ್ನು ಎದುರಿಸುತ್ತಿದ್ದಾರೆ. ಅನ್ನಭಾಗ್ಯವು ಇವರಿಗೆ ನಿಜವಾಗಲೂ ಉಪಯುಕ್ತವಾದ ಸಂಗತಿಯಾಗಿದೆ. ಭೂಮಾಲೀಕರು ಸಾಮಾನ್ಯವಾಗಿ ಇಂದು 'ಕೂಲಿಕಾರರೇ ದೊರೆಯುತ್ತಿಲ್ಲ' ಎಂದು ಹಲುಬುತ್ತಿರುತ್ತಾರೆ. ಯಾಕೆ ಹೀಗಾಗಿದೆ ? ಇದು ಸೋಮಾರಿತನದ ಸೂಚನೆಯೇ ? ಜನರು ಯಾಕೆ ಕೂಲಿಗೆ ದೊರೆಯುತ್ತಿಲ್ಲ ?

**ಕೂಲಿಕಾರರ ಬದುಕು ಉತ್ತಮವಾಗುವುದು ಬೇಡವೇ ?**

ಕೂಲಿಕಾರರ ಬದುಕು ಕೂಲಿಕಾರ ಸ್ಥಿತಿಯಿಂದ ಮೇಲ್ಮಟ್ಟಕ್ಕೆ ಚಲಿಸಲೇಬಾರದು ಎಂಬುದು ನಮ್ಮ ನಿಲುವೆ ? ಅವರು ಶಾಶ್ವತವಾಗಿ ಕೂಲಿಕಾರರಾಗಿರಬೇಕೆ ? ಹಾಗಾದರೆ ಅಭಿವೃದ್ಧಿ ಎಂದರೇನು ?

ಬಡತನವನ್ನು, ಹಸಿವನ್ನು, ದುಸ್ಥಿತಿಯನ್ನು ನಿವಾರಿಸುವುದೇ ಅಭಿವೃದ್ಧಿ. ವರಮಾನದ ಏರಿಕೆ ಅಥವಾ ಜಿಡಿಪಿಯಲ್ಲಿನ ವರ್ಧನೆಯೇ ಅಭಿವೃದ್ಧಿಯಲ್ಲ. ಘನತೆಯಿಂದ, ಗೌರವದಿಂದ ಬದುಕುವುದು ಜನರಿಗೆ ಸಾಧ್ಯವಾಗಬೇಕು. ಅದು ಅಭಿವೃದ್ಧಿ. ಅನ್ನಭಾಗ್ಯವು ಅಂತಹ ಘನತೆಯಿಂದ ಬದುಕುವುದನ್ನು ಸಾಧ್ಯ ಮಾಡಿಕೊಡುವ ಒಂದು ಕ್ರಮವಾಗಿದೆ. ಅಭಿವೃದ್ಧಿಯನ್ನು ಅನುಭವಿಸುವುದು ದುಡಿಮೆಗಾರರಿಗೆ ಸಾಧ್ಯವಾಗಬೇಕು. ಅನ್ನಭಾಗ್ಯವು ಇದನ್ನು ಸ್ವಲ್ಪಮಟ್ಟಿಗೆ ಸಾಧ್ಯ ಮಾಡಿಕೊಟ್ಟಿದೆ.

***(ಮುಂದುವರಿಯುವುದು)***

**ಟಿ. ಆರ್. ಚಂದ್ರಶೇಖರ**
ವಿಶ್ರಾಂತ ಪ್ರಾಧ್ಯಾಪಕ, 'ವಚನ', ಸೊಸೈಟಿ ರಸ್ತೆ
ಅಮರಾವತಿ, ಹೊಸಪೇಟೆ – ೫೮೩ ೨೦೧




'ಹೊಸತು' ಚಂದಾ ನೋಂದಣಿಗೆ ಮತ್ತು
ಸದಭಿರುಚಿಯ ಪುಸ್ತಕಗಳಿಗೆ ಕೆಳಕಂಡ
ನವಕರ್ನಾಟಕ ಪುಸ್ತಕ ಪ್ರದರ್ಶನಗಳಿಗೆ ಭೇಟಿ ನೀಡಿ

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಬೀರಲಿಂಗೇಶ್ವರ ದೇವಸ್ಥಾನದ ಆವರಣ, ಪಿ.ಬಿ. ರಸ್ತೆ, ದಾವಣಗೆರೆ - ೫೭೭ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಯೂನಿಯನ್ ಕ್ಲಬ್ ಆವರಣ, ಪುರಸಭೆ ಕಚೇರಿ ಬಳಿ, ಎಂ. ಜಿ. ರಸ್ತೆ, ಬಿಜಾಪುರ - ೫೮೬ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಮಹಾತ್ಮ ಗಾಂಧಿ ಸ್ಟೇಡಿಯಂ ಆವರಣ, ಅಂಬೇಡ್ಕರ್ ವೃತ್ತ, ರಾಯಚೂರು - ೫೮೪ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಜೆ. ಪಿ. ಎನ್. ರಸ್ತೆ, ಗೋಪಿ ವೃತ್ತ, ಶಿವಮೊಗ್ಗ - ೫೭೭ ೨೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಾರ್ಡೋಜ್ ಲೈಬ್ರರಿ ಆವರಣ, ಗಾಂಧಿ ವೃತ್ತ, ಸ್ಟೇಶನ್ ರಸ್ತೆ, ಗದಗ - ೫೮೨೧೦೧



ಡಾ॥ ಮಹಾಬಲೇಶ್ವರ ರಾವ್



# ಕಲ್ಲು ಮುಳ್ಳುಗಳ ಹಾದಿಯಲ್ಲಿ ಶಿಕ್ಷಣ ಕಾಯ್ದೆ



ಶಿಕ್ಷಣ ಹಕ್ಕು ಕಾಯ್ದೆ ೨೦೦೯; ಏಪ್ರಿಲ್ ೨೦೧೦ರಿಂದ ದೇಶಾದ್ಯಂತ ಜಾರಿಗೆ ಬಂದಿದೆ. ಗೋಪಾಲಕೃಷ್ಣ ಗೋಖಲೆಯವರು ನೂರು ವರ್ಷಗಳ ಹಿಂದೆ ಕಂಡ ಕನಸು ನನಸಾಗಿದೆ. ಅಂದು ಅವರು ಮಾಡಿದ ಹೋರಾಟ ಶತಮಾನದ ಬಳಿಕ ಈ ನೆಲದಲ್ಲಿ ಸಾರ್ಥಕ್ಯ ಕಂಡಿದೆ. ಚರಿತ್ರಾರ್ಹವಾದ ಕಾಯ್ದೆ ಜಾರಿಗೆ ಬಂದದ್ದಕ್ಕೆ ಸಂಭ್ರಮಿಸುವ ಬದಲು ಪ್ರಜ್ಞಾವಂತ ನಾಗರಿಕರು ಇಂದು ಹೋರಾಟಗಳನ್ನು ಮಾಡಬೇಕಾದ, ಸರಕಾರಗಳ ಮೇಲೆ ಹಕ್ಕೊತ್ತಾಯ ಮಾಡಬೇಕಾದ ಮತ್ತು ನ್ಯಾಯಾಲಯಗಳಲ್ಲಿ ಕಾನೂನಿನ ಸಮರ ಹೂಡಬೇಕಾದ ಸ್ಥಿತಿ ಒದಗಿದೆ. ಶಿಕ್ಷಣ ಇಲಾಖೆ ಈ ಕಾಯ್ದೆಯ ಜಾರಿಗೆ ಸಮರೋಪಾದಿಯಲ್ಲಿ ಇನ್ನೂ ಸಜ್ಜಾಗಿಲ್ಲ; ಅದಕ್ಕಿಂತಲೂ ಮಿಗಿಲಾದ ದುರಂತದ ಸಂಗತಿ ಎಂದರೆ ಕಾನೂನು ಪಾಲನೆ ಮಾಡಬೇಕಾದ ಖಾಸಗಿ ಅನುದಾನರಹಿತ ಶಿಕ್ಷಣ ಸಂಸ್ಥೆಗಳು ಶೇ.೨೫ರ ಮೀಸಲಾತಿ ಪ್ರಕಾರ ಬಡ, ಹಿಂದುಳಿದ ಹಾಗೂ ದುರ್ಬಲವರ್ಗದ ಮಕ್ಕಳಿಗೆ ಪ್ರವೇಶ ನಿರಾಕರಿಸಲು ಯಾವೆಲ್ಲ ಕುಟಿಲೋಪಾಯಗಳನ್ನು ಮಾಡಬೇಕೋ ಅದೆಲ್ಲವನ್ನೂ ನಿರ್ಲಜ್ಜವಾಗಿ ಮಾಡುತ್ತಲಿವೆ. 'ಗಂಡ ಹೆಂಡಿರ ಜಗಳದಲ್ಲಿ ಕೂಸು ಬಡವಾಯಿತು' ಎಂಬಂತೆ ಸರಕಾರ ಹಾಗೂ ಖಾಸಗಿ ಶಿಕ್ಷಣ ಸಂಸ್ಥೆಗಳ ನಡುವಿನ ಕಚ್ಚಾಟದಲ್ಲಿ ಸಾವಿರಾರು ಮುಗ್ಧ, ಅಮಾಯಕ ಮಕ್ಕಳು ತ್ರಿಶಂಕು ಸ್ಥಿತಿಯಲ್ಲಿದ್ದಾರೆ.

ಶಿಕ್ಷಣ ಹಕ್ಕು ಕಾಯ್ದೆ ೨೦೦೯ ಜಾರಿಗೆ ಬಂದು ಈಗಾಗಲೆ ನಾಲ್ಕು ವರ್ಷಗಳು ಕಳೆದಿವೆ. ಆದರೆ ಈ ನಾಲ್ಕು ವರ್ಷಗಳ ಅವಧಿಯಲ್ಲಿ ಆಗಿರುವ ಪ್ರಗತಿ ತುಂಬ ನಿಧಾನಗತಿಯದ್ದಾಗಿದೆ. ಈ ದೇಶದಲ್ಲಿ ಇನ್ನೂ ಕೂಡ ೮ ಮಿಲಿಯ ಮಕ್ಕಳು ಶಾಲೆಗಳಿಂದ ಹೊರಗಿದ್ದಾರೆ, ಶಾಲೆಗಳಿಂದ ಹೊರಗುಳಿದ ಅಥವಾ ಶಾಲೆಗಳನ್ನು ಅರ್ಧದಲ್ಲೆ ತ್ಯಜಿಸಿದ ಈ ಮಕ್ಕಳು ನಿಜಕ್ಕೂ ಸಮಾಜದ ಅಂಚಿನಲ್ಲಿರುವ ಹಾಗೂ ಸೌಲಭ್ಯವಂಚಿತ ಗುಂಪುಗಳಿಗೆ ಸೇರಿದವರು. ಶಾಲೆಗಳಿಂದ ಹೊರಗೆ ಉಳಿದಿರುವ ಮಕ್ಕಳೆಲ್ಲರನ್ನೂ ಶಾಲೆಗಳತ್ತ ಆಕರ್ಷಿಸಿ ವಿದ್ಯಾಭ್ಯಾಸ ಮಾಡಿಸಬೇಕಾದರೆ

## ಶಾಲೆಗಳಿಂದ ಹೊರಗುಳಿದ ಮಕ್ಕಳು

ಒಂದು ಲೆಕ್ಕಾಚಾರದ ಪ್ರಕಾರ ದೇಶದಲ್ಲೀಗ ೧೮.೭೮ ಕೋಟಿ ಮಕ್ಕಳು ಶಾಲೆಗಳಲ್ಲಿದ್ದಾರೆ. ಆದರೆ ಬಾಲಕಾರ್ಮಿಕರಾಗಿ, ಮನೆಕೆಲಸದವರಾಗಿ ದುಡಿಯುತ್ತಿರುವ ಲಕ್ಷಾಂತರ ಮಕ್ಕಳು ಶಾಲೆಗಳಿಂದ ಹೊರಗಿದ್ದಾರೆ. ಶಾಲೆಗಳಲ್ಲಿ ನೋಂದಣಿಯಾದ ಒಟ್ಟು ಮಕ್ಕಳಲ್ಲಿ ಶೇಕಡ ೪೬ರಷ್ಟು ಮಕ್ಕಳು ಅರ್ಧದಲ್ಲೆ ಶಾಲೆಗಳನ್ನು ಬಿಟ್ಟುಬಿಡುತ್ತಿದ್ದಾರೆ. ಇವರಲ್ಲಿ ಹೆಚ್ಚಿನವರು ಹುಡುಗಿಯರು ಎಂಬುದು ಕಳವಳಕಾರಿ ಸಂಗತಿ. ೬-೧೪ ಪ್ರಾಯದ ಒಟ್ಟು ೨೬ ಕೋಟಿ ಮಕ್ಕಳಲ್ಲಿ ಸುಮಾರು ೧೮ ಕೋಟಿ ಮಕ್ಕಳು ಶಾಲೆಗಳಲ್ಲಿದ್ದರೆ ಉಳಿದ ೮ ಕೋಟಿ ಮಕ್ಕಳು ಶಿಕ್ಷಣಾವಕಾಶಗಳಿಂದ ವಂಚಿತರಾಗಿದ್ದಾರೆ. ಆದರೆ ಕೇಂದ್ರ ಮಾನವಸಂಪದಭಿವೃದ್ಧಿ ಸಚಿವಾಲಯದ ಪ್ರಕಾರ ಶಾಲೆಗಳಿಂದ ಹೊರಗುಳಿದ ಮಕ್ಕಳ ಸಂಖ್ಯೆ ಕೇವಲ ೮೦ ಲಕ್ಷ ಮಾತ್ರ ! ಅಂಕಿ ಸಂಖ್ಯೆಗಳ ನಿಖರತೆ ಏನೇ ಇರಲಿ, ೮೦ ಲಕ್ಷ ಎಂಬುದು ನಿಜಕ್ಕೂ ಗಾಬರಿ ಹುಟ್ಟಿಸುವ ವಿಚಾರ.

ಕರ್ನಾಟಕ ರಾಜ್ಯದ ಶಿಕ್ಷಣ ಇಲಾಖೆ ಪ್ರಕಾರ ರಾಜ್ಯದಲ್ಲಿ ಕೇವಲ ೫೧,೯೯೪ ಮಕ್ಕಳು ಶಾಲೆಗಳಿಂದ ಹೊರಗೆ ಉಳಿದಿದ್ದಾರೆ ! ಈ ಬಗ್ಗೆ ನ್ಯಾಯಾಲಯದಲ್ಲಿ ಸಾರ್ವಜನಿಕ ಹಿತಾಸಕ್ತಿಯ ಪ್ರಕರಣ ದಾಖಲಾಗಿದ್ದು ಶ್ರೀಮತಿ ಕಾತ್ಯಾಯಿನಿ ಅವರ ವಿಶ್ಲೇಷಣೆಯ ಪ್ರಕಾರ ೬ ಲಕ್ಷ ೨೮,೦೪೭ ಮಕ್ಕಳು ಶಾಲೆಗಳಿಂದ ಹೊರಗೆ ಉಳಿದಿದ್ದಾರೆ ! ಮೊದಲಿಗೆ ಈ ಮಕ್ಕಳನ್ನು ಶಾಲೆಗೆ ಕರೆತಂದು ಕಲಿಯುವಂತೆ ಮಾಡಿ ಎಂದು ಉಚ್ಚನ್ಯಾಯಾಲಯ ಸರಕಾರಕ್ಕೆ ತಾಕೀತು ಮಾಡಿದೆ. ದುರಂತದ ಸಂಗತಿ ಎಂದರೆ ಇಂಥ ಮಕ್ಕಳ ವಿದ್ಯಾಭ್ಯಾಸದ ಬಗ್ಗೆ ನಮ್ಮ ಸರಕಾರಗಳ ಬಳಿ ದೀರ್ಘಕಾಲೀನ ಪರಿಣಾಮಬೀರುವ ಮಹತ್ವದ ಕಾರ್ಯಕ್ರಮಗಳಿಲ್ಲ. ಬಾಲಕಾರ್ಮಿಕ ನಿಷೇಧ ಕಾಯ್ದೆಯ ಪರಿಣಾಮಕಾರಿ ಅನುಷ್ಠಾನ, ಶಾಲೆಯಿಂದ ಹೊರಗುಳಿದ ಮಕ್ಕಳ ಕರಾರುವಾಕ್ಕಾದ ಗಣತಿ, ಬಾಲಕಾರ್ಮಿಕರಿಗೆ ಕೆಲಸದ ಸ್ಥಳದಲ್ಲೇ ವಿದ್ಯಾಭ್ಯಾಸದ ಸೌಲಭ್ಯಗಳು, ನೆರೆಹೊರೆಯ ಶಾಲೆಗಳ ಸ್ಥಾಪನೆ, ಇಂಥ ಮಕ್ಕಳ ಪಾಲಕರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಸ್ಥಿತಿಗತಿಗಳ ಸುಧಾರಣೆ ಮುಂತಾದ ಬಹುನೆಲೆಯ, ಬಹೂಪಯೋಗಿ ಕಾರ್ಯಕ್ರಮಗಳನ್ನು ಸಮರೋಪಾದಿಯಲ್ಲಿ ಹಮ್ಮಿಕೊಂಡರೆ ಮಾತ್ರವೇ ಶಾಲೆಗಳಿಂದ ಹೊರಗುಳಿದ ಮಕ್ಕಳ ಪಾಲಿಗೆ ಶಿಕ್ಷಣ ಹಕ್ಕು ನಿಜಕ್ಕೂ ವರದಾನವಾದೀತು.

ಕೇಂದ್ರ ಮತ್ತು ರಾಜ್ಯ ಸರಕಾರಗಳು ಭಾರಿ ದೊಡ್ಡ ಪ್ರಮಾಣದಲ್ಲಿ ಪ್ರಯತ್ನಶೀಲವಾಗದೆ ವಿಧಿಯಿಲ್ಲ.

ಆದರೆ ಈ ನಾಲ್ಕು ವರ್ಷಗಳಲ್ಲಿ ಉಚಿತ ಹಾಗೂ ಕಡ್ಡಾಯ ಪ್ರಾಥಮಿಕ ಶಿಕ್ಷಣದ ಕಾರ್ಯಕ್ರಮಕ್ಕೆ ಅಧಿಕ ಸಂಪನ್ಮೂಲಗಳನ್ನು ಒದಗಿಸಲಾಗಿದೆ. ಶಿಕ್ಷಕರ ನೇಮಕಾತಿ ಆಗಿದೆ; ಭೌತಿಕ ಸೌಲಭ್ಯಗಳನ್ನು ಶಾಲೆಗಳಿಗೆ ಒದಗಿಸಲಾಗಿದೆ. ಆದರೆ ಇದೆಲ್ಲ ದೇಶಾದ್ಯಂತ ಸಮಪ್ರಮಾಣದ ಬದ್ಧತೆಯಿಂದ ಆಗಿಲ್ಲ. ಶಿಕ್ಷಕರ ಲಭ್ಯತೆ ಹಾಗೂ ಭೌತಿಕ ಸಂಪನ್ಮೂಲಗಳ ಒದಗಾವಣೆ ದೃಷ್ಟಿಯಿಂದ ಕೇವಲ ಶೇಕಡ ೧೧ರಷ್ಟು ಶಾಲೆಗಳು ಮಾತ್ರವೇ ಕಾಯ್ದೆಯನ್ನು ಕಟ್ಟುನಿಟ್ಟಿನಿಂದ ಜಾರಿಗೆ ತಂದಿವೆ. ಉಳಿದಂತೆ ಭಾರಿ ಪ್ರಮಾಣದಲ್ಲಿ ಸುಧಾರಣೆಗಳಾಗಬೇಕಾದ ಅಗತ್ಯವಿದೆ.

ಕರ್ನಾಟಕ ರಾಜ್ಯದಲ್ಲಿ ಕಳೆದ ನಾಲ್ಕು ವರ್ಷಗಳಲ್ಲಿ ಬೆಂಗಳೂರು, ಮೈಸೂರು, ಮಂಗಳೂರು ಮೊದಲಾದ ನಗರಗಳಲ್ಲಿನ ಖಾಸಗಿ ಅನುದಾನರಹಿತ ಶಾಲೆಗಳು ಶಿಕ್ಷಣ ಕಾಯ್ದೆಯನ್ನು ಸ್ವಯಮಿಚ್ಛೆಯಿಂದ ಅನುಷ್ಠಾನಕ್ಕೆ ತರಲು ಬಯಸದೆ ಸರಕಾರಕ್ಕೆ ಹಾಗೂ ಪಾಲಕರಿಗೆ ಹಲವಾರು ಸಮಸ್ಯೆಗಳನ್ನು ಸೃಷ್ಟಿ ಮಾಡಿವೆ. ರಾಜ್ಯ ಉಚ್ಚನ್ಯಾಯಾಲಯದಲ್ಲಿ ಕಾಲಕಾಲಕ್ಕೆ ಆರ್‌ಟಿಇ ಖಟ್ಲೆಗಳು ದಾಖಲಾಗಿ ಮಹತ್ವದ ತೀರ್ಪುಗಳೂ ಪ್ರಕಟವಾಗಿವೆ. "ಶಿಕ್ಷಣ ಕಾಯ್ದೆಗೆ ನ್ಯಾಯಾಲಯ ತಡೆಯಾಜ್ಞೆ ನೀಡಿದೆ; ನಮ್ಮದು ಅಲ್ಪಸಂಖ್ಯಾತ ಶಾಲೆ. ನಮ್ಮದು ಸಿಬಿಎಸ್‌ಸಿ ಶಾಲೆ" ಎಂದೆಲ್ಲ ಸಬೂಬು ಹೇಳಿ ಪಾಲಕರಿಗೆ ಪ್ರವೇಶಾತಿ ಅರ್ಜಿ ಕೊಡದೆ ಹಿಂದಕ್ಕೆ ತರುಬಿದ ಶಾಲೆಗಳಿವೆ. ಸರಕಾರದ ನಿಯಮ ಪ್ರಕಾರ ಪ್ರವೇಶಕ್ಕೆ ಅರ್ಜಿ ಒದಗಿಸಿ ಕೊನೆಯ ಗಳಿಗೆಯಲ್ಲಿ "ಅಲ್ಪಸಂಖ್ಯಾತ ಶಾಲೆಯಾದುದರಿಂದ ನಿಮ್ಮ ಮಗುವಿಗೆ ನಮ್ಮಲ್ಲಿ ಪ್ರವೇಶವಿಲ್ಲ" ಎಂದು ಪ್ರವೇಶ ನಿರಾಕರಿಸಿ ಹೆತ್ತವರನ್ನು ಕಂಗಾಲುಗೊಳಿಸಿದ ಶಾಲೆಗಳಿವೆ. ಉಚಿತ ಶಿಕ್ಷಣದ ವ್ಯಾಖ್ಯೆ ಪ್ರಕಾರ ಇಂಥ ಶಾಲೆಗಳು ಮಕ್ಕಳಿಂದ ಶುಲ್ಕ ವಸೂಲು ಮಾಡಬಾರದಾದರೂ ಬಲವಂತವಾಗಿ ಮಕ್ಕಳಿಂದ ಶುಲ್ಕ ವಸೂಲು ಮಾಡಿದ ಶಾಲೆಗಳಿವೆ. ಸರಕಾರ ನಿಗದಿಪಡಿಸಿದ್ದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಭೋಜನ, ಸಮವಸ್ತ್ರ, ಸಹಪಠ್ಯ ಚಟುವಟಿಕೆ ಇತ್ಯಾದಿ ಹೆಸರಿನಲ್ಲಿ ಅಧಿಕ ಶುಲ್ಕ ಮಾಡಿದ ಪ್ರಕರಣಗಳು ಬೆಂಗಳೂರಿನಲ್ಲೇ ಸಾಕಷ್ಟು ಪ್ರಮಾಣದಲ್ಲಿ ಕಂಡುಬಂದಿವೆ.

ಬಗೆಬಗೆಯಲ್ಲಿ ನಮಗೆ ಅನುಕೂಲಗಳು ಒದಗಿ ಬರುತ್ತವೆ ಎಂಬುದಾದರೆ, ವಿನಾಯಿತಿಗಳು ಸಿಗುತ್ತವೆ ಎಂದಾದರೆ ಹೇಗಾದರೂ ಸರಿ ನಾವು ಹಿಂದುಳಿದವರಾಗಲು, ಅಲ್ಪಸಂಖ್ಯಾತರಾಗಲು ಬಯಸುತ್ತೇವೆ. ಶಿಕ್ಷಣ ಕಾಯ್ದೆ ಜಾರಿಗೆ ಬಂದದ್ದೇ ತಡ ನಿಜಕ್ಕೂ ಅಲ್ಪಸಂಖ್ಯಾತವಲ್ಲದ ಅನೇಕ ಶಾಲೆಗಳು ತಮ್ಮದು ಅಲ್ಪಸಂಖ್ಯಾತ ಶಾಲೆ ಹೀಗಾಗಿ ಶೇಕಡ ೨೫ ಮೀಸಲಾತಿ ನಿಯಮ ಅನ್ವಯವಾಗುವುದಿಲ್ಲ ಎಂದು ಸ್ವಯಂ ಘೋಷಣೆ ಹೊರಡಿಸಿ ಪಾಲಕರನ್ನು ಮತ್ತು ಮಕ್ಕಳನ್ನು ಕಂಬ ಸುತ್ತುವಂತೆ ಮಾಡಿವೆ. ಈ ನಡುವೆ ಸರಕಾರಕ್ಕೂ 'ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆ' ಎಂದು ಘೋಷಣೆ ಹೊರಡಿಸಲು ಹಲವು ಅಡಚಣೆಗಳು ಎದುರಾಗಿವೆ. ಸಂಸ್ಥೆಗಳ ವಿಶ್ವಾಸಾರ್ಹತೆ ಒಂದು ದೊಡ್ಡ ಪ್ರಶ್ನೆಯಾದರೆ, ಅಂಥ ಶಾಲೆಗಳಲ್ಲಿ ಹಾಜರಿರಬೇಕಾದ ಅಲ್ಪಸಂಖ್ಯಾತ ವಿದ್ಯಾರ್ಥಿಗಳ ಪ್ರಮಾಣ ಇನ್ನೊಂದು ದೊಡ್ಡ ಪ್ರಶ್ನೆ. ಈ ನಡುವೆ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಗಳು ನ್ಯಾಯಾಲಯದ ಮೆಟ್ಟಿಲೇರಿವೆ.

೨೦೧೨ಕ್ಕೂ ಮೊದಲು ಕರ್ನಾಟಕ ರಾಜ್ಯದಲ್ಲಿ ಯಾವುದೇ ಶಾಲೆ ಅಲ್ಪಸಂಖ್ಯಾತ ಸಂಸ್ಥೆ ಎಂದು ಮಾನ್ಯತೆ ಪಡೆಯಬೇಕಾದರೆ ಸರಕಾರದ ಉರ್ದು ಮತ್ತು ಅಲ್ಪಸಂಖ್ಯಾತ ಇಲಾಖೆಗೆ ಅರ್ಜಿ ಸಲ್ಲಿಸಬೇಕು. ಅಂಥ ಸಂಸ್ಥೆಯ ಆಡಳಿತ ಮಂಡಳಿಯಲ್ಲಿ ೨/೩ರಷ್ಟು ಮಂದಿ ಸದಸ್ಯರು ಭಾಷಿಕ ಅಥವಾ ಧಾರ್ಮಿಕ ಅಲ್ಪಸಂಖ್ಯಾತ ಗುಂಪಿಗೆ ಸೇರಿದವರಾಗಿರಬೇಕು. ತಹಶೀಲ್ದಾರರು ಇದನ್ನು ದೃಢೀಕರಿಸಬೇಕು. ಸಂಸ್ಥೆಯಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಆಯಾ ಭಾಷಿಕ ಅಥವಾ ಧಾರ್ಮಿಕ ಅಲ್ಪಸಂಖ್ಯಾತ ಗುಂಪಿಗೆ ಸೇರಿದ ವಿದ್ಯಾರ್ಥಿಗಳ ಪ್ರಮಾಣ ಶೇಕಡ ೫೦ರಷ್ಟಿರಬೇಕು. ಅಲ್ಪಸಂಖ್ಯಾತರಿಗೆ ಸೇರಿದ ಟ್ರಸ್ಟ್‌ಗೆ ಸಾಂವಿಧಾನಿಕ ಮಾನ್ಯತೆ ಇದ್ದರೂ ಕೂಡ ಆ ಟ್ರಸ್ಟ್ ನಡೆಸುವ ಶಾಲೆ ಅಲ್ಪಸಂಖ್ಯಾತ ಶಾಲೆ ಎಂದು ಅಲ್ಪಸಂಖ್ಯಾತ ಇಲಾಖೆ ಮಾನ್ಯತೆ ನೀಡಿರಬೇಕು. ಇಲಾಖೆಯಿಂದ ಶಿಕ್ಷಣ ಸಂಸ್ಥೆ ಮಾನ್ಯತೆ ಪಡೆಯದಿದ್ದಲ್ಲಿ ಅದಕ್ಕೆ ಅಲ್ಪಸಂಖ್ಯಾತ ಸ್ಥಾನಮಾನ ಮತ್ತು ಅದರಿಂದ ಒದಗುವ ಕೆಲವು ವಿನಾಯಿತಿಗಳು ದಕ್ಕುವುದಿಲ್ಲ.

ಶಿಕ್ಷಣ ಹಕ್ಕು ಕಾಯ್ದೆ ೨೦೦೯ ಅನುದಾನರಹಿತ ಅಲ್ಪಸಂಖ್ಯಾತ ಶಾಲೆಗಳಿಗೆ ಅನ್ವಯಿಸುವುದಿಲ್ಲ ಎಂದು ೨೦೧೨ರಲ್ಲಿ ಸುಪ್ರೀಂ ಕೋರ್ಟ್ ಮಹತ್ವದ ತೀರ್ಪು ನೀಡಿತು. ಇದರಿಂದಾಗಿ ಹಲವಾರು ಅನುದಾನರಹಿತ ಶಾಲೆಗಳ ಆಡಳಿತ ಮಂಡಳಿಗಳವರು ಶಿಕ್ಷಣ ಕಾಯ್ದೆಯಿಂದ ಪಾರಾಗಲು 'ಅಲ್ಪಸಂಖ್ಯಾತ' ಎಂಬ ಗುರಾಣಿಯನ್ನು ಮುಂದೊಡ್ಡಿದವು. ಈ ನಡುವೆ ೨೦೧೨ರಲ್ಲಿ ಕರ್ನಾಟಕ ಸರಕಾರವು 'ಅಲ್ಪಸಂಖ್ಯಾತ ಶಾಲೆ' ಬಗೆಗಿನ ವ್ಯಾಖ್ಯೆಯನ್ನು ಮಾರ್ಪಾಡುಗೊಳಿಸಿ ಇಂಥ ಶಾಲೆಗಳಲ್ಲಿ ಶೇಕಡ ೭೫ರಷ್ಟು ವಿದ್ಯಾರ್ಥಿಗಳು ಆಯಾ ಭಾಷಿಕ ಅಥವಾ ಧಾರ್ಮಿಕ ಗುಂಪಿಗೆ ಸೇರಿದವರಿರಬೇಕು ಎಂದು ಸುತ್ತೋಲೆ ಹೊರಡಿಸಿ ಮುಷ್ಟಿ ಬಿಗಿಗೊಳಿಸಿತು. ೨೦೧೩ರ ಸರಕಾರಿ ಅಂಕಿ-ಅಂಶಗಳ ಪ್ರಕಾರ ರಾಜ್ಯದಲ್ಲಿ ೨೫೫ ಅನುದಾನರಹಿತ ಪ್ರಾಥಮಿಕ ಅಲ್ಪಸಂಖ್ಯಾತ ಶಾಲೆಗಳಿವೆ. ಅಲ್ಪಸಂಖ್ಯಾತ ಎಂಬ ಪ್ರಮಾಣ ಪತ್ರ ಹೊಂದಿರುವ ಈ ಶಾಲೆಗಳಿಗೆ ಶಿಕ್ಷಣ ಹಕ್ಕು ಕಾಯ್ದೆ ಅನ್ವಯಿಸುವುದಿಲ್ಲ. ಕರ್ನಾಟಕ ರಾಜ್ಯ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಗಳ ಒಕ್ಕೂಟದ ಪ್ರಕಾರ ರಾಜ್ಯದಲ್ಲಿ ೬೦೦೦ ಅಲ್ಪಸಂಖ್ಯಾತ ಶಾಲೆಗಳಿದ್ದು ಸುಮಾರು ೩೦೦೦ ಶಾಲೆಗಳು ಬೆಂಗಳೂರಿನಲ್ಲೇ ಇವೆ. ಸೊಸೈಟೀಸ್ ಆಕ್ಟ್ ಪ್ರಕಾರ ಈ ಶಾಲೆಗಳ ಟ್ರಸ್ಟ್‌ಗಳು ನೋಂದಾಯಿಸಲ್ಪಟ್ಟಿರುವುದರಿಂದ ಪುನಃ ಅಲ್ಪಸಂಖ್ಯಾತ ಇಲಾಖೆಯ ಮಾನ್ಯತಾ ಪತ್ರ ಅಗತ್ಯವಿಲ್ಲ. ಮೇಲಾಗಿ ಅಲ್ಪಸಂಖ್ಯಾತ ಐಸಿಎಸ್‌ಇ ಹಾಗೂ ಸಿಬಿಎಸ್‌ಇ ಶಾಲೆಗಳಿಗೆ ಪ್ರಮಾಣಪತ್ರ ನೀಡುವ ಅಧಿಕಾರ ರಾಜ್ಯ ಸರಕಾರಗಳಿಗಿಲ್ಲ. ರಾಷ್ಟ್ರೀಯ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಗಳ ಆಯೋಗ ಇವುಗಳಿಗೆ ಮಾನ್ಯತೆ ನೀಡುತ್ತದೆ ಎಂಬುದು ಒಕ್ಕೂಟದವರ ವಾದ.




ದಿನಾಂಕ ೪.೫.೨೦೧೪ರಂದು ಮಾ-ಲೆ ಪ್ರಕಾಶನವು ಡಾ|| ದೇವಿಪ್ರಸಾದ್ ಚಟ್ಟೋಪಾಧ್ಯಾಯರ ವಿಚಾರಗಳ ಚಿಂತನಮಂಥನ ಕಾರ್ಯಕ್ರಮವನ್ನು ಹಮ್ಮಿಕೊಂಡಿತ್ತು. ಜ್ಯೋತಿ ಬಸು ಭವನ, ಬಸವನಗುಡಿ, ಬೆಂಗಳೂರು ಇಲ್ಲಿ ಆಯೋಜಿಸಲಾಗಿದ್ದ ಈ ಸಮಾರಂಭದಲ್ಲಿ ಭಾಷಣಕಾರರಾಗಿ ಡಾ|| ಎಚ್. ಜಿ. ಜಯಲಕ್ಷ್ಮಿ, ಶ್ರೀ ಮ. ಶ್ರೀ. ಮುರಳಿಕೃಷ್ಣ, ಶ್ರೀ ಬಿ. ಎನ್. ವೇಣುಗೋಪಾಲ್ ಹಾಗೂ ಶ್ರೀಮತಿ ಮೈತ್ರಿ ಬಿ. ಆಗಮಿಸಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಈ ಸಂದರ್ಭದಲ್ಲಿ ಡಾ|| ಜಿ. ರಾಮಕೃಷ್ಣ ಅವರು ಮಾರ್ಕ್ಸ್‌ವಾದದ ಬಗ್ಗೆ ಪ್ರತಿಪಾದಿಸಿದ 'ಎಂದಿಗೂ ಸಲ್ಲುವ ಮಾರ್ಕ್ಸ್' ಎಂಬ ನವಕರ್ನಾಟಕ ಪ್ರಕಾಶನದ ಕೃತಿಯನ್ನು ಸಹ ಬಿಡುಗಡೆ ಮಾಡಲಾಯಿತು.

ಇದೇ ಏಪ್ರಿಲ್ ೩೦ರಂದು ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಗಳ ಫೆಡರೇಶನ್ ಹೂಡಿದ ದಾವೆ ಬಗ್ಗೆ ತೀರ್ಪು ನೀಡಲಾಗಿದೆ. ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆ ಮಾನ್ಯತೆ ಸಂಬಂಧದಲ್ಲಿ ಕೆಲವು ಸಂಸ್ಥೆಗಳು ಸಲ್ಲಿಸಿದ ಅರ್ಜಿಗಳು ವಿಲೇವಾರಿಯಾಗದೇ ಇರುವುದನ್ನು ಗಮನಿಸಿದ ನ್ಯಾಯಾಲಯ ಒಂದು ತಿಂಗಳ ಒಳಗಾಗಿ ಅಂದರೆ ಜೂನ್ ಹೊತ್ತಿಗೆ ಈ ಸಂಸ್ಥೆಗಳ ಅಲ್ಪಸಂಖ್ಯಾತ ಸ್ಥಾನಮಾನದ ನಿರ್ಧಾರವಾಗದೆ ಶಿಕ್ಷಣ ಹಕ್ಕು ಕಾಯ್ದೆಯನ್ನು ಈ ಶಾಲೆಗಳಲ್ಲಿ ಜಾರಿಗೊಳಿಸಿ ಎಂದು ಸರಕಾರ ಶಾಲೆಗಳನ್ನು ಒತ್ತಾಯಿಸುವಂತಿಲ್ಲ ಎಂಬ ತೀರ್ಪು ನೀಡಿದೆ. ಈ ತೀರ್ಪನ್ನು ಗಮನಿಸಿದರೆ ಮುಂದಿನ ದಿನಗಳಲ್ಲಿ ಸರಕಾರ ಅಲ್ಪಸಂಖ್ಯಾತ ಶಾಲೆಗಳ ವಿಷಯದಲ್ಲಿ ತನ್ನ ಧೋರಣೆಗಳನ್ನು ದುರ್ಬಲಗೊಳಿಸುವ ಎಲ್ಲ ಸಾಧ್ಯತೆಗಳೂ ಇವೆ ಮತ್ತು ಇದರಿಂದಾಗಿ ನಿಜಕ್ಕೂ ಸೌಲಭ್ಯ ವಂಚಿತ, ಶೋಷಿತ ವರ್ಗಗಳ ಮಕ್ಕಳು ತಮ್ಮ ಹಕ್ಕುಗಳನ್ನು ಸ್ಥಾಪಿಸಿಕೊಳ್ಳ ಬಹುದಾದ ಅವಕಾಶಗಳಿಂದ ವಂಚಿತರಾಗಲಿದ್ದಾರೆ. ಇದಲ್ಲದೆ ೨೦೧೪ರ ಮೇ ೬ರಂದು ಸುಪ್ರೀಂ ಕೋರ್ಟು ಶಿಕ್ಷಣ ಹಕ್ಕು ಕಾಯ್ದೆಯು ಅನುದಾನಿತ ಮತ್ತು ಅನುದಾನರಹಿತ ಅಲ್ಪಸಂಖ್ಯಾತ ಶಾಲೆಗಳಿಗೆ ಅನ್ವಯಿಸುವುದಿಲ್ಲ ಎಂದು ಪುನರುಚ್ಚರಿಸಿರುವುದರಿಂದ 'ಅಲ್ಪಸಂಖ್ಯಾತ' ಎಂಬುದು ಇನ್ನು ಮುಂದೆ ಭಾರಿ ಚಲಾವಣೆಯ ನಾಣ್ಯವಾಗಲಿದೆ.

ಅಲ್ಪಸಂಖ್ಯಾತ ಎಂಬ ಈ ಪರಿಕಲ್ಪನೆಯೇ ಸಾಂದರ್ಭಿಕವಾಗಿ ಅಥವಾ ಪ್ರಾದೇಶಿಕವಾಗಿ ಗೊಂದಲಕ್ಕೆ ಎಡೆಮಾಡಿಕೊಡುತ್ತದೆ. ನಿದರ್ಶನಕ್ಕೆ ರಾಜ್ಯದ ನೆಲೆಯಲ್ಲಿ ತುಳು ಮತ್ತು ಕೊಂಕಣಿ ಅಲ್ಪಸಂಖ್ಯಾತ ಭಾಷೆಗಳು; ಇಸ್ಲಾಂ, ಕ್ರಿಶ್ಚಿಯನ್ ಇತ್ಯಾದಿ ಅಲ್ಪಸಂಖ್ಯಾತ ಧರ್ಮಗಳು. ಆದರೆ ಉಡುಪಿ, ಮಂಗಳೂರು ಮುಂತಾದ ಪ್ರದೇಶಗಳಲ್ಲಿ ಕನ್ನಡವೇ ಅಲ್ಪಸಂಖ್ಯಾತ ಭಾಷೆ ತುಳು ಹಾಗೂ ಕೊಂಕಣಿ ಪ್ರಧಾನ ಭಾಷೆಗಳು. ಗೋವಾದಲ್ಲಿ ಕೊಂಕಣಿ ರಾಜ್ಯ ಭಾಷೆ! ಅಂತೆಯೇ ಕ್ರಿಶ್ಚಿಯನ್ನರು, ಮುಸಲ್ಮಾನರು ಮಂಗಳೂರು ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಕರ್ನಾಟಕದ ಕೆಲವು ಭಾಗಗಳಲ್ಲಿ ಮುಸಲ್ಮಾನರ ಸಂಖ್ಯೆ ಸಾಕಷ್ಟಿದೆ. ಹೀಗಿರುವಾಗ 'ಅಲ್ಪಸಂಖ್ಯಾತ' ಎಂಬುದರ ಸರಿಯಾದ ನಿರ್ವಚನ ಎಲ್ಲಿ ? ಹೇಗೆ ?

ಶೇಕಡ ೫೦ ಅಥವಾ ಶೇಕಡ ೭೫ರಷ್ಟು ವಿದ್ಯಾರ್ಥಿಗಳು ಅಲ್ಪಸಂಖ್ಯಾತ ಗುಂಪಿಗೆ ಸೇರಿದವ ರಿದ್ದಾರೆ ಎಂದ ಮಾತ್ರಕ್ಕೆ ಅಲ್ಪಸಂಖ್ಯಾತ ಸ್ಥಾನಮಾನ ಎಂಬ ವಾದವೂ ತರ್ಕಶೂನ್ಯ. ಉದಾಹರಣೆಗೆ ಅಲ್ಪಸಂಖ್ಯಾತರು ಸಾಕಷ್ಟಿರುವ ಒಂದು ಪ್ರದೇಶದಲ್ಲಿ ಹತ್ತಾರು ಅಲ್ಪಸಂಖ್ಯಾತರ ಶಾಲೆಗಳಿರುತ್ತವೆ. ಆದರೆ ಈ ಶಾಲೆಗಳಲ್ಲಿ ಎಲ್ಲಿಯೂ ಶೇಕಡ ೫೦ರಷ್ಟು ಆಯಾ ಗುಂಪಿನ ವಿದ್ಯಾರ್ಥಿಗಳನ್ನು ದಾಖಲಿಸುವುದು ಸುಲಭವಲ್ಲ. ಅಷ್ಟೊಂದು ಸಂಖ್ಯೆಯಲ್ಲಿ ವಿದ್ಯಾರ್ಥಿ ಗಳನ್ನು ದಾಖಲು ಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ. ಆದುದರಿಂದ ರಾಷ್ಟ್ರೀಯ ಅಲ್ಪಸಂಖ್ಯಾ ಆಯೋಗವು ಕೆಲವರ್ಷಗಳ ಹಿಂದೆ ನೀಡಿದ ತೀರ್ಪಿನಲ್ಲಿ ಈ ಸಂಸ್ಥೆ ಗಳಲ್ಲಿ ಎಷ್ಟು ಪ್ರಮಾಣದಲ್ಲಿ ಅಲ್ಪಸಂಖ್ಯಾತರಿದ್ದಾರೆ ಎಂಬುದು ಮುಖ್ಯ ಪ್ರಶ್ನೆಯಲ್ಲ; ಬದಲಾಗಿ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪನೆಮಾಡಿ, ಆಡಳಿತ ನಿರ್ವಹಣೆ ಮಾಡುತ್ತಿರುವವರು ಯಾರು ಎಂಬುದನ್ನು ಆಧರಿಸಿ ಅಲ್ಪಸಂಖ್ಯಾತ ಸ್ಥಾನಮಾನ ನೀಡಬೇಕು ಎಂದು ತೀರ್ಪು ನೀಡಿದೆ. ವಿದ್ಯಾರ್ಥಿಗಳ ಹಾಗೂ ಅಧ್ಯಾಪಕರ ಸಂಖ್ಯೆ ಆಧರಿಸಿ ಅಲ್ಪಸಂಖ್ಯಾತ ಸ್ಥಾನಮಾನ ನಿರ್ಧರಿಸುವುದು ಹಲವಾರು ಪ್ರಕರಣ ಗಳಲ್ಲಿ ಸಾಧುವಲ್ಲ ಮತ್ತು ಈ ನಿಯಮ ಸಂಸ್ಥೆಗಳಿಗೆ ಮುಂದೆ ಅಪರಿಹಾರ್ಯವಾದ ಅಸಾಧ್ಯವಾದ ಸವಾಲು ಗಳನ್ನು ಒಡ್ಡುತ್ತದೆ.

ಸರ್ವೋಚ್ಚ ನ್ಯಾಯಾಲಯ ನೀಡಿದ ತೀರ್ಪುಗಳ ಪ್ರಕಾರ ಅಲ್ಪಸಂಖ್ಯಾತರು ತಮ್ಮದೇ ಆದ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ತಮ್ಮ ಭಾಷೆ, ಧರ್ಮ ಅಥವಾ ಸಂಸ್ಕೃತಿಯನ್ನು ರಕ್ಷಿಸಲು, ಪ್ರಚುರಪಡಿಸಲು ಸಾಂವಿಧಾನಿಕ ಮೂಲಭೂತ ಹಕ್ಕುಗಳನ್ನು ಹೊಂದಿದ್ದಾರೆ. ಹಾಗಂತ ಈ ಸಂಸ್ಥೆಗಳನ್ನು ನಡೆಸಲು ಅವರಿಗೆ ದತ್ತವಾದ ಸ್ವಾತಂತ್ರ್ಯವು 'ದುರಾಡಳಿತಕ್ಕೆ ನೀಡಿದ ಅನುಮತಿ'ಯಲ್ಲ ಎಂದೂ ನ್ಯಾಯಾಲಯ ಎಚ್ಚರಿಸಿದೆ. ಇದರ ಜೊತೆಗೆ ಅನುದಾನರಹಿತ ಅಲ್ಪಸಂಖ್ಯಾತ ಶಾಲೆಗಳನ್ನು ಶಿಕ್ಷಣ ಹಕ್ಕು ಕಾಯ್ದೆಯ ವ್ಯಾಪ್ತಿಯಿಂದ ಹೊರಗಿಟ್ಟಿರುವ ನ್ಯಾಯಾಲಯದ ನಿರ್ದೇಶನ ನಿಜಕ್ಕೂ ಮರುಪರಿಶೀಲನೆಗೆ ಯೋಗ್ಯ ವಾಗಿದೆ. ಏಕೆಂದರೆ ಅನುದಾನರಹಿತ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಗಳಿರುವುದು ಈ ನೆಲದಲ್ಲೇ; ಈ ನೆಲದ ಸರಕಾರಗಳಿಂದ ಪೂರ್ವಾನುಮತಿ ಪಡೆದು ಮಾನ್ಯತೆ ಗಳಿಸಿ ಇವು ಸಂಸ್ಥೆಗಳನ್ನು ಸ್ಥಾಪನೆ ಮಾಡುತ್ತವೆ. ಅಲ್ಪಸಂಖ್ಯಾತರೆಂಬ ಕಾರಣಕ್ಕೆ ಕೆಲವೊಂದು ವಿನಾಯಿತಿಗಳನ್ನು ಪಡೆದುಕೊಳ್ಳುತ್ತವೆ. ಹೀಗಿರುವಾಗ ಇವು ನಡೆಸಿಕೊಂಡು ಬರುತ್ತಿರುವ ಶಿಕ್ಷಣ ಸಂಸ್ಥೆಗಳ ಆಡಳಿತದಲ್ಲಿ ಸರಕಾರ ಹಸ್ತಕ್ಷೇಪ ಮಾಡಕೂಡದು ಎಂಬ ನಿಲುಮೆ ಪಕ್ಷಪಾತಿ ಧೋರಣೆಯಾಗಿದೆ. ಈ ಸಂಸ್ಥೆಗಳಲ್ಲಿ ಶೇಕಡ ೫೦ರಷ್ಟು ಮಂದಿ ಆಯಾ ಭಾಷಿಕ ಅಥವಾ ಧಾರ್ಮಿಕ ಅಲ್ಪಸಂಖ್ಯಾತ ಗುಂಪಿನ ವಿದ್ಯಾರ್ಥಿಗಳಿಗೆ ಪ್ರವೇಶ ನೀಡಬೇಕೆಂಬ ನಿಬಂಧನೆ ಇದೆ. ಇನ್ನುಳಿದ ಶೇಕಡ ೫೦ರಷ್ಟು ಸ್ಥಾನಮಾನಗಳು ಅನ್ಯರಿಗೆ ಎಂಬುದು ಸ್ಪಷ್ಟ. ಹೀಗಿರುವಾಗ ಇನ್ನುಳಿದ ಶೇಕಡ ೫೦ರಷ್ಟು ಸೀಟುಗಳ ಸಂಬಂಧದಲ್ಲಿ ಶಿಕ್ಷಣ ಹಕ್ಕು ಕಾಯ್ದೆಯು ವಿಧಿಸುವ ಶೇಕಡ ೨೫ ಮೀಸಲಾತಿ ಜಾರಿಗೆ ತರಲು ಏನು ಅಡ್ಡಿ? ಹೀಗೆ ಮಾಡುವು ದರಿಂದ ಅಲ್ಪಸಂಖ್ಯಾತ ಆಡಳಿತ ಮಂಡಳಿಗಳಿಗೆ ಆಗುವ ತೊಂದರೆಯಾದರೂ ಏನು? ದೇಶದ ಸರ್ವೋಚ್ಚ ನ್ಯಾಯಾಲಯ ಸಾಮಾಜಿಕ ನ್ಯಾಯ ಸ್ಥಾಪನೆಯ ಈ ವಿಚಾರದಲ್ಲಿ ನಿಜಕ್ಕೂ ಎಡವಿದೆ ಎಂದೇ ನನಗನ್ನಿಸುತ್ತಿದೆ. ಕೇಂದ್ರ ಹಾಗೂ ರಾಜ್ಯ ಸರಕಾರಗಳು ಕಾನೂನು ಪರಿಣತರ ನೆರವು ಪಡೆದು ಇನ್ನುಳಿದ ಶೇಕಡ ೫೦ರಷ್ಟು ಸ್ಥಾನಗಳಲ್ಲಿ ಶೇಕಡ ೨೫ ಮೀಸಲಾತಿ ಜಾರಿಗೆ ತಂದರೆ ಏನೂ ಬಾಧಕವಿಲ್ಲ ಮತ್ತು ಇದರಿಂದ ನಿಜಕ್ಕೂ ಹಿಂದುಳಿದ ವರ್ಗಗಳ ಮಕ್ಕಳಿಗೆ ಅನುಕೂಲವಾಗುತ್ತದೆ ಎಂದು ನ್ಯಾಯಾಲಯಕ್ಕೆ ಮನವರಿಕೆ ಮಾಡಿಕೊಡುವ ತುರ್ತು ಇದೆ.

ಈ ನಡುವೆ ಹಲವಾರು ಸಿಬಿಎಸ್ಇ ಶಾಲೆಗಳು ಶಿಕ್ಷಣ ಕಾಯ್ದೆಗೂ ತಮಗೂ ಸಂಬಂಧವಿಲ್ಲ, ಈ ಕಾಯ್ದೆ ತಮ್ಮ ಸಂಸ್ಥೆಗಳಿಗೆ ಅನ್ವಯ ಆಗುವುದಿಲ್ಲ ಎಂದು ಅರ್ಹ ಮಕ್ಕಳಿಗೆ ಪ್ರವೇಶವನ್ನು ನಿರಾಕರಿಸಿವೆ. ಈ ಬಗ್ಗೆ ದೇಶಾದ್ಯಂತ ಹಲವಾರು ದೂರುಗಳು ಸಿಬಿಎಸ್ಇ ಮಂಡಳಿಗೆ ಹರಿದುಬಂದಿದ್ದು ಮಂಡಳಿಯು ೨೦೧೨ರಲ್ಲೇ ಶಿಕ್ಷಣ ಹಕ್ಕು ಕಾಯ್ದೆಯನ್ನು ಈ ಎಲ್ಲ ಶಾಲೆಗಳೂ ಪ್ರಾಮಾಣಿಕವಾಗಿ ಜಾರಿಗೊಳಿಸುವುದಕ್ಕೆ ಸಂಬಂಧಪಟ್ಟಂತೆ ಸುತ್ತೋಲೆ ಹೊರಡಿಸಿರುವುದಾಗಿ ಸ್ಪಷ್ಟೀಕರಣ ನೀಡಿದೆ. ಕರ್ನಾಟಕದ ಶಿಕ್ಷಣ ಇಲಾಖೆಯು ಇಂಥ ಶಾಲೆಗಳಿಗೆ ಸೂಕ್ತ ಎಚ್ಚರಿಕೆ ನೀಡಿದೆ. ಕಾಯ್ದೆ ಯನ್ನು ಸರಿಯಾದ ರೀತಿಯಲ್ಲಿ ಜಾರಿಗೊಳಿಸದಿದ್ದರೆ ಸರಕಾರವು ಈ ಶಾಲೆಗಳಿಗೆ ನೀಡಿದ ನಿರಾಕ್ಷೇಪಣ ಪ್ರಮಾಣಪತ್ರವನ್ನು ಹಿಂತೆಗೆದುಕೊಳ್ಳುತ್ತದೆ; ಹಾಗೆ ಆದ ಪಕ್ಷದಲ್ಲಿ ಶಾಲೆಗಳಿಗೆ ಕೇಂದ್ರೀಯ ಪ್ರೌಢ ಶಿಕ್ಷಣ ಮಂಡಳಿಯ ಸಂಲಗ್ನತೆ ರದ್ದಾಗುತ್ತದೆ ಎಂಬ ಎಚ್ಚರಿಕೆಯನ್ನು ನೀಡಿದೆ. ಈ ಶಾಲೆಗಳು ಪಾಲಿಸಬೇಕಾದ ರಾಜ್ಯ ಸರಕಾರದ ನಿಯಮಗಳನ್ನು, ವಸೂಲಿ ಮಾಡಬೇಕಾದ ಶುಲ್ಕ ಪ್ರಮಾಣವನ್ನು ಶಾಲೆಗಳಿಗೆ ಸೂಚಿಸಲಾಗಿದೆ.

ದುರಂತದ ಸಂಗತಿ ಎಂದರೆ ವಿವಿಧ ರಾಜ್ಯಗಳ ವಿಧಾನಸಭೆಗಳಿಗೆ ಹಾಗೂ ಲೋಕಸಭೆಗೆ ಮಹಾಚುನಾವಣೆಗಳು ನಡೆದಿವೆ. ಆದರೆ ಯಾವ ರಾಜಕೀಯ ಪಕ್ಷವೂ ಶಿಕ್ಷಣ ಹಕ್ಕು ಕಾಯ್ದೆಯ ಪರಿಣಾಮಕಾರಿ ಅನುಷ್ಠಾನದ ಬಗ್ಗೆ ತನ್ನ ಚುನಾವಣಾ ಪ್ರಣಾಳಿಕೆಯಲ್ಲಿ ಪ್ರಸ್ತಾಪವನ್ನೇ ಮಾಡಿಲ್ಲ. ಹೆಚ್ಚೇಕೆ, ಶಿಕ್ಷಣ ಹಕ್ಕು ಕಾಯ್ದೆಯನ್ನು ಜಾರಿಗೆ ತಂದ ಕಾಂಗ್ರೆಸ್ ಸರಕಾರ ತನ್ನ ಸಾಧನೆಗಳ ಬಗ್ಗೆ ಮಾತನಾಡುವಾಗ ಮಾಹಿತಿ ಹಕ್ಕು ಕಾಯ್ದೆಯನ್ನು ಎತ್ತಿ ಹೇಳುತ್ತದಾದರೂ ದೀರ್ಘಕಾಲಿಕ ಸಮಸ್ಯೆಯೊಂದರ ಪರಿಹಾರ ರೂಪವಾಗಿ ಜಾರಿಗೆ ಬಂದಿರುವ ಹಾಗೂ ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ವ್ಯಾಪಕ ಪರಿಣಾಮ ಬೀರಲಿರುವ ಶಿಕ್ಷಣ ಹಕ್ಕು ಕಾಯ್ದೆ ಬಗ್ಗೆ ಎಲ್ಲಿಯೂ ಗಟ್ಟಿಯಾಗಿ ಮಾತನಾಡಿಲ್ಲ ಎಂಬುದು ನಿಜಕ್ಕೂ ಆಶ್ಚರ್ಯದ ಸಂಗತಿ.

ಮಕ್ಕಳ ಹಕ್ಕುಗಳ ಕಾರ್ಯಕರ್ತರು, ಸಾಮಾಜಿಕ ಸಂಘಟನೆಗಳು, ಪ್ರಗತಿಶೀಲ ಚಿಂತಕರು ಶಿಕ್ಷಣ ಹಕ್ಕು ಕಾಯ್ದೆಯ ಅಸಮರ್ಪಕ ಅನುಷ್ಠಾನದ ಬಗ್ಗೆ ಸರಕಾರ ಗಳನ್ನು ತರಾಟೆಗೆ ತೆಗೆದುಕೊಂಡಿದ್ದಾರೆ. ಕಳೆದ ಮೂರ್ನಾಲ್ಕು ವರ್ಷಗಳಲ್ಲಿ ಶೇಕಡ.೨೫ ಮೀಸಲಾತಿ ವಂಚನೆಯ ಬಗ್ಗೆಯೇ ಬಹಳಷ್ಟು ದೂರುಗಳು ಕೇಳಿ ಬರುತ್ತಿವೆ. ಸರಕಾರ ಕಾಲದಿಂದ ಕಾಲಕ್ಕೆ ಹೊರಡಿಸು ತ್ತಿರುವ ಸುತ್ತೋಲೆಗಳು ಖಾಸಗಿ ಶಾಲೆಗಳಿಗೆ ಅನುಕೂಲಕರವಾಗಿವೆ. ಆದರೆ ಕಾಯ್ದೆಯಲ್ಲಿ ಪ್ರಸ್ತಾಪಿಸಿರುವ ಶಿಕ್ಷಕರ ಅರ್ಹತೆ, ಶಿಕ್ಷಕರ ನೇಮಕಾತಿ, ಮೂಲಭೂತ ಸೌಲಭ್ಯಗಳು, ಸಮುದಾಯದ ಭಾಗಿತ್ವ, ಶಾಲಾಭಿವೃದ್ಧಿ ಹಾಗೂ ನಿರ್ವಹಣ ಸಮಿತಿಗಳ ನಿಷ್ಕ್ರಿಯತೆ, ಶಾಲೆಗಳಲ್ಲಿ ನೀಡಲಾಗುತ್ತಿರುವ ಶಿಕ್ಷೆ,

ವಿದ್ಯಾರ್ಥಿಗಳ ಬಗೆಗಿನ ತಾರತಮ್ಯ ನೀತಿ ಇತ್ಯಾದಿ ವಿಚಾರಗಳ ಬಗ್ಗೆ ಸರಕಾರ ವಿಶೇಷ ಗಮನ ಹರಿಸುತ್ತಿಲ್ಲ. ಸಾರ್ವಜನಿಕ ಜಾಗೃತಿಯೂ ಕಂಡುಬರುತ್ತಿಲ್ಲ ಎಂಬುದು ಇವರೆಲ್ಲರ ಆಕ್ರೋಶಕ್ಕೆ ಕಾರಣವಾಗಿದೆ.

**ಸಾಗಬೇಕಾದ ಹಾದಿ**

ಶಿಕ್ಷಣ ಹಕ್ಕು ಕಾಯ್ದೆ ೨೦೦೯ ಸರಿಯಾದ ಕ್ರಮದಲ್ಲಿ ಜಾರಿಗೆ ಬರಬೇಕಾದರೆ ಈ ಕೆಲವು ಕ್ರಮಗಳನ್ನು ಕೈಗೊಳ್ಳುವುದು ಅಗತ್ಯ ಮತ್ತು ಅನಿವಾರ್ಯ.

೧. ದೇಶದಲ್ಲಿನ ಎಲ್ಲ ಶಾಲೆಗಳಲ್ಲಿ ಕಲಿಕೆಗೆ ಅಗತ್ಯವಾದ ಮೂಲಭೂತ ಸೌಲಭ್ಯಗಳನ್ನು ತ್ವರಿತವಾಗಿ ಒದಗಿಸಬೇಕು.

೨. ಶಾಲೆಯಿಂದ ಹೊರಗೆ ಉಳಿದ ಮಕ್ಕಳ ಬಗ್ಗೆ ಸರಿಯಾದ ಪರಿಕಲ್ಪನೆ ರೂಪಿಸಿ, ಅಂಥ ಮಕ್ಕಳನ್ನು ಸರಿಯಾಗಿ ಗುರುತಿಸಿ ಅವರು ಶಾಲೆಗಳಿಗೆ ಹಾಜರಾಗುವಂತೆ ನೋಡಿಕೊಳ್ಳುವುದು.

೩. ಶಿಕ್ಷಣ ಇಲಾಖೆಯನ್ನು ಪುನರ್ ಸಂಘಟಿಸಿ ಖಾಲಿ ಇರುವ ಎಲ್ಲ ಆಡಳಿತಾತ್ಮಕ ಹುದ್ದೆಗಳನ್ನು ತುಂಬುವುದು.

೪. ದೇಶದಲ್ಲಿ ಖಾಲಿ ಬಿದ್ದಿರುವ ೮ ಲಕ್ಷ ಶಿಕ್ಷಕರ ಶೀಘ್ರ ನೇಮಕಾತಿ. ಶಿಕ್ಷಕಿಯರ ಹಾಗೂ ಹಿಂದುಳಿದ ವರ್ಗಕ್ಕೆ ಸೇರಿದ ಶಿಕ್ಷಕರ ತುರ್ತು ನೇಮಕಾತಿ. ಯಾವುದೇ ತರಬೇತಿ ಪಡೆಯದ ೫.೪೮ ಲಕ್ಷ ಸೇವಾನಿರತ ಶಿಕ್ಷಕರಿಗೆ ಕೂಡಲೆ ವ್ಯಾಪಕ ತರಬೇತಿ ವ್ಯವಸ್ಥೆ ಮಾಡುವುದು.

೫. ಮುಂದಿನ ಮೂರ್‍ನಾಲ್ಕು ತಿಂಗಳುಗಳಲ್ಲಿ ಯಾವ ಶಾಲೆಯೂ ಏಕೋಪಾಧ್ಯಾಯ ಶಾಲೆ ಆಗಿರದಂತೆ ನೋಡಿಕೊಳ್ಳುವುದು.

೬. ಶಿಕ್ಷಕರ ಮೇಲಿನ ಶೈಕ್ಷಣಿಕೇತರ ಹೊರೆಯನ್ನು ಕಾಯ್ದೆಯ ಪ್ರಕಾರ ನಿವಾರಣೆ ಮಾಡುವುದು.

೭. ಶೇಕಡ ೨೫ರ ಮೀಸಲಾತಿಯನ್ನು ಎಲ್ಲ ಅನುದಾನರಹಿತ ಶಾಲೆಗಳಲ್ಲಿ ಕಟ್ಟುನಿಟ್ಟಾಗಿ ಅನುಷ್ಠಾನಕ್ಕೆ ತರುವುದು.

೮. ಖಾಸಗಿ ಶಾಲೆಗಳು ಶಿಕ್ಷಣ ಹಕ್ಕು ಕಾಯ್ದೆಯನ್ನು ಜಾರಿಗೆ ಕೊಡುವ ನಿಟ್ಟಿನಲ್ಲಿ ವಿಶೇಷ ಪರಿವೀಕ್ಷಣೆ ಹಾಗೂ ತನಿಖೆ ಅಳವಡಿಸುವುದು.

೯. ಸಾರ್ವಜನಿಕ ಖಾಸಗಿ ಭಾಗಿತ್ವ (ಪಿಪಿಪಿ)ದ ಹೆಸರಿನಲ್ಲಿ ಸರಕಾರಿ ಶಾಲೆಗಳನ್ನು ಖಾಸಗಿಯವರಿಗೆ ವಹಿಸಿಕೊಡದೆ ಸರಕಾರವೇ ಇಂಥ ಶಾಲೆಗಳ ಸುಧಾರಣೆಗೆ ತ್ವರಿತ ಕ್ರಮಗಳನ್ನು ಕೈಗೊಳ್ಳುವುದು.

೧೦. ಶಿಕ್ಷಣ ಹಕ್ಕು ಕಾಯ್ದೆ ಬಗ್ಗೆ ಸಾರ್ವಜನಿಕ ಜಾಗೃತಿ ಮೂಡಿಸುವ ಕಾರ್ಯಕ್ರಮಗಳನ್ನು, ಆಂದೋಳನಗಳನ್ನು ಹಮ್ಮಿಕೊಳ್ಳುವುದು.

೧೧. ಎಸ್‌ಡಿಎಂಸಿಗಳನ್ನು ಬಲಪಡಿಸಿ ಇವುಗಳ ಸದಸ್ಯರಿಗೆ ಕಾಯ್ದೆ ಬಗ್ಗೆ ಸರಿಯಾದ ತರಬೇತಿ ಒದಗಿಸುವುದು.

೧೨. ಪಂಚಾಯತ್ ಸದಸ್ಯರಿಗೆ ಕಾಯ್ದೆಯ ಬಗ್ಗೆ ಸರಿಯಾದ ಅರಿವು ಮೂಡಿಸಿ ಕಾಯ್ದೆಯ ಅನುಷ್ಠಾನದಲ್ಲಿ ಅವರ ಸಹಕಾರ ಪಡೆಯುವುದು.

೧೩. ಶಿಕ್ಷಣ ವ್ಯವಸ್ಥೆಯಿಂದ ಹೊರಗುಳಿದಿರುವ ದಲಿತರು, ಮುಸ್ಲಿಮರು, ಮಹಿಳೆಯರು ಹಾಗೂ ಭಿನ್ನಸಾಮರ್ಥ್ಯದ ಮಕ್ಕಳನ್ನು ಶಾಲಾ ವ್ಯಾಸಂಗದ ಪರಿಧಿಗೆ ತಂದು 'ಒಳಗೊಳ್ಳುವ ಶಿಕ್ಷಣ'ವನ್ನು ಸರಿಯಾದ ಅರ್ಥದಲ್ಲಿ ಜಾರಿಗೆ ತರುವುದು.

೧೪. ಗುಣ, ಪ್ರಮಾಣ, ಸಮತೆಯ ನೆಲೆಗಟ್ಟಿನಲ್ಲಿ ಗುಣಾತ್ಮಕ ಶಿಕ್ಷಣ ಪ್ರಸಾರದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು. ಶಾಲಾ ಮಕ್ಕಳ ಮೂಲಭೂತ ಕಲಿಕೆಯ ಕೌಶಲಗಳನ್ನು ಬಲಪಡಿಸುವ ನಿಟ್ಟಿನಲ್ಲಿ ವಿನೂತನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

೧೫. ಶಿಕ್ಷಣ ಹಕ್ಕು ಕಾಯ್ದೆ ಅನುಷ್ಠಾನಕ್ಕೆ ಅಗತ್ಯವಾದ ಹಣಕಾಸನ್ನು ಕೇಂದ್ರ ಹಾಗೂ ರಾಜ್ಯ ಸರಕಾರಗಳು ಧಾರಾಳವಾಗಿ ಒದಗಿಸುವುದು. ಯಾವುದೇ ಕಾರಣಕ್ಕೂ 'ನಿಧಿ ಕಡಿತ' ಆಗದಂತೆ ಮತ್ತು ಸಕಾಲದಲ್ಲಿ ನಿಧಿ ಬಿಡುಗಡೆ ಆಗುವಂತೆ ಹಾಗೂ ಬಿಡುಗಡೆಯಾದ ನಿಧಿ ಪೋಲಾಗದಂತೆ ನೋಡಿಕೊಳ್ಳುವುದು.

೧೬. ಶಿಕ್ಷಣ ಹಕ್ಕು ಕಾಯ್ದೆಯ ಅನುಷ್ಠಾನಕ್ಕೆ ಸಂಬಂಧಪಟ್ಟಂತೆ ಎಲ್ಲ ಮಾಹಿತಿಗಳೂ ಸರಕಾರಿ ಅಂತರ್ಜಾಲಗಳಲ್ಲಿ ಲಭ್ಯವಾಗುವಂತೆ ನೋಡಿಕೊಳ್ಳುವುದು. ಮಕ್ಕಳ ಹಕ್ಕುಗಳ ಪ್ರತಿಷ್ಠಾನಗಳು, ಪ್ರಗತಿಪರ ಸಂಘಟನೆಗಳು, ಸರಕಾರೇತರ ಸಂಘಟನೆಗಳು ಮುಂತಾದವುಗಳ ಸಹಯೋಗವನ್ನು ಅಧಿಕ ಪ್ರಮಾಣದಲ್ಲಿ ನಿರೀಕ್ಷಿಸಿ ಸಾಧ್ಯವಾದಷ್ಟು ತ್ವರಿತವಾಗಿ ಕಾಯ್ದೆ ಸರಿಯಾದ ಕ್ರಮದಲ್ಲಿ ಆಚರಣೆಗೆ ಬರುವಂತೆ ನೋಡಿಕೊಳ್ಳುವುದು.

೧೭. ಶಿಕ್ಷಣ ಹಕ್ಕು ಕಾಯ್ದೆಯ ಪರಿಣಾಮಕಾರಿ ಅನುಷ್ಠಾನದ ದೃಷ್ಟಿಯಿಂದ ಶಿಕ್ಷಣ ಇಲಾಖೆಗೆ ನ್ಯಾಯಾಂಗದ ಕೆಲ ಅಧಿಕಾರಗಳನ್ನು ವಹಿಸಿಕೊಡಬೇಕು.

೧೮. ಬಾಲ ಕಾರ್ಮಿಕ ಕಾನೂನು ಹಾಗೂ ಶಿಕ್ಷಣ ಹಕ್ಕು ಕಾಯ್ದೆ ನಡುವೆ ಹೊಂದಾಣಿಕೆ ಆಗುತ್ತಿಲ್ಲ. ಹೀಗಾಗಿ ಇವುಗಳ ನಡುವೆ ಸಮನ್ವಯ ಏರ್ಪಡಬೇಕು.

೧೯. ಮಾನವ ಸಂಪದಭಿವೃದ್ಧಿ ಸಚಿವಾಲಯ, ಕಾರ್ಮಿಕ ಕಲ್ಯಾಣ ಖಾತೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ, ಪಂಚಾಯತ್ ರಾಜ್ ಮಂತ್ರಾಲಯ, ಗ್ರಾಮೀಣಾಭಿವೃದ್ಧಿ ಇಲಾಖೆ – ಇವೆಲ್ಲ ಕಾಯ್ದೆಯ ಅನುಷ್ಠಾನಕ್ಕಾಗಿ ಜೊತೆಗೂಡಿ ದುಡಿಯಬೇಕು. 'ಸರ್ವಶಿಕ್ಷಾ ಅಭಿಯಾನ'ದ ಮಾದರಿಯಲ್ಲಿ ಶಿಕ್ಷಣ ಹಕ್ಕು ಕಾಯ್ದೆ ಅನುಷ್ಠಾನಕ್ಕೆ ಸಂಬಂಧಪಟ್ಟಂತೆ ಒಂದು ಪ್ರಾಧಿಕಾರದ ಅಡಿಯಲ್ಲಿ ಇವೆಲ್ಲ ಕೆಲಸ ಮಾಡುವ ವ್ಯವಸ್ಥೆ ಜಾರಿಗೆ ಬರಬೇಕು.

೨೦. ಹಣಕಾಸಿನ ವಿಚಾರದಲ್ಲಿ ಸರಕಾರ ಖಾಸಗಿಯವರತ್ತ ಮೊಗಮಾಡದೆ ಶಿಕ್ಷಣ ತೆರಿಗೆ ಹಾಗೂ ಇನ್ನಿತರ ಕರಗಳನ್ನು ಸರಿಯಾಗಿ ಸಂಗ್ರಹಿಸಿ ಶಿಕ್ಷಣದ ಬಾಬತ್ತಿಗಾಗಿಯೇ ಅದನ್ನು ವ್ಯಯಿಸಬೇಕು. ವೃತ್ತಿ ತೆರಿಗೆಯ ಹಾಗೆ ದೇಶದ ಪ್ರತಿಯೊಬ್ಬ ಉದ್ಯೋಗಿಯೂ ಶಿಕ್ಷಣ ಕಾಯ್ದೆ ಅನುಷ್ಠಾನಕ್ಕಾಗಿ ನಿಗದಿತ ಮೊತ್ತದ ತೆರಿಗೆ ನೀಡುವ ವ್ಯವಸ್ಥೆ ಜಾರಿಗೆ ಬರಬೇಕು.

ಖ್ಯಾತ ಶಿಕ್ಷಣ ಚಿಂತಕ ದಿ. ಜೆ. ಪಿ. ನಾಯ್ಕ್ ಅವರು ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣವನ್ನು 'ದೇಶಕ್ಕೆ ನೀಡಿದ ಸಾಕಾರಗೊಳಿಸಬೇಕಾದ ಭರವಸೆ' 'ಮಾಡಿ ಮುಗಿಯದ ವ್ಯವಹಾರ' ಎಂದು ಬಣ್ಣಿಸಿದ್ದಾರೆ. ನಮ್ಮ ಸಂವಿಧಾನ ಕರ್ತೃಗಳು ೧೯೫೦ರಲ್ಲಿ ದೇಶಕ್ಕೆ ನೀಡಿದ ಭರವಸೆ ಆರು ದಶಕಗಳೇ ಕಳೆದಿದ್ದರೂ ಇನ್ನೂ ಸಾಕಾರಗೊಂಡಿಲ್ಲ. ರಾಜಕೀಯ ಸಂಕಲ್ಪಬಲ ಹಾಗೂ ಸಾರ್ವಜನಿಕ ಇಚ್ಛಾಶಕ್ತಿಯ ಕೊರತೆಯಿಂದಾಗಿ ಈ ಕೆಲಸ ಇದುವರೆಗೆ ಸಾಧ್ಯವಾಗಿಲ್ಲ. ಆದರೆ ಶಿಕ್ಷಣ ಹಕ್ಕು ಕಾಯ್ದೆಯ ಅನುಷ್ಠಾನದಿಂದ ನಾಡಿಗೆ ನೀಡಿದ ಭರವಸೆಯನ್ನು ಬಹಳ ತಡವಾಗಿಯಾದರೂ ಸಾಕಾರಗೊಳಿಸುವ ಸಂದರ್ಭ ಒದಗಿದೆ. ಈಗಲಾದರೂ ಸರಕಾರ ಸಾಮಾಜಿಕ ನ್ಯಾಯದ ಹೆಸರಿನಲ್ಲಿ ಬಿಗಿಯಾದ ಕ್ರಮಗಳನ್ನು ಕೈಗೊಂಡು ದೇಶದ ಕನಸನ್ನು ನನಸುಗೊಳಿಸಬೇಕಾಗಿದೆ. ಒಂದು ಸುವರ್ಣಾವಕಾಶ ಈಗ ಸರಕಾರಗಳ ಮುಂದಿದೆ. ಈ ಅವಕಾಶವನ್ನು ಆಲಸ್ಯ, ಮಂದಬುದ್ಧಿ ಹಾಗೂ ಬೇಜವಾಬ್ದಾರಿತನದಿಂದ ಕೈ ಚೆಲ್ಲಿದರೆ ಶಿಕ್ಷಣದ ಸಾರ್ವತ್ರೀಕರಣ ಎಂದೆಂದೂ ಮುಗಿಯದ ದುರಂತಕತೆಯಾಗುತ್ತದೆ. ಈ ನೆಲದ ಮಕ್ಕಳ ವಿದ್ಯಾಭ್ಯಾಸ ಈ ಕಾಲದಲ್ಲೂ ಕಣ್ಣೀರಿನ ಕತೆಯಾಗಬೇಕೇ ? ಹಾಗೆ ಆಗುವುದಾದರೆ ನಾಗರಿಕ ಸಮಾಜಕ್ಕೆ ಏನು ಬೆಲೆ ? ನಾವು ಗಳಿಸಿದ ಸ್ವಾತಂತ್ರ್ಯ, ಅಂಬೇಡ್ಕರ್ ಅವರು ರೂಪಿಸಿದ ಸಂವಿಧಾನ, ಬಡರೈತರು, ಕೂಲಿ ಕಾರ್ಮಿಕರು ಮಾಡಿದ ಹೋರಾಟಗಳಿಗೆ ಯಾವ ಅರ್ಥವಿದೆ ?



**ಡಾ॥ ಮಹಾಬಲೇಶ್ವರ ರಾವ್**
ಪ್ರಾಚಾರ್ಯರು, ಡಾ॥ ಟಿ. ಎಂ. ಎ. ಪೈ
ಶಿಕ್ಷಣ ಕಾಲೇಜು
ಉಡುಪಿ – ೫೭೬ ೧೦೨

ಮಾರ್ಕ್ವೆಜ್ ಬಹುಶ್ರೇಷ್ಠ ಸಾಹಿತಿಯೆಂದು ಲೋಕವೆಲ್ಲ ಪ್ರಶಂಸಿಸುತ್ತಿದ್ದರೂ ಅವನು ಕೇವಲ ಸಾಹಿತಿಯಾಗಿರಲಿಲ್ಲ. ಅವನು ತನ್ನ ಸುತ್ತಲಿನ ಸಮಾಜದ ಆಗುಹೋಗುಗಳಲ್ಲಿ ಸದಾ ಜಾಗೃತನಾಗಿದ್ದ ಒಬ್ಬ ಪ್ರಜ್ಞಾವಂತ ನಾಗರಿಕನೂ ಹೌದು. ಹೇಳಿ ಕೇಳಿ ಅವನೊಬ್ಬ ಬಹುದೊಡ್ಡ ಸಮಾಜವಾದಿ... ೧೯೫೯ರಲ್ಲಿ ಅವನು ಫಿಡೆಲ್ ಕ್ಯಾಸ್ಟ್ರೋ ಆಹ್ವಾನದಂತೆ ಕ್ಯೂಬಾಕ್ಕೆ ಭೇಟಿ ಇತ್ತ. ಸ್ವಲ್ಪಕಾಲ ಅಲ್ಲಿನ ನಿವಾಸಿಯೂ ಆಗಿದ್ದ. ಕೊಲಂಬಿಯಾದಲ್ಲಿ ಅವ್ಯಾಹತವಾಗಿ ನಡೆಯುತ್ತಿದ್ದ ಕಾನೂನುಬಾಹಿರ ಕೃತ್ಯಗಳನ್ನು ನಿರುದ್ವಿಗ್ನವಾಗಿ ವರದಿಮಾಡಲು ಹೊಸ ಪತ್ರಿಕೋದ್ಯಮವೆಂಬ ಸಂಸ್ಥೆ ಸ್ಥಾಪಿಸಿದ. ಮಾದಕದ್ರವ್ಯಗಳ ನಿರಂಕುಶ ಪ್ರಭು ಎಸ್ಕೊಬಾರ್‌ನ ಅಪಕೃತ್ಯಗಳನ್ನು ವರದಿಮಾಡಿ ಒಂದು ಸುದೀರ್ಘ ಗ್ರಂಥವನ್ನೇ ಬರೆದ. ಅವನ ಹಾಗೂ ಕ್ಯಾಸ್ಟ್ರೋವಿನ ನಡುವಣ ಸ್ನೇಹ ಸಂಬಂಧಗಳು ಚಿರಂತನವಾಗಿ ಉಳಿದಿದ್ದವು.

# ಮಾಂತ್ರಿಕ ವಾಸ್ತವಿಕತೆಯ ಆದ್ಯ ಪ್ರವರ್ತಕ ಮಾರ್ಕ್ವೆಜ್

ಎಚ್. ಕೆ. ರಾಮಚಂದ್ರಮೂರ್ತಿ



ದಿನಾಂಕ ೧೭.೦೪.೨೦೧೪ರಂದು ಮೆಕ್ಸಿಕೊನಲ್ಲಿ ತೀರಿಕೊಂಡ ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವೆಜ್ ಕೊಲಂಬಿಯ ದೇಶ (ಲ್ಯಾಟಿನ್ ಅಮೆರಿಕ)ದ ಜಗದ್ವಿಖ್ಯಾತ ಸಾಹಿತಿ, ಪ್ರಸಿದ್ಧ ಪತ್ರಿಕಾ ವರದಿಗಾರ ಹಾಗೂ ಚಿಂತನಶೀಲ ಬುದ್ಧಿಜೀವಿ. ಆತನ 'ಏಕಾಂತದಲ್ಲಿ ನೂರು ವರ್ಷ' ಎಂಬ ಕೃತಿ ಅವನಿಗೆ ೧೯೮೨ರ ನೊಬೆಲ್ ಪ್ರಶಸ್ತಿ ತಂದುಕೊಟ್ಟ ಮಹೋನ್ನತ ಕಾದಂಬರಿ. ಭಾರತೀಯರೂ ಸೇರಿದಂತೆ ಜಗತ್ತಿನ ನಾನಾ ದೇಶ–ಭಾಷೆಗಳ ಸಾಹಿತಿಗಳು, ಓದುಗರು ಮಾರ್ಕ್ವೆಜ್‌ನ ಅಸದೃಶ ಕಥನ ಕಲೆ, ರಚನಾ ತಂತ್ರ, ವಿಶಿಷ್ಟ ಶೈಲಿಯ ವೈಖರಿ ಹೇಗೆ ತಮ್ಮ ಮೇಲೆ ಅಗಾಧ ಪ್ರಭಾವ ಮೂಡಿಸಿದೆಯೆಂದು ಘೋಷಿಸುತ್ತಿದ್ದಾರೆ.

ಮಾರ್ಕ್ವೆಜ್ ೧೯೨೭ರ ಮಾರ್ಚ್ ೬ರಂದು ಕೊಲಂಬಿಯಾದ ಕ್ಯಾರಿಬಿಯನ್ ತೀರದ ಅರಕಟಕ ಎಂಬ ಹಳ್ಳಿಯಲ್ಲಿ ಹುಟ್ಟಿದ. ೧೫ ಮಕ್ಕಳಿಂದ ತುಂಬಿದ ದೊಡ್ಡ ಕುಟುಂಬದ ಹಿರಿಯ ಮಗ ಅವನು. ಅವನ ತಾತ ನಿವೃತ್ತ ಸೇನಾಧಿಕಾರಿ. ಮಾರ್ಕ್ವೆಜ್‌ನ ಅಜ್ಜಿ–ತಾತ ಇಬ್ಬರೂ ಸಾವಿರಾರು ಕಥೆಗಳ ನೆನಪುಗಳ ಅಕ್ಷಯ ನಿಧಿಗಳು. ಆ ಕಾರಣ ಮಾರ್ಕ್ವೆಜ್ ಸಣ್ಣಂದಿನಿಂದಲೇ ಕಥೆ ಕೇಳುವ, ಹೇಳುವ ಪರಿಪಾಟ ಬೆಳೆಸಿಕೊಂಡಿದ್ದ. ತನ್ನ ೧೦ನೆಯ ವಯಸ್ಸಿನಿಂದಲೇ ತಾತನ ಮನೆಯಲ್ಲಿ ಬೆಳೆದ. ೧೯೪೭ರಲ್ಲಿ ಬೊಗೋಟಾ ರಾಷ್ಟ್ರೀಯ ವಿಶ್ವವಿದ್ಯಾನಿಲಯದಲ್ಲಿ ಕಾನೂನು ನ್ಯಾಯಶಾಸ್ತ್ರ ಕಲಿಯುತ್ತಿದ್ದ. ಆದರೆ ಅಲ್ಲಿನ ದಂಗೆ ಗಲಭೆಗಳಿಂದಾಗಿ ವಿಶ್ವವಿದ್ಯಾನಿಲಯವನ್ನು ಮುಚ್ಚಿದಾಗ ಹುಟ್ಟಾ ಪ್ರತಿಭಾವಂತ ಮಾರ್ಕ್ವೆಜ್ ಪತ್ರಿಕಾ ವರದಿಗಾರನ ಕೆಲಸಕ್ಕೆ ಸೇರಿ ಖ್ಯಾತಿವಂತನಾದ. ೧೯೪೭ರಲ್ಲಿ ವಿದ್ಯಾರ್ಥಿ ದೆಶೆಯಲ್ಲೇ ಎರಡು ಶ್ರೇಷ್ಠ ದರ್ಜೆಯ ಕಥೆಗಳನ್ನು ಬರೆದು ವಿದ್ವದ್‌ಲೋಕದ ಕಣ್ಣು ಸೆಳೆದ ಅವನು ೧೯೫೮ರಲ್ಲಿ ಮರ್ಸಿಡಿಸ್ ಬಾರ್ಕಾ ಎಂಬಾಕೆಯನ್ನು ಮದುವೆಯಾದ. ಅವನದು ಜೀವನಪರ್ಯಂತದ ದಾಂಪತ್ಯ ಜೀವನ. ಅವನ ಇಬ್ಬರು ಮಕ್ಕಳು ಸುಶಿಕ್ಷಿತರಾಗಿ ಒಳ್ಳೆಯ ಉದ್ಯೋಗಗಳಲ್ಲಿದ್ದಾರೆ. ೧೯೪೭ರಿಂದ ೨೦೦೨ರವರೆಗೆ ಅವನು ರಚಿಸಿದ ಕಥೆ–ಕಾದಂಬರಿ–ಪತ್ರಿಕಾ ವರದಿಗಳು ಲಕ್ಷಾಂತರ ಓದುಗರನ್ನು ಮೂಕವಿಸ್ಮಿತಗೊಳಿಸುತ್ತ ಬಂದಿವೆ. ಅವನ ಕೃತಿಗಳು ಮಿಲಿಯಗಟ್ಟಲೆ ಮಾರಾಟವಾಗುತ್ತಿವೆಯೆಂದು ಹೇಳಲಾಗಿದೆ. ಅವನ ಮುಖ್ಯ ಕೃತಿಗಳೆಂದರೆ : 'ಒನ್ ಹಂಡ್ರಡ್ ಇಯರ್ಸ್ ಆಫ್ ಸಾಲಿಟ್ಯೂಡ್' (೧೯೬೭), 'ಲೀಫ್ ಸ್ಟಾರಮ್' (೧೯೪೭), 'ದಿ ಆಟಮ್ ಆಫ್ ದಿ ಪೇಟ್ರಿಯಾರ್ಕ್' (೧೯೭೫), 'ಎ ಕ್ರಾನಿಕಲ್ ಆಫ್ ಎ ಡೆತ್ ಫೋರ್‌ಟೋಲ್ಡ್' (೧೯೮೧), 'ಲವ್ ಇನ್ ದಿ ಟೈಮ್ ಆಫ್ ಕಾಲರಾ' (೧೯೮೫), 'ದಿ ಜನರಲ್ ಇನ್ ದಿ ಲ್ಯಾಬೆರಿಂಥ್' (೧೯೮೯), 'ಲವ್ ಅಂಡ್ ಅದರ್ ಡೆಮನ್ಸ್' (೧೯೯೪), 'ನ್ಯೂಸ್ ಆಫ್ ಎ ಕಿಡ್‌ನ್ಯಾಪಿಂಗ್' (ವರದಿ ೧೯೯೪), 'ಸ್ಟೋರಿ ಆಫ್ ಎ ಷಿಪ್ ರೆಕ್ಡ್ ಸೈಲರ್' (ವರದಿ ೧೯೯೪). ಅವನು ಇತ್ತೀಚೆಗೆ ಬರೆಯಲು ಪ್ರಾರಂಭಿಸಿದ್ದ ಅವನ ಆತ್ಮಕಥೆ ಅಸಂಪೂರ್ಣವಾಗಿ ಉಳಿಯಿತು. ತನ್ನ ಕಥೆ–ಕಾದಂಬರಿಗಳಲ್ಲಿ ಅವನು ಅಳವಡಿಸಿದ 'ಮ್ಯಾಜಿಕ್ ರಿಯಲಿಸಮ್' ('ಮಾಂತ್ರಿಕ ವಾಸ್ತವಿಕತೆ': ಇದು ಭಾರತೀಯರಿಗೆ ಅಪರಿಚಿತವೇನಲ್ಲ. ಮಾಯ, ಮಾಟ, ದೆವ್ವ ಭೂತಾರಾಧನೆಗಳ ಸಂಪ್ರದಾಯವನ್ನು ಈಗಲೂ ಉಳಿಸಿಕೊಂಡು ಬಂದಿರುವ, ಅದರಲ್ಲೂ ಗ್ರಾಮೀಣ ಜನರಿಗೆ ಇದು ನಿತ್ಯಜೀವನದ ಹಾಸುಹೊಕ್ಕಾಗಿರುವ ಪ್ರಾಚೀನತೆಯ ಪಳೆಯುಳಿಕೆಗಳು. ಆಧುನಿಕ ಸಾಹಿತಿಗಳು ಇಂಥ ನಡೆಯಲಸಾಧ್ಯ, ಪ್ರಕೃತ್ಯಾತೀತ ಸಂಗತಿಗಳನ್ನು, ವ್ಯಕ್ತಿಗಳನ್ನು ವಾಸ್ತವಿಕ ನಿರೂಪಣೆಯಲ್ಲಿ ಕನಸಿನ, ಫ್ಯಾಂಟೆಸಿಯ, ಸರ್ರಿಯಲಿಸ್ಟ್ ತಂತ್ರದ ಜತೆ ಸೇರಿಸುವ ನೂತನ ತಂತ್ರ – ಅದೇ ಮ್ಯಾಜಿಕ್ ರಿಯಲಿಸಂ.) ಇದನ್ನು ಸಾಹಿತ್ಯದ ಇತಿಹಾಸದಲ್ಲಿ ಒಂದು ನೂತನ,

ಕ್ರಾಂತಿಕಾರಕ ರಚನಾ ತಂತ್ರವೆಂದು ಜಗತ್ತಿನ ವಿಮರ್ಶಕರು ಹಾಡಿ ಹೊಗಳಿದ್ದಾರೆ, ಹಲವರು ಅದರಿಂದ ನೇರವಾಗಿ ಪ್ರಭಾವಿತರಾಗಿದ್ದಾರೆ.

'ಒನ್ ಹಂಡ್ರಡ್ ಇಯರ್ಸ್ ಆಫ್ ಸಾಲಿಟ್ಯೂಡ್' ಒಂದು ಮೇರು ಸದೃಶ ಕೃತಿ. ಕಾದಂಬರಿ ರೂಪದಲ್ಲಿ ರಚಿತವಾಗಿದ್ದರೂ ಅದೊಂದು ಗದ್ಯಶೈಲಿಯ ಎಪಿಕ್, 'ಪುರಾಣ ಕಥೆ', ಲ್ಯಾಟಿನ್ ಅಮೆರಿಕದ ಸಾಂಸ್ಕೃತಿಕ ಇತಿಹಾಸ. ಕರ್ನಲ್ ಅರಿಲಿಯಾನೆ ಬ್ಯುಂಡಿಯೋ ಎಂಬುವವನ ಮುಖಂಡತ್ವದಲ್ಲಿ ಕೆಲವಾರು ಸಾಹಸಿಗಳು ಲ್ಯಾಟಿನ್ ಅಮೆರಿಕದ ದುರ್ಗಮ ಗೊಂಡಾರಣ್ಯದ ನಡುವೆ, ಸಿಯರಾ ನಿವೇಡ ಪರ್ವತದ ತಪ್ಪಲಿನಲ್ಲಿ ಮಕೊಂಡೋ ಎಂಬ ಊರನ್ನು ಸ್ಥಾಪಿಸುತ್ತಾರೆ. ಇದು ಅವನ ತವರೂರಿನ ಕಾಲ್ಪನಿಕ ರೂಪಾಂತರ. ಮಾರ್ಕ್ವೆಜ಼್‌ನ ಎಲ್ಲಾ ಕಥೆ – ಕಾದಂಬರಿಗಳಿಗೂ ಈ ಪ್ರದೇಶವೇ ನೆಲೆಗಟ್ಟು – ಹಾರ್ಡಿಯ ವೆಸೆಕ್ಸ್, ಫಾಕ್ನರ್‌ನ ಯೊಕ್ನಪಟಾವಗಳಿದ್ದಂತೆ.

ಈ ಕಾಲ್ಪನಿಕ ಮಕೊಂಡೊ ಒಂದು ದೊಡ್ಡ ಗ್ರಾಮ ಸಮುದಾಯವಾಗಿ ಬೆಳೆದು ಒಂದು ಶತಮಾನ ಕಾಲ ಚಿತ್ರವಿಚಿತ್ರ ಅದ್ಭುತ, ಸಹಜ–ಅಸಹಜ, ಅಘಟಿತ–ಘಟಿತಗಳು, ಅಬ್‌ನಾರ್ಮಲ್, ಲೌಕಿಕ–ಅಲೌಕಿಕ ಸಂಗತಿಗಳಿಗೆ, ಘಟನಾವಳಿಗಳಿಗೆ, ವ್ಯಕ್ತಿವಿಶೇಷಗಳಿಗೆ ತವರಾಗುತ್ತದೆ. ಮುನ್ನೂರು ಪುಟಗಳ ಈ ಅದ್ಭುತ ರಮ್ಯ ಕಾದಂಬರಿ ಪ್ರಾದೇಶಿಕ ಪುರಾಣಕಥೆಯಂತೆ ಹಬ್ಬಿ ಹರಡಿಕೊಳ್ಳುತ್ತದೆ. ಈ ಕಾದಂಬರಿ ನೀಡುವ ನವರಸದೌತಣವನ್ನು ನಾವು ಓದಿಯೇ ಅನುಭವಿಸಬೇಕು. ಇದನ್ನು ಸಂಕ್ಷೇಪಿಸುವ ಪ್ರಯತ್ನ ಹೇಗೂ ವಿಫಲವಾದೀತು.

ಆದರೆ ಮಾರ್ಕ್ವೆಜ಼್‌ನ ಸರ್ವತೋಮುಖ ಕಥನ ಕಲೆ ಎಷ್ಟು ಅನನ್ಯವೂ ಮೌಲಿಕವೂ ಆದುದೆಂಬುದಕ್ಕೆ ಉದಾಹರಣೆಯಾಗಿ ಅವನು ೧೯೮೫ರಲ್ಲಿ ಬರೆದ 'ಲವ್ ಇನ್ ದಿ ಟೈಮ್ ಆಫ್ ಕಾಲರಾ' ಕಾದಂಬರಿಯ ಕೆಲವು ಕಥಾಸೆಳಕುಗಳನ್ನು ಅಡಕವಾಗಿ ಹೀಗೆ ಸಂಗ್ರಹಿಸಬಹುದು :

'ಕಾಲರಾ ಉಪದ್ರವ ಕಾಲದಲ್ಲಿನ ಪ್ರೇಮಕಥೆ' ಕೇವಲ ಪ್ರೇಮಕಥೆಯಲ್ಲ; ವಿಚಿತ್ರ–ಅಸಂಗತ ಕಾಮ–ಪ್ರೇಮಗಳ ಮಹಾಚರಿತ್ರೆ. ಹುಡುಗತನದಲ್ಲಿ ಪ್ರೀತಿಸಿದ ಹೆಣ್ಣಿಗಾಗಿ ಐವತ್ತು ವರ್ಷಗಳಷ್ಟು ದೀರ್ಘಕಾಲ ಕಾದು, ಹಪಹಪಿಸಿ, ವಿಪನ್ನ ಸ್ಥಿತಿಯಲ್ಲಿ ಬದುಕೆಲ್ಲವನ್ನು ಸವೆಸಿ, ವೃದ್ಧಾಪ್ಯದಲ್ಲಿ ಅವಳನ್ನು ಕೂಡುವ ಪ್ರೇಮಿಯೊಬ್ಬನ ಕಥೆ.

ಪ್ರೀತಿಯ ಹೆಣ್ಣಿಗಾಗಿ ತಾಳ್ಮೆಯಿಂದ ಕನವರಿಸಿ ಕಾದು, ಜೀವನದ ಏರಿಳಿತಗಳನ್ನು ದಾಟಿ, ಕೊನೆಯಲ್ಲಿ ಸಾರ್ಥಕ್ಯದ ಗುರಿ ತಲುಪುವ ರಮ್ಯಪ್ರೇಮಿಗಳ ಕಥೆ ಹೊಸದೇನೂ ಅಲ್ಲ... ಆದರೆ ಮಾರ್ಕ್ವೆಜ಼್ ಹೇಳುವ ಕಥೆಯಲ್ಲಿ ಅಂಥ ರಮ್ಯಪ್ರೇಮದ ಅತಿ ಭಾವುಕತೆಯಾಗಲಿ ಆದರ್ಶದ ವೈಭವೀಕರಣವಾಗಲಿ ಇಲ್ಲ. ಒಗರಾದ ವ್ಯಂಗ್ಯ, ವಿನೋದ ಬೆರೆತ ನಿರುದ್ವಿಗ್ನ ನಿರೂಪಣೆ – ಇವು ಗಂಭೀರ ಚಿಂತನೆಗೆ ಎಡೆಮಾಡಿಕೊಡುತ್ತವೆ. ತನ್ನ ಜೀವನದ ನೂರೆಂಟು ನಿರಂತರ, ನಿರರ್ಥಕ ಕ್ರಿಯೆಗಳ ಮೂಲಕ ತನ್ನ ವ್ಯಕ್ತಿತ್ವವನ್ನು ಗುರುತಿಸಲಾರದೆ ಹೆಣಗುವ ಒಬ್ಬ ಸಾಮಾನ್ಯ ಮನುಷ್ಯನಿಗೆ ವ್ಯಕ್ತಿತ್ವದ ಗ್ರಹಿಕೆ ಬರಿಯ ಬಿಸಿಲ್ಗುದುರೆಯಾಗಿಯೇ ಉಳಿಯುವ ವಿಪರ್ಯಾಸವನ್ನು ಈ ಕಾದಂಬರಿ ಸೂಕ್ಷ್ಮಾತಿಸೂಕ್ಷ್ಮವಾಗಿ ಚಿತ್ರಿಸುತ್ತದೆ.




ಹಾಗೆಂದರೆ, ಮಾರ್ಕ್ವೆಜ಼್ ಕೇವಲ ತತ್ತ್ವಮಥನಕ್ಕಾಗಿ ಕಥೆ ಹೇಳುತ್ತಾನೆಂದು ಅರ್ಥವಲ್ಲ. ರಸಭರಿತ ಕಥಾವಸ್ತುವುಳ್ಳ ಈ ಕಾದಂಬರಿ ಚಿತ್ರ–ವಿಚಿತ್ರ, ಅನೂಹ್ಯ ಅನಿರೀಕ್ಷಿತ, ಕಕ್ಕಾಬಿಕ್ಕಿಗೊಳಿಸುವ ಘಟನೆಗಳಿಂದ ಕಿಕ್ಕಿರಿದು ತುಂಬಿದೆ, ಇದನ್ನೇ ಮಾಂತ್ರಿಕ ವಾಸ್ತವಿಕತೆ ಎನ್ನಲಾಗಿದ್ದು ಈಗೀಗ ಕಥೆಗಾರರಿಗೆ ಇದೊಂದು ಫ್ಯಾಷನ್ ಆಗುತ್ತಿದೆ. ಹೆಜ್ಜೆ ಹೆಜ್ಜೆಗೂ ಕೌತುಕ ಮೂಡಿಸುವಂತೆ, ಬೆರಗು ಹುಟ್ಟಿಸುವಂತೆ ಸೃಷ್ಟಿಯಾಗುವ ಪ್ರಸಂಗಗಳು, ತಿರುವುಗಳು ಕಥೆಯನ್ನು ಒಂದು ರಸ ಸ್ಥಾನದಿಂದ ಇನ್ನೊಂದಕ್ಕೆ ಒಯ್ಯುತ್ತಾ ಕಾದಂಬರಿಯನ್ನು ಒಂದು ಮಹಾಕಾವ್ಯದಂತೆ ಬೆಳೆಸುತ್ತವೆ. ಕಥಾನಿರೂಪಣೆಯಲ್ಲಿ 'ಅಂದು–ಇಂದು–ಮುಂದು' ಎಂಬ ಕಾಲಾನುಕ್ರಮ ತಪ್ಪಿಸಿ ಪಾತ್ರಗಳ ನೆನಪಿನ ತೂಗುಯ್ಯಾಲೆಯ ಮೂಲಕವೇ ಅದು ಚಲಿಸುವುದರಿಂದ, ಕಥೆ ಒಂದೇ ಮಗ್ಗುಲಾಗಿ ಬೆಳೆಯುವುದರ ಬದಲು ಸಂಕೀರ್ಣವಾಗಿ ಹಬ್ಬಿಕೊಳ್ಳುತ್ತದೆ.

ಕಾದಂಬರಿಯ ಹೆಸರು ಧ್ವನಿಪೂರ್ಣವಾಗಿದ್ದು ಫ್ಲಾರೆಂಟಿನೊ ಅರಿಜ, ಕಥಾನಾಯಕಿ ಫರ್ಮಿನಾ ಡಾಜಾ ಮತ್ತು ಡಾ॥ ಜೂವಿನಾಲ್ ಅರ್ಬಿನೊ – ಈ ಮೂವರ ನಡುವಣ ಜಟಿಲ ಸಂಬಂಧಗಳ ಕಥೆ ಹಲವಾರು ದಶಕಗಳ ಹಿಂದಿನ ಕೆರೀಬಿಯನ್ ಕರಾವಳಿಯ ವಾಸ್ತವಿಕ ಜೀವನದ ಹಿನ್ನೆಲೆಯಲ್ಲಿ ಖಂಡಖಂಡವಾಗಿ ರೂಪುಗೊಳ್ಳುತ್ತದೆ.

ಕೊಳಚೆ ತುಂಬಿ, ರೋಗರುಜಿನಗಳಿಂದ ಬಿರಿಯುವ ಹಿನ್ನೀರ ತಾಣಗಳು, ಬಿಸಿಲ ಬೇಗೆಯಲ್ಲಿ ಜಿನುಗುವ ಜೌಗು ಹರಹುಗಳು, ಅಂತರ್ಯುದ್ಧದ ಗೊಂದಲಗಳು, ಉಪದ್ರವ ಕಾಲದ ನದಿಯಲ್ಲಿ ಮೇಲಿಂದ ಮೇಲೆ ತೇಲಿಬರುವ ಹೆಣಗಳು, ಒಮ್ಮೆಲೇ ಭೇದಿಸಿ ಕಡಲುಕ್ಕಿಸುವ ಚಂಡಮಾರುತಗಳು, ಧಾರಾಕಾರವಾಗಿ ಸುರಿಯುವ ಮಳೆ, ನಡುನಡುವೆ ಬರುವ ಪ್ರೇಮಪ್ರಸಂಗದ ಹತ್ತುಹಲವು ಎಳೆಗಳು – ಇವು ಪಾತ್ರಗಳ ನೆನಪುಗಳಾಗಿ ಹರಿದು ಬಂದು ಚಲನಚಿತ್ರದ 'ಕ್ಲೋಸ್ ಅಪ್'ಗಳಂತೆ ಸುತ್ತುಗಟ್ಟುತ್ತವೆ; ಆದ್ದರಿಂದ ಕಥೆಯನ್ನು ಕಾಲಾನುಕ್ರಮದಲ್ಲಿ ಸಂಕ್ಷೇಪಿಸುವುದು ಅಸಾಧ್ಯ.

ವಯೋವೃದ್ಧನಾದ ಡಾ॥ ಜೂವಿನಾಲ್ ಅರ್ಬಿನೊ ವಸಾಹತುಶಾಹಿ ಕಾಲದ ಲಾಮಾಂಕಾದ ಪ್ರಸಿದ್ಧ ವೈದ್ಯ, ಪ್ರತಿಷ್ಠಿತ ಶ್ರೀಮಂತ. ಅವನ ಇಬ್ಬರು ಬೆಳೆದ ಮಕ್ಕಳು ಬೇರೆ ಊರಲ್ಲಿ ನೆಲೆಸಿದ್ದಾರೆ. ಅಂದು ಪೆಂಟಿಕಾಸ್ಟ್ ಭಾನುವಾರ. ಅವನಿಗೆ ಪರಿಚಯವಿರುವ, ಆ ಪ್ರದೇಶದ ಜನ ಪೂಜ್ಯನೆಂದು ಗೌರವಿಸುತ್ತಿದ್ದ ಅಂಗವಿಕಲ ನಿರಾಶ್ರಿತ ಜೆರಿಮಿಯಾ ಡ ಸೈಂಟ್ ಅಮರ್‌ನ ಶವಪರೀಕ್ಷೆಗಾಗಿ ಡಾಕ್ಟರ್ ಆ ದಿನ ಅವನ ಮನೆಗೆ ಬರುತ್ತಾನೆ. ಫೋಟೋಗ್ರಾಫರ್ ಆಗಿದ್ದ ಜೆರಿಮಿಯಾ ವೃದ್ಧಾಪ್ಯಕ್ಕೆ ಹೆದರಿ ಆತ್ಮಹತ್ಯೆ ಮಾಡಿಕೊಂಡಿದ್ದಾನೆ. ಅವನು ಅರ್ಬಿನೋಗೆ ಬರೆದಿಟ್ಟ ರಹಸ್ಯ ಪತ್ರದಿಂದ ಅವನ ಒಳ ಬದುಕಿನ ಇನ್ನೊಂದು ಮುಖ ತೆರೆದುಕೊಳ್ಳುತ್ತದೆ. ಕರಿಯ ಹೆಣ್ಣೊಬ್ಬಳ ಜತೆ ನಡೆಸಿದ ಕಾಮುಕ ಜೀವನದ ವಿವರಗಳು ಅರ್ಬಿನೋಗೆ ತಿಳಿದು ಅವನು ಬೆರಗಾಗುತ್ತಾನೆ.

ಅವನ ಶವಸಂಸ್ಕಾರಕ್ಕೆ ವ್ಯವಸ್ಥೆ ಮಾಡಿ ಹಿಂದಿರುಗುವ ಅರ್ಬಿನೊ ತನ್ನ ಪತ್ನಿ ಫರ್ಮಿನಾ ಡಾಜಾಳೊಂದಿಗೆ ಡಾ॥ ಆಲಿವೆಲ್ಲ ಎಂಬ ಸ್ನೇಹಿತನ ಮದುವೆಯ ರಜತ ವಾರ್ಷಿಕೋತ್ಸವ ಸಂತೋಷಕೂಟಕ್ಕೆ ಹೊರಡುತ್ತಾನೆ. ಇದ್ದಕ್ಕಿದ್ದಂತೆ ಭಯಂಕರ ಬಿರುಗಾಳಿಯೆದ್ದು ಮಳೆ ಸುರಿದು ಅಲ್ಲೋಲಕಲ್ಲೋಲವಾಗುತ್ತದೆ. ಸಂತೋಷಕೂಟ ಹಾಳಾಗುತ್ತದೆ.

ಏತನ್ಮಧ್ಯೆ ಹೊರಗೆ ಹೋಗಿದ್ದ ಡಾ॥ ಅರ್ಬಿನೊ ಮನೆಗೆ ಹಿಂತಿರುಗಿದಾಗ ಮನೆ ಸರ್ವನಾಶಕ್ಕೀಡಾಗಿದೆ. ತಪ್ಪಿಸಿಕೊಂಡು ಹಾರಿಹೋಗಿದ್ದ, ಫರ್ಮಿನಾಳ ಮುದ್ದಿನ ಗಿಣಿ ಹಿಡಿಯಲು ಬಂದು ಸೋತು ಹಿಂತಿರುಗಿದ್ದ ಅಗ್ನಿಶಾಮಕ ದಳದವರು ಸುಂದರ ಸುಸಜ್ಜಿತ ಮನೆಯನ್ನು ಹಾಳುಗೆಡವಿದ್ದಾರೆ. ಹಲವಾರು ಭಾಷೆಗಳನ್ನು ಕಲಿತಿದ್ದ ಸೋಜಿಗದ ಆ ಗಿಣಿ ಒಂದು ಅತ್ಯಮೂಲ್ಯ ಪಕ್ಷಿವಿಶೇಷ... ತೆಪ್ಪಗಿರಲಾರದೆ ಡಾ॥ ಅರ್ಬಿನೊ ಆ ಗಿಣಿ ಹಿಡಿಯಲು ಏಣಿಯ ಮೇಲೆ ಮರ ಹತ್ತಲು ಹೋಗಿ ಕೆಳಗುರುಳಿ ಸಾಯುತ್ತಾನೆ.

ಗಣ್ಯ ನಾಗರಿಕನೆನಿಸಿಕೊಂಡಿದ್ದ ಅವನ ಶವಸಂಸ್ಕಾರದ ದಿನ ಊರಿಗೆ ಊರೇ ಸೇರುತ್ತದೆ. ದಿನದ ಕೊನೆಯಲ್ಲಿ ಅವನ ವೃದ್ಧ ಪತ್ನಿ ಫರ್ಮಿನಾ ಅವಳ ಸಹಜ ಗಾಂಭೀರ್ಯ, ಸಂಯಮಗಳಿಂದ

ನಡೆದುಕೊಂಡು ಅತಿಥಿಗಳನ್ನು ಬೀಳ್ಕೊಡುವಳು.

ಇದ್ದಕ್ಕಿದ್ದಂತೆ ಡ್ರಾಯಿಂಗ್ ರೂಮಿನಲ್ಲಿ ಏಕಾಕಿಯಾಗಿ ನಿಂತಿದ್ದ ಇಳಿವಯಸ್ಸಿನ ಫ್ಲಾರೆಂಟಿನೊ ಕಾಣಿಸಿಕೊಳ್ಳುತ್ತಾನೆ. ಅವಳನ್ನು ಐವತ್ತು ವರ್ಷಗಳ ಹಿಂದೆ ಪ್ರೀತಿಸಿ ಅವಳಿಗಾಗಿ ಇಷ್ಟು ಕಾಲವೂ ಕಾಯುತ್ತಿದ್ದ ಭಗ್ನಪ್ರೇಮಿ ಅವನು. "ಈಗಲಾದರೂ ನನ್ನನ್ನು ಸ್ವೀಕರಿಸು" ಎಂದು ಅಂಗಲಾಚಿ ಬೇಡುವ ಅವನಿಗೆ ಫರ್ಮಿನಾ, "ನಿನಗೆ ಇನ್ನು ಉಳಿದಿರಬಹುದಾದ ಜೀವಿತಕಾಲದಲ್ಲಿ ಎಂದಿಗೂ ನನಗೆ ನಿನ್ನ ಮುಖ ತೋರಿಸಬೇಡ. ನಿನಗೆ ಇನ್ನು ಅಂಥ ಕೆಲವೇ ದಿನಗಳು ಉಳಿದಿರಬಹುದು. ನಡೆ ಆಚೆ" ಎಂದು ಬೈದು ಅವನನ್ನು ಆಚೆಗೆ ಅಟ್ಟುತ್ತಾಳೆ.

ನಿರಾಶ್ರಿತ ಜೆರಿಮಿಯಾನ ವಿಕ್ಷಿಪ್ತ ಜೀವನದ ಅಂತರಂಗ ಶೋಧನೆಯಿಂದ ಪ್ರಾರಂಭವಾದ ಕಥೆ ಎರಡನೆಯ ಭಾಗದಲ್ಲಿ ಫ್ಲಾರೆಂಟಿನೊ–ಫರ್ಮಿನಾ–ಅರ್ಬಿನೊ ಸಂಬಂಧಗಳ ಅನ್ವೇಷಣೆಯತ್ತ ತಿರುಗುತ್ತದೆ.

ಫ್ಲಾರೆಂಟಿನೊ ಅರಿಜನನ್ನು ೫೧ ವರ್ಷ, ೯ ತಿಂಗಳು, ೪ ದಿನಗಳ ಹಿಂದೆ ಫರ್ಮಿನಾ ಹೀಗೆಯೇ ತಿರಸ್ಕರಿಸಿದ್ದಳು. ಟ್ರಾನ್ಸಿಟೊ ಎಂಬವಳಿಗೆ ವಿವಾಹೇತರ ಸಂಬಂಧದಲ್ಲಿ ಹುಟ್ಟಿದ್ದ ಮಗ ಅವನು. ತಂದೆ ಇಲ್ಲದ ಅವನನ್ನು ತಾಯಿ ಪ್ರೀತಿಯಿಂದ ಸಾಕಿ ಬೆಳೆಸಿದಳು. ಅವನ ತಂದೆಯ ಸೋದರ ನಡಿಯಾನದ ಕಂಪೆನಿಯ ಮಾಲೀಕ. ಅವನು ಫ್ಲಾರೆಂಟಿನೋಗೆ ತಂತಿ ಕಚೇರಿಯಲ್ಲಿ ದೂತನ ಕೆಲಸ ಕೊಡಿಸಿದ್ದ... ಆ ಊರಿನ ಲೊರೆಂಜಾ ಡಾಜಾ ಎಂಬುವನಿಗೆ ಒಂದು ತಂತಿ ಸುದ್ದಿ ಕೊಡಲು ಹೋದಾಗ ಅಲ್ಲಿ ಫ್ಲಾರೆಂಟಿನೊ, ಲೊರೆಂಜೊವಿನ ಮಗಳು ಹದಿಮೂರರ ಹರೆಯದ ಫರ್ಮಿನಾಳನ್ನು ನೋಡಿ ಅವಳನ್ನು ಉತ್ಕಟವಾಗಿ ಪ್ರೀತಿಸಿದ. ಇಬ್ಬರ ಪ್ರೇಮ ರೆಕ್ಕೆಗೆದರಿತು. ಅವಳನ್ನು ಶಾಲೆಯಿಂದ ಉಚ್ಚಾಟನೆ ಮಾಡಿದರು. ರಹಸ್ಯ ಬಯಲಾಗಿ ಅವರಿಬ್ಬರನ್ನೂ ಅವಳ ತಂದೆ ದೂರವಿರಿಸಲು ಪ್ರಯತ್ನಿಸಿದ. ಏತನ್ಮಧ್ಯೆ ಫ್ಲಾರೆಂಟಿನೊ ತಂತಿ ಪತ್ರಗಳ ಮೂಲಕ ಅವಳನ್ನು ಸಂಪರ್ಕಿಸಿ ಅವಳ ಅನುಗ್ರಹ ಗಳಿಸಿದ.

ಮೂರು ವರ್ಷದ ಮೇಲೆ ಅವಳು ಊರಿಗೆ ವಾಪಸು ಬಂದಾಗ ಮತ್ತೆ ಪ್ರಾರಂಭವಾಯಿತು ಫ್ಲಾರೆಂಟಿನೊನ ಪ್ರೇಮ ಪ್ರಕರಣ. ಅವಳ ಕೈಹಿಡಿಯುವ ಯೋಗ್ಯತೆ ಸಂಪಾದಿಸಲು ಅವನು ಕಠೋರ ಸಾಹಸಗಳನ್ನು ಕೈಗೊಳ್ಳಲು ನಿಶ್ಚಯಿಸಿದ.

ಆದರೆ ಒಂದು ದಿನ ಇದ್ದಕ್ಕಿದ್ದಂತೆ ಅವಳ ಪ್ರೇಮ ಕರಟಿಹೋಗಿ ಅವನನ್ನು ತಿರಸ್ಕರಿಸಿದಳು.

ಮೂರನೆಯ ಭಾಗದಲ್ಲಿ ಡಾ॥ ಅರ್ಬಿನೊವಿನ ಕಥೆ ಬರುತ್ತದೆ. ೨೮ ವರ್ಷದ ತರುಣ ಅರ್ಬಿನೊ ಫ್ರಾನ್ಸಿನಲ್ಲಿ ಪ್ರೌಢ ಶಿಕ್ಷಣ ಮುಗಿಸಿ ಉನ್ನತ ವೈದ್ಯಶಾಸ್ತ್ರ ಪರಿಣತನಾಗಿ ಊರಿಗೆ ಬಂದಿದ್ದ. ಊರಿನ ಸುಶಿಕ್ಷಿತ ವಿಲಾಸ ಜೀವನದಲ್ಲಿ ಪಾಲುಗೊಂಡ. ಸುಂದರ ತರುಣಿ ಫರ್ಮಿನಾಳ ಪರಿಚಯವಾಯಿತು. ವೈದ್ಯನಾಗಿ ಒಮ್ಮೆ ಅವಳ ಮನೆಗೆ ಬಂದಾಗ ಅವಳ ಬಗ್ಗೆ ಕುತೂಹಲ ಮೂಡಿತು. ಅವನೇ ಹೇಳುವಂತೆ ಒಂದು 'ವೈದ್ಯಕೀಯ ಪ್ರಮಾದ' ನಡೆದು, ಅವನಿಗೆ ಅವಳಲ್ಲಿ ಅನುರಕ್ತಿ ಬೆಳೆಯಿತು... ಆದರೆ ಅವಳು ಅವನಿಗೆ ಸುಲಭವಾಗಿ ದಕ್ಕಲಿಲ್ಲ. ಹಲವಾರು ಅಡ್ಡಿ–ಆತಂಕಗಳು ಬಂದುವು. ಕೊನೆಗೆ ಅರ್ಬಿನೊ ಅವಳನ್ನು ಮದುವೆಯಾದ. ಇಬ್ಬರು ಮಕ್ಕಳು ಹುಟ್ಟಿ ಬೆಳೆದು ದೊಡ್ಡವರಾದರು. ಅಲ್ಲಿಂದ ಮುಂದಿನ ಭಾಗಗಳಲ್ಲಿ ಕಥೆ ಹಂತ ಹಂತವಾಗಿ ಬೆಳೆಯುತ್ತ ಹೋಗುತ್ತದೆ.

ಈ ಮಧ್ಯೆ ಫ್ಲಾರೆಂಟಿನೊ ಹತಾಶನಾಗಿ ಹಪಹಪಿಸುತ್ತಿರುತ್ತಾನೆ. ಫರ್ಮಿನಾಳನ್ನು ಮರೆಯಲು ಅತಿರೇಕದ ಕಾಮುಕ ಜೀವನ ನಡೆಸುತ್ತಾನೆ. ಆದರೂ ವಿಪರ್ಯಾಸವೆಂದರೆ ಮುಂದೆ ಎಂದೋ ಒಂದು ದಿನ ಫರ್ಮಿನಾ ತನ್ನವಳಾಗುವಳೆಂದು ನಂಬಿ ನಿರೀಕ್ಷಿಸುತ್ತಿರುತ್ತಾನೆ. ಅವಳ ಬಗ್ಗೆ ಜಪಿಸಿ ತಪಿಸಿ ವ್ಯಗ್ರವೇದನೆಯಲ್ಲಿ ಪ್ರಾಸಬದ್ಧ ಪ್ರೇಮ ಕಾವ್ಯಗಳನ್ನು ಬರೆಯುತ್ತಾನೆ. ಬೇರೆಯವರಸಲುವಾಗಿ ಪ್ರೇಮ ಪತ್ರ ಬರೆದುಕೊಡುವುದು ಅವನಿಗೆ ಒಂದು ಗೀಳಾಗುತ್ತದೆ. ನೋವು ಮರೆಯಲು ದೂರದ ಯಾನ, ಅಲೆದಾಟ ಕೈಕೊಳ್ಳುವನು. ಆದರೆ ಫರ್ಮಿನಾ ಸ್ಮರಣೆ ಮಾಸಲಿಲ್ಲ.

ಚಿಕ್ಕಪ್ಪನ ಕಚೇರಿಯಲ್ಲಿ ಕಾರಕೂನನಾಗಿದ್ದ ಫ್ಲಾರೆಂಟಿನೊವಿನ ಕಾವ್ಯ ಝರಿ ಕಚೇರಿಯ ಕಾಗದ ಪತ್ರಗಳಿಗೂ ಹರಿಯುತ್ತದೆ. ರೇಗಿದ ಚಿಕ್ಕಪ್ಪನಿಗೆ 'ಪ್ರೇಮ ಒಂದರಲ್ಲೇ ನನಗೆ ಆಸಕ್ತಿ' ಎಂದು ಹೇಳಿ ಸೋಲೊಪ್ಪಿಕೊಳ್ಳುತ್ತಾನೆ. ಅವನ ಸಂಯಮರಹಿತ ಬದುಕಿನಲ್ಲಿ ಹೆಚ್ಚು ಬದಲಾವಣೆಗಳಾಗುವುದಿಲ್ಲ.

೨೭ ವರ್ಷ ಕಾದಿರುವ ಅವನಿಗೆ ಅರ್ಬಿನೊವಿನ ಪರಿಚಯವಾಗುತ್ತದೆ. ಅವನ ಬಗ್ಗೆ ಮೆಚ್ಚುಗೆಯಾದರೂ ಅವನ ಶೀಘ್ರ ಸಾವನ್ನು ಹಾರೈಸುವನು.

ವರ್ಷಗಳು ಕಳೆದು ಅರ್ಬಿನೊ ಮತ್ತು ಅವನ ಹೆಂಡತಿಯ ದಾಂಪತ್ಯ ಜೀವನ ನೀರಸವಾಗುತ್ತದೆ. ಹೊರಗಿನವರಿಗೆ ಆದರ್ಶ ದಂಪತಿಗಳಂತೆ ಕಂಡರೂ ಅವರ ಬದುಕು ಪ್ರೀತಿಯ ಬಿಸುಪನ್ನು ಕಳೆದುಕೊಳ್ಳುತ್ತದೆ. ಅರ್ಬಿನೊಗೆ ಮದುವೆಯೊಂದು ಪೀಡೆ, ಪ್ರತಿ ರಾತ್ರಿ ಹಾಸಿಗೆಯಲ್ಲಿ ಕಳೆದುಹೋಗುವ ಪ್ರೀತಿಯನ್ನು ಮರು ಮುಂಜಾನೆ ಪುನಃ ರಚಿಸಬೇಕಲ್ಲಾ ಎನ್ನುವಂತಾಗುತ್ತದೆ. ಅವನಿಗೆ ಒಮ್ಮೆ ಅನಿಸುತ್ತದೆ, 'ಏಕತಾನದ ಬೇಸರವನ್ನು ಹೇಗೆ ನಿವಾರಿಸಬೇಕೆನ್ನುವುದೇ ಮದುವೆಯ ಸಮಸ್ಯೆ' ಎಂದು.

ಗಂಡಹೆಂಡಿರ ನಡುವೆ ತುಂಬಲಾರದ ಬಿರುಕು ಹುಟ್ಟುತ್ತದೆ. ಹೆಂಡತಿಗೆ ತಿಳಿಯದಂತೆ ಅರ್ಬಿನೊ ಬೇರೆ ಹೆಣ್ಣಿನ ಸಹವಾಸ ಬೆಳೆಸುವನು. ಅದು ಹೆಚ್ಚುಕಾಲ ರಹಸ್ಯವಾಗಿ ಉಳಿಯುವುದಿಲ್ಲ. ಪಶ್ಚಾತ್ತಾಪದಿಂದ ಅವಳೆದುರು ತಪ್ಪು ಒಪ್ಪಿಕೊಳ್ಳುವನು. ಆದರೂ ಅವರ ಇಬ್ಬರ ಸಂಬಂಧ ದೂರವಾಗುತ್ತ ಬರುತ್ತದೆ. ಮತ್ತೆ ವರ್ಷಗಳು ಉರುಳುತ್ತವೆ... ಸಂಜೆಗತ್ತಲಿನಲ್ಲಿ ವೃದ್ಧಾಪ್ಯದ ಅರಳುಮರಳು ಬೆನ್ನು ಹತ್ತಿ ಬರುತ್ತದೆ. ಆದರೆ ಫ್ಲಾರೆಂಟಿನೊಗೆ ಇನ್ನೂ ಫರ್ಮಿನಾಳ ಹಂಬಲವೋ ಹಂಬಲ! ಇದಿಷ್ಟೂ ಗತಕಾಲದ ನೆನಪುಗಳು ನಮ್ಮ ಮುಂದೆ ಎತ್ತಿ ಹಿಡಿದು ತೋರಿಸುವ ಪೂರ್ವಕಥೆ.

ಒಂದು ಪೆಂಟಕಾಸ್ಟ್ ಭಾನುವಾರ ಅರ್ಬಿನೊ ಸತ್ತ... ಅವನ ಅಂತ್ಯಕ್ರಿಯೆಯ ನಂತರ ಫ್ಲಾರೆಂಟಿನೊ ಅವಳ ಮುಂದೆ ಮದುವೆ ಪ್ರಸ್ತಾಪವೆತ್ತಿ ತಿರಸ್ಕೃತನಾಗಿದ್ದನಷ್ಟೆ.

ಕಥೆಯ ಮುಂದಿನ ಭಾಗ ಮಾರ್ಕ್ವೆಝ್‌ನ ಪರಿಣತ ಕಲಾಪ್ರಜ್ಞೆಗೆ ದ್ಯೋತಕವಾಗಿದೆ. ಮುಂದಿನ ಹಲವಾರು ದಿನಗಳ ಅವಧಿಯಲ್ಲಿ 'ವೃದ್ಧಪ್ರೇಮಿಗಳ' ನಡುವಣ ಅಡಚಣೆಗಳನ್ನು ಅವರು ಕ್ರಮೇಣ ಹೇಗೆ ನಿವಾರಿಸಿಕೊಳ್ಳುವರೆಂಬ ಸಂಗತಿಯ ನಿರೂಪಣೆ ರಸಮಯವಾಗಿ, ವ್ಯಂಗ್ಯ ವಿನೋದ ಶೈಲಿಯಲ್ಲಿ ಚಿತ್ರಿತವಾಗಿದೆ. ನಿಜವಾಗಿ ಅವರಿಬ್ಬರ ನಡುವಣ ಸ್ವಭಾವ ವೈರುಧ್ಯಗಳು ನಿವಾರಣೆಯಾಗುವುದೇ ಇಲ್ಲ. ಕಾಲ ತನ್ನ ಮೇಲೆ ಯಾವ ಪರಿಣಾಮವನ್ನೂ ಬೀರಿಲ್ಲವೆಂದು ಭ್ರಮಿಸುತ್ತಾ ಬದುಕುವ ಫ್ಲಾರೆಂಟಿನೊವಿನ ಅಂತರಂಗ ಪರಿಪಕ್ವವಾಗುವುದೇ ಇಲ್ಲ. ಆದರೆ ಫರ್ಮಿನಾಳ ಅನಿವಾರ್ಯ ಏಕಾಕಿತನದಿಂದಾಗಿ ಅವಳು ಹೆಚ್ಚು ಬೇಗ ಮಾನವೀಯವಾಗುತ್ತಾಳೆ. ತನ್ನ ವೃದ್ಧ ತಾಯಿ ಮತ್ತೆ ಹಳೆಯ ಪ್ರೇಮಿಯೊಂದಿಗೆ ತಿರುಗಾಡಲು ಹೊರಟಾಗ ಅವಳ ಪ್ರೌಢ ವಯಸ್ಸಿನ ಮಗಳು ಕಡು ಅಸಹನೆ ವ್ಯಕ್ತಪಡಿಸುತ್ತಾಳೆ. "ನಮ್ಮ ವಯಸ್ಸಿನವರಿಗೇ ಈಗ ಪ್ರೇಮವೆಂಬುದು ಹಾಸ್ಯಾಸ್ಪದ... ಇನ್ನು ಈ ಮುದುಕರಿಬ್ಬರಿಗೂ ಅದು ತೀರಾ ಅಸಹ್ಯಕರ" ಎನ್ನುತ್ತಾಳೆ. ಫರ್ಮಿನಾ ರೇಗಿ ಅವಳನ್ನು ಮನೆಯಾಚೆ ನೂಕುತ್ತಾಳೆ. ನಂತರ ಅವಳು ತನ್ನ ಸೊಸೆಯ ಮುಂದೆ ಹೇಳುವ ಮಾತುಗಳು ಚಿತ್ತಸ್ಪರ್ಶಿಯಾಗಿವೆ: 'ಒಂದು ಶತಮಾನದ ಹಿಂದೆ, ಬದುಕು ಆ ನತದ್ರಷ್ಟನನ್ನೂ ನನ್ನನ್ನೂ ನಾಶಗೊಳಿಸಿತು. ಯಾಕೆಂದರೆ ಆಗ ನಾವು ತುಂಬ ಚಿಕ್ಕವರಾಗಿದ್ದೆವು. ಆದರೆ ಈಗಲೂ ನಮ್ಮನ್ನು ಅದೇ ರೀತಿ ನಾಶಮಾಡಲೆಳೆಸುತ್ತಿದ್ದಾರೆ. ಯಾಕೆಂದರೆ ಈಗ ನಾವು ತುಂಬ ವೃದ್ಧರಾಗಿದ್ದೇವೆ.'

ಕಾದಂಬರಿಯ ಕೊನೆಯ ಭಾಗ ಮತ್ತೆ ನಮ್ಮನ್ನು ಬೆರಗುಗೊಳಿಸುತ್ತದೆ : 'ಇಷ್ಟು ದೀರ್ಘಕಾಲ ಈ ಗೊಂದಲಗಳ ನಡುವೆಯೂ ನಾವು ಹೇಗೆ ಸುಖವಾಗಿದ್ದೆವೊ ನಾನು ಕಾಣೆ... ಇಷ್ಟೊಂದು ಸಮಸ್ಯೆಗಳ ನಡುವೆ ಹೂಂ... ಅದು ಹಾಳಾಗಲಿ. ಅದು ನಿಜವಾದ ಪ್ರೀತಿಯೋ ಅಲ್ಲವೋ ಎಂದು ಅರ್ಥವಾಗದಿದ್ದರೂ ನಾವು ಹೇಗೋ ಬದುಕಿದ್ದೇವಲ್ಲಾ...' ಎನ್ನುತ್ತಾಳೆ ಫರ್ಮಿನಾ.

ಅಂತಿಮವಾಗಿ ವೃದ್ಧಪ್ರೇಮಿಗಳು ನದಿಯಲ್ಲಿ ದೂರ ತೀರ ಯಾನ ಮಾಡುತ್ತಿದ್ದಾಗ ಫ್ಲಾರೆಂಟಿನೊ, "ನಾನಿನ್ನೂ ನಿನಗೋಸ್ಕರ ಪರಿಶುದ್ಧ ಅಥವಾ ಅಕೃಷ್ಟ (ವರ್ಜಿನ್) ಆಗಿ ಉಳಿದಿದ್ದೇನೆ" ಎನ್ನುತ್ತಾನೆ. ಅವಳು ಅದನ್ನು ನಂಬಲಾರಳು. ಆದರೆ ಆತನು ಆ ಮಾತು ಹೇಳಿದ ರೀತಿ ಅವಳಿಗೆ ಇಷ್ಟವಾಗುತ್ತದೆ. ಅವರ ಯಾನ ಎಂದೆಂದೂ ಮುಗಿಯದ ಪರಿಚಲನೆ ಯಾಯಿತೆನ್ನುವ ಅರ್ಥಸೂಚನೆಯಿಂದ ಕಾದಂಬರಿ ಮುಕ್ತಾಯವಾಗುತ್ತದೆ.

ಪ್ರಸಿದ್ಧ ಸಾಹಿತಿ ಮಿಲೆನ್ ಕುಂದೆರಾನ ಮಾತೊಂದು ಇಲ್ಲಿ ನೆನಪಾಗುತ್ತದೆ : 'ಕಾದಂಬರಿಕಾರ ಇತಿಹಾಸಕಾರನೂ ಅಲ್ಲ, ಪ್ರವಾದಿಯೂ ಅಲ್ಲ... ಅವನು ನಮ್ಮ ಅಸ್ತಿತ್ವವನ್ನು ಒಳಹೊಕ್ಕು ಪರೀಕ್ಷಿಸುವ ಶೋಧಕ.'

ಮಾರ್ಕ್ವೆಜ್ ಈ ಕಾದಂಬರಿಯಲ್ಲಿ ನಡೆಸುವ ಅಸ್ತಿತ್ವದ ಅನ್ವೇಷಣೆ ಇದೇ ರೀತಿಯದು... ಇದಕ್ಕಾಗಿ ಅವನು ಬಳಸುವ ತಂತ್ರ, ಶೈಲಿ, ಅವನ ಅನ್ಯಾದೃಶ ವರ್ಣನಾ ವೈಖರಿ, ಎಲ್ಲವೂ ನಮಗೆ ನಿತ್ಯನವೀನ ಅಂಶಗಳು.

ಮಾರ್ಕ್ವೆಜ್ ಬಹುಶ್ರೇಷ್ಠ ಸಾಹಿತಿಯೆಂದು ಲೋಕವೆಲ್ಲ ಪ್ರಶಂಸಿಸುತ್ತಿದ್ದರೂ ಅವನು ಕೇವಲ ಸಾಹಿತಿಯಾಗಿರಲಿಲ್ಲ. ಅವನು ತನ್ನ ಸುತ್ತಲಿನ ಸಮಾಜದ ಆಗುಹೋಗುಗಳಲ್ಲಿ ಸದಾ ಜಾಗೃತನಾಗಿದ್ದ ಒಬ್ಬ ಪ್ರಜ್ಞಾವಂತ ನಾಗರಿಕನೂ ಹೌದು. ಹೇಳಿ ಕೇಳಿ ಅವನೊಬ್ಬ ಬಹುದೊಡ್ಡ ಸಮಾಜವಾದಿ... ೧೯೫೯ರಲ್ಲಿ ಅವನು ಫಿಡೆಲ್ ಕ್ಯಾಸ್ಟ್ರೋ ಆಹ್ವಾನದಂತೆ ಕ್ಯೂಬಾಕ್ಕೆ ಭೇಟಿ ಇತ್ತ. ಸ್ವಲ್ಪಕಾಲ ಅಲ್ಲಿನ ನಿವಾಸಿಯೂ ಆಗಿದ್ದ. ಕೊಲಂಬಿಯಾದಲ್ಲಿ ಅವ್ಯಾಹತವಾಗಿ ನಡೆಯುತ್ತಿದ್ದ ಕಾನೂನುಬಾಹಿರ ಕೃತ್ಯಗಳನ್ನು ನಿರುದ್ವಿಗ್ನವಾಗಿ ವರದಿ ಮಾಡಲು ಹೊಸ ಪತ್ರಿಕೋದ್ಯಮವೆಂಬ ಸಂಸ್ಥೆ ಸ್ಥಾಪಿಸಿದ. ಮಾದಕದ್ರವ್ಯಗಳ ನಿರಂಕುಶ ಪ್ರಭು ಎಸ್ಕೊಬಾರ್‌ನ ಅಪಕೃತ್ಯಗಳನ್ನು ವರದಿಮಾಡಿ ಒಂದು ಸುದೀರ್ಘ ಗ್ರಂಥವನ್ನೇ ಬರೆದ. ಅವನ ಹಾಗೂ ಕ್ಯಾಸ್ಟ್ರೋವಿನ ನಡುವಣ ಸ್ನೇಹ ಸಂಬಂಧಗಳು ಚಿರಂತನವಾಗಿ ಉಳಿದಿದ್ದವು.

ಮಾರ್ಕ್ವೆಜ್ ಎಂದೆಂದೂ ಮರೆಯಲಾಗದ ಒಬ್ಬ ಲೋಕೋತ್ತರ ವ್ಯಕ್ತಿ ಎಂಬುದರಲ್ಲಿ ಎರಡು ಮಾತಿಲ್ಲ.

**ಎಚ್. ಕೆ. ರಾಮಚಂದ್ರಮೂರ್ತಿ**
ನಂ. ೧೦೨, ಶ್ರಾವಂತಿ ಪ್ಯಾಲೇಸ್ ಅಪಾರ್ಟ್‌ಮೆಂಟ್ಸ್
ಸಿ. ಆರ್. ಲೇಔಟ್, ೩ನೇ ಅಡ್ಡರಸ್ತೆ
ಜೆ. ಪಿ. ನಗರ ೧ನೇ ಹಂತ
ಬೆಂಗಳೂರು – ೫೬೦ ೦೭೮

## ಸಾದರ ಸ್ವೀಕಾರ

**ವಿಚಾರ – ವಿಹಾರ** (ವೈಚಾರಿಕ ಬರಹಗಳ ಸಂಕಲನ)
*ಬಿ. ಪಿ. ಶಿವಾನಂದರಾವ್*
***ಪುಟ : ೫೨೮ + iv*** ***ಬೆಲೆ : ರೂ. ೪೫೦***
**ಸಾಹಿತ್ಯಸುಗ್ಗಿ ,** ನಂ. ೪೦, ೧ನೇ ಮುಖ್ಯರಸ್ತೆ, ೨ನೇ ಹಂತ, ೩ನೇ ಬ್ಲಾಕ್, ನಾಗರಬಾವಿ, ಬೆಂಗಳೂರು – ೫೬೦ ೦೭೨

**ಬಯಲಧ್ಯಾನ** (ಕವನ ಸಂಕಲನ)
*ಸುಧಾ ಚಿದಾನಂದಗೌಡ*
***ಪುಟ : xvi + ೮೪ = ೧೦೦*** ***ಬೆಲೆ : ರೂ. ೧೨೫***
**ಸುಯೋಧನ ಪ್ರಕಾಶನ,**
ಹಗರಿಬೊಮ್ಮನಹಳ್ಳಿ – ೫೮೩೨೧೨, ಬಳ್ಳಾರಿ ಜಿಲ್ಲೆ

**ಉದ್ಯೋಗಸ್ಥ ಮಹಿಳೆ ಮತ್ತು ವ್ಯಕ್ತಿತ್ವ ವಿಕಸನ**
*ಗಾಯತ್ರಿ ಮೂರ್ತಿ*
***ಪುಟ : ೧೧೨*** ***ಬೆಲೆ ರೂ. ೫೦***

**ಸೌಂದರ್ಯ ಪ್ರಜ್ಞೆ ಮತ್ತು ವ್ಯಕ್ತಿತ್ವ ವಿಕಾಸ**
*ಡಾ॥ ಕೆ. ಎಸ್. ಪವಿತ್ರ*
***ಪುಟ : ೧೦೦*** ***ಬೆಲೆ ರೂ. ೫೦***

**ವ್ಯಕ್ತಿತ್ವಕ್ಕೆ ಮೆರುಗು ಕೊಡುವ ಅನುಭೂತಿ ಸಹಾನುಭೂತಿ**
*ಡಾ॥ ಕೆ. ಆರ್. ಶ್ರೀಧರ್*
***ಪುಟ : ೧೦೮*** ***ಬೆಲೆ ರೂ. ೫೦***

**ನಿವೃತ್ತಿ ಜೀವನದ ಸಿದ್ಧತೆ ಹೇಗೆ ?**
*ಡಾ॥ ಎನ್. ಗೋಪಾಲಕೃಷ್ಣ*
***ಪುಟ : ೧೨೦*** ***ಬೆಲೆ ರೂ. ೫೦***

**ಮಕ್ಕಳ ಪ್ರತಿಭೆಯನ್ನು ಗುರುತಿಸಿ, ಬೆಳೆಸಿ**
*ಗಿರಿಮನೆ ಶ್ಯಾಮರಾವ್*
***ಪುಟ : ೧೦೦*** ***ಬೆಲೆ ರೂ. ೫೦***

**ಯಶಸ್ಸಿನ ಸೂತ್ರಗಳು** *ಪಿ. ಪಿ. ಉಪಾಧ್ಯ*
***ಪುಟ : ೧೧೬*** ***ಬೆಲೆ ರೂ. ೫೦***

**ಆಸೆ ಮತ್ತು ಅಗತ್ಯಗಳು : ಹೇಗಿರಬೇಕು ? ಎಷ್ಟಿರಬೇಕು ?**
*ಡಾ॥ ಕೆ. ಎಸ್. ಚೈತ್ರಾ*
***ಪುಟ : ೧೧೨*** ***ಬೆಲೆ ರೂ. ೫೦***

**ಕಾಲೇಜು ವಿದ್ಯಾರ್ಥಿಗಳ ಪೋಷಕರ ಜವಾಬ್ದಾರಿಗಳು**
*ಡಾ॥ ಎಂ. ಸಿ. ಪ್ರಕಾಶ್*
***ಪುಟ : ೧೧೨*** ***ಬೆಲೆ : ರೂ. ೫೦***

**ಸಂಬಂಧಗಳ ನಿರ್ವಹಣೆ** *ಪುಷ್ಪಾ ವೆರ್ಣೇಕರ*
***ಪುಟ : ೯೬*** ***ಬೆಲೆ : ರೂ. ೫೦***

**ನಮ್ಮ ನಂತರ ಯಾರು ?** (ಮಾನಸಿಕ ಅಸ್ವಸ್ಥರ ಪೋಷಕರಿಗಾಗಿ ಮಾಹಿತಿ ಕೈಪಿಡಿ)
*ಪ್ರೊ॥ ಎಚ್. ಚಂದ್ರಶೇಖರ್, ಶಿವಕುಮಾರ್, ಲತಾ ಜಾಕೋಬ್*
***ಪುಟ : ೪೦*** ***ಬೆಲೆ : ರೂ. ೨೫***
ಮೇಲಿನ ಹತ್ತು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

**ಹಾದಿ ಜಂಗಮ** (ಕವಿತೆಗಳು) *ಬಸವರಾಜ ಹೂಗಾರ*
***ಪುಟ : ೮೪ + ೪*** ***ಬೆಲೆ : ರೂ. ೬೦***
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

**ಕರ್ನಾಟಕ ಪಂಚತಂತ್ರಂ** (ಉಪೋದ್ಘಾತ, ಪರಿಷ್ಕೃತ ಪಠ್ಯ ಮತ್ತು ಅನುಬಂಧಗಳು)
*ಸಂಪಾದಕ : ಡಾ॥ ಸಿ. ಪಿ. ಕೃಷ್ಣಕುಮಾರ್*
***ಪುಟ : xviii + ೨೫೨*** ***ಬೆಲೆ : ರೂ. ೨೦೦***
**ಚಿತ್ರಭಾನು ಪ್ರಕಾಶನ,** ೨೨೬೫/೧೯, "ಭಾರತಿ", ವಿನಾಯಕನಗರ, ೬ನೆಯ ಕ್ರಾಸ್, ಮೈಸೂರು – ೧೨

**ಯಕ್ಷಗಾನ ಉತ್ತರ ಕನ್ನಡ ತಿಟ್ಟು** *ಡಾ॥ ಶ್ರೀಪಾದ ಭಟ್*
***ಪುಟ : ೭೨ + ೪*** ***ಬೆಲೆ : ರೂ. ೪೦***
**ಬಂಡಾಯ ಪ್ರಕಾಶನ,** 'ಸಹಯಾನ' ಕೆರೆಕೋಣ ಅಂಚೆ : ಅರೇ ಅಂಗಡಿ, ಹೊನ್ನಾವರ, ಉತ್ತರ ಕನ್ನಡ – ೫೮೧ ೩೩೪

**ಗದಾಯುದ್ಧ ಸಮೀಕ್ಷೆ** *ಸಿ. ಪಿ. ಕೆ.*
***ಪುಟ : ೪ + ೯೬ = ೧೦೦*** ***ಬೆಲೆ : ರೂ. ೫೦***
**ತನುಮನು ಪ್ರಕಾಶನ,** ಹೆಚ್. ಐ. ಜಿ. ೧೨೬೭, 'ಕಾವ್ಯಲೋಕ', ೧ನೇ ತಿರುವು, ಶ್ರೀರಾಂಪುರ, ೨ನೇ ಹಂತ, ಮೈಸೂರು – ೨೩.

**ಅಂತರತಮ** (ವಚನಗಳು) *ಸಿ. ಪಿ. ಕೆ.*
***ಪುಟ : xx + ೧೦೦ = ೧೨೦*** ***ಬೆಲೆ : ರೂ. ೮೦***
**ಸಂವಹನ,** ೧೨/೧ಎ, ಈವನಿಂಗ್ ಬಜಾರ್ ಹಿಂಭಾಗ, ಶಿವರಾಂ ಪೇಟೆ, ಮೈಸೂರು – ೫೭೦ ೦೦೧

**ಬಲಿಹಾರ** (ಕಾದಂಬರಿ) *ಚೀಮನಹಳ್ಳಿ ರಮೇಶಬಾಬು*
***ಪುಟ : ೧೪೪*** ***ಬೆಲೆ : ರೂ. ೧೨೫***
**ಪಂಚಮಿ ಮೀಡಿಯಾ ಪಬ್ಲಿಕೇಷನ್ಸ್,** ನಂ. ೩೭೫/ ೧೫, ಕೆಂಪೇಗೌಡ ನಗರ, ೧ನೇ ಮೈನ್, ೮ನೇ ಅಡ್ಡರಸ್ತೆ, ಮಾಗಡಿ ಮುಖ್ಯರಸ್ತೆ, ವಿಶ್ವನೀಡಂ ಪೋಸ್ಟ್, ಬೆಂಗಳೂರು – ೫೬೦ ೦೯೧

**ಸ್ವತಂತ್ರ ಭಾರತದಲ್ಲಿ ಜನಸಾಮಾನ್ಯರು**
*ಎಂ. ವಿ. ಭಟ್ (ಶ್ರೀ ಮಿತ್ತೂರು)*
***ಪುಟ : xviii + ೨೧೫*** ***ಬೆಲೆ : ರೂ. ೧೫೦***
**ಯುಗಪುರುಷ ಪ್ರಕಟಣಾಲಯ,** ಕಿನ್ನಿಗೋಳಿ, ದಕ್ಷಿಣ ಕನ್ನಡ – ೫೭೪ ೧೫೦

**ಎರಡು ನಾಯಿಗಳು** (ನಾಟಕ) ಈಚನೂರು ಇಸ್ಮಾಯಿಲ್
***ಪುಟ : x + ೪೩ = ೫೩*** ***ಬೆಲೆ : ರೂ. ೮೦***

**ತೂಕ ಹಾಕುತ್ತೇನೆ ತೂಕ ಹಾಕಿಸಿಕೊಳ್ಳಿ** (ನಾಟಕ)
ಈಚನೂರು ಇಸ್ಮಾಯಿಲ್
***ಪುಟ : x + ೪೭= ೫೭*** ***ಬೆಲೆ : ರೂ. ೮೦***
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಸೂಫಿ ಮತ್ತು ಶಬರಿ ಪ್ರಕಾಶನ,** ೯ನೇ ಅಡ್ಡರಸ್ತೆ, ಅಶೋಕನಗರ, ಮಹಿಳೆಯರ ವಿದ್ಯಾರ್ಥಿನಿಲಯದ ಹಿಂಭಾಗ, ಎಸ್. ಐ. ಟಿ., ತುಮಕೂರು – ೧೦೨

# ಅಕ್ಷರ ಹುಟ್ಟುವ ಮೊದಲೇ ಹೆಣ್ಣಿನಿಂದ ಅಕ್ಷರ ಕಿತ್ತೆವು !

ವಿಷ್ಣು ನಾಯ್ಕ



**ನ**ಮ್ಮ ಇತಿಹಾಸದ ಪುಟಗಳು ಹೆಣ್ಣಿಗಾಗಿರುವ ಅನ್ಯಾಯದ ಕಥೆಗಳಿಂದ ತುಂಬಿಹೋಗಿವೆ. ಪುರುಷ ಪ್ರಧಾನ ವ್ಯವಸ್ಥೆ ಈ ಗಲೀಜು ಬೆಳವಣಿಗೆಗಳ ಮೇಲೆ ಶಾಲೀನತೆಯ ಶಾಲು ಹೊದಿಸುತ್ತಲೂ ಬಂದಿದೆ. ಅನುಕಂಪದ, ಪ್ರಶಂಸೆಯ, ಗೌರವದ ಮಾತುಗಳನ್ನು ಪೋಣಿಸುತ್ತ ಶತಮಾನಗಳ ಅನ್ಯಾಯವನ್ನು ಮುಚ್ಚಲೆತ್ನಿಸಿದ್ದೇವೆ. ಗಂಡು ಜಾತಿ ಹೆಣೆದ ನೂರಾರು ಹಿಕ್ಮತ್ತುಗಳನ್ನು ಹೆಣ್ಣು ಈಗೀಗ ಅರ್ಥಮಾಡಿಕೊಳ್ಳುತ್ತಿದ್ದಾಳೆ. ಅದರ ಪರಿಣಾಮವಾಗಿ, ಒಳಗೂ ಹೊರಗೂ ಅವಳನ್ನು ಜೀವಂತವಾಗಿ ಕೊಂದ–ಕೊಲ್ಲುತ್ತಿರುವ ಕಥೆಗಳು ಈಗ ಬಯಲಾಗತೊಡಗಿವೆ.

ಅಕ್ಷರ ಹುಟ್ಟುವ ಮೊದಲೇ ನಾವು ಹೆಣ್ಣು ಮಕ್ಕಳಿಂದ ಅಕ್ಷರಗಳನ್ನು ಕಿತ್ತುಕೊಳ್ಳುವ ಕೆಲಸ ಮಾಡಿದೆವು. ಅಕ್ಷರ ಅವರ ಪಾಲಿಗೆ ಬರೀ ಅಕ್ಷರವೇ ಆಗಿರಲಿಲ್ಲ; ಬೆಳಕಾಗಿತ್ತು, ಬದುಕಾಗಿತ್ತು. 'ಅಕ್ಷರಗಳನ್ನು ಕಿತ್ತುಕೊಂಡೆವು' ಅಂದರೆ ಬದುಕನ್ನೇ ಕಿತ್ತುಕೊಂಡೆವು ಎಂಬುದು ತಾನೇ ಅರ್ಥ ?...

ಇದಕ್ಕೆ ಅವರು ಕಾರಣ, ಇವರು ಕಾರಣ ಎಂದು ಹೇಳುವುದಕ್ಕಿಂತ ಇಡೀ ಸಮಾಜವೇ ಕಾರಣ ಎಂಬುದು ಸರಿಯಾದ ಮಾತಾಗುತ್ತದೆ. 'ಸಮಾಜ' ಎಂದರೆ ಯಾರು ? ಮತ್ತೆ ನಾವೇ, ಸಮಾಜವನ್ನು ನಿಯಂತ್ರಿಸುತ್ತ ಬಂದ ಗಂಡು ಜಾತಿಯೇ. ಹೆಣ್ಣನ್ನು ಮನೆಯಿಂದ ಹೊರಗೆ ಬಿಡಲೊಪ್ಪದೇ ಹೋದೆವು. ಈ ಸಮಾಜವನ್ನು ಇದ್ದುದು ಇದ್ದ ಸ್ಥಿತಿಯಲ್ಲಿ ಕಣ್ತುಂಬಿಕೊಳ್ಳಲೂ ಕೂಡ ಅವಕಾಶ ಕೊಡದೇ ಹೋದೆವು. ಬಿಟ್ಟಿದ್ದಾದರೆ, ಅವಳು ಪ್ರಜಾತಂತ್ರದ ತಾಯ್ನಾಡೆಂಬ ಕೀರ್ತಿ ಇರುವ ಇಂಗ್ಲೆಂಡಿನಂಥ ದೇಶದಲ್ಲಿ ಕೂಡ ೮೦೦ ವರ್ಷಗಳವರೆಗೆ ಹೋರಾಟ ಮಾಡಿ ಮತದಾನದ ಹಕ್ಕನ್ನು ಪಡೆಯಬೇಕಾಗಿರಲಿಲ್ಲ !

'ಜನನಿ ತಾನೆ ಮೊದಲ ಗುರುವು' ಎಂದು ಬೊಗಳೆ ಬಿಡುವ ಭಾರತೀಯರು, ಅವಳ ಬದುಕಿನ ನಾಲ್ಕೂ ಅವಸ್ಥೆ–ನರಕವಾಗುವುದಕ್ಕೆ ಏನೇನು ಬೇಕೋ ಅಂಥ ಎಲ್ಲಾ ಕಟ್ಟುಪಾಡುಗಳನ್ನು ಸೃಷ್ಟಿಸಿದ್ದು ಸುಳ್ಳಲ್ಲ. ಮಗಳಾಗಿ ಅವಳಿಗೆ ಸ್ವಾತಂತ್ರ್ಯ ಸಿಕ್ಕಿಲ್ಲ, ಹೆಂಡತಿಯಾಗಿ ಪಡೆಯಲಿಲ್ಲ. ತಾಯಿಯಾಗಿ ಅನುಭವಿಸಲಿಲ್ಲ. ಅಜ್ಜಿಯೆಂಬ ಹಿರಿತನದ ಹೊತ್ತಲ್ಲೂ ತಂಪನ್ನು ಕಾಣಲಿಲ್ಲ.

ಮೇಲ್ನೋಟಕ್ಕೆ ಹೆಣ್ಣನ್ನು ಅತ್ಯಂತ ಗೌರವದಿಂದ ಕಾಣುವ ದೇಶ ಇಂಡಿಯಾ. ಆದರೆ ಇದೇ ಇಂಡಿಯಾದಲ್ಲಿ ಹೆಣ್ಣನ್ನು ಕೇವಲ ಭೋಗದ ವಸ್ತುವಾಗಿ ಪರಿಗಣಿಸಿದೆವು. ಅಂತರರಾಷ್ಟ್ರೀಯ ಮಹಿಳಾ ದಿನ ಬಂದಾಗ, ಮಾತೆಯ ದಿನ ಬಂದಾಗ ನಮಗೆ ಕೊಂಡಾಡುವುದಕ್ಕಾಗಿ, ಆರಾಧನೆಗಾಗಿ ಹೆಣ್ಣು ಬೇಕು. ಆದರೆ ಅಂಥ ಒಂದು ದಿನ ಇದೆ ಎಂಬುದು ಕೂಡ ಈ ದೇಶದ ಸುಮಾರು ೪೦ ಕೋಟಿ ಹೆಣ್ಣುಮಕ್ಕಳಿಗೆ ಈತನಕ ಗೊತ್ತಿಲ್ಲ.

ಹೆಣ್ಣಿಗೆ ನಿಸರ್ಗ ಸಹಜವಾದ ಕೆಲವು ದೌರ್ಬಲ್ಯಗಳಿವೆ ಎನ್ನುತ್ತಾರೆ; ಅವು ದೌರ್ಬಲ್ಯಗಳಲ್ಲ; 'ಒಳ್ಳೆಯತನ', 'ಮುಗ್ಧತೆ' ಎಂದು ಕರೆಯಿಸಿಕೊಳ್ಳಲು ತಕ್ಕವುಗಳು. ಅವಳು ಹೊಗಳಿಕೆಗೆ ಮೈಮರೆಯುತ್ತಾಳೆ. ಕನಿಕರಕ್ಕೆ ಕರಗುತ್ತಾಳೆ. ಪ್ರೀತಿಯ ಮಾತುಗಳಿಗೆ ಮರುಳಾಗುತ್ತಾಳೆ. ಒಂದೇ ಒಂದು ಆಲಿಂಗನಕ್ಕೆ ಕರಗಿ ನೀರಾಗಬಲ್ಲಳು. ಪ್ರಕೃತಿಯ ಕ್ಷಮಾಗುಣ ಅವಳಲ್ಲಿ ಸಹಜವಾಗಿಯೇ ತುಂಬಿಕೊಂಡಿದೆ. ಆದರೆ, ತಾನೂ ಒಂದು ಈ ಪ್ರಕೃತಿಯ ಫಲ ಎಂಬುದನ್ನು 'ಗಂಡಸು' ಎಂಬ ಜೀವ ಮರೆತು, ಆಳುವ ಅಧಿಕಾರಿಯಾಗಿ ತನ್ನನ್ನೇ ತಾನು ರೂಪಿಸಿಕೊಳ್ಳುತ್ತಾನೆ.

ಇತ್ತೀಚೆಗೆ ನನ್ನ ಕೈಗೆ ಸಿಕ್ಕಿದ ದಾಖಲೆಯೊಂದನ್ನು ಓದಿ ಸುಸ್ತಾದೆ ! ನಮ್ಮ ಸಮಾಜ ಈ ಅತ್ಯಾಧುನಿಕ ಕಾಲದಲ್ಲೂ ಹೆಣ್ಣನ್ನು ಎಷ್ಟೊಂದು ತುಚ್ಛವಾಗಿ ಕಂಡಿದೆಯಲ್ಲ – ಕಾಣುತ್ತಿದೆಯಲ್ಲಾ ಎಂದು ದಿಗಿಲಿಗೊಳಗಾದೆ. ೨೦೦೮ರಲ್ಲಿ ನಮ್ಮ ದೇಶದೊಳಗೆ ಮಹಿಳೆಯರ ಮೇಲಿನ ದೌರ್ಜನ್ಯ ಪ್ರಕರಣಗಳು ೧,೯೫,೮೫೬ರಷ್ಟಿದ್ದುದು, ೨೦೧೨ರಲ್ಲಿ ೨,೪೪,೨೭೦ಕ್ಕೆ



ಬೆಳೆದಿದೆಯಂತೆ! ಈ **'ದೌರ್ಜನ್ಯ'** ಎಂಬ ಪದದ ಒಳಗಡೆ ಗಂಡನ ದೌರ್ಜನ್ಯವಿದೆ, ಮಕ್ಕಳ ದೌರ್ಜನ್ಯವಿದೆ, ಅತ್ತೆ-ಮಾವಂದಿರ ದೌರ್ಜನ್ಯವಿದೆ, ತಾಯ್ತಂದೆಯರ ದೌರ್ಜನ್ಯವಿದೆ, ಮಾತ್ರವಲ್ಲ ಕುಟುಂಬದ ಹೊರಗಿನ ಜಗತ್ತು ನಡೆಸಿದ ಅತ್ಯಾಚಾರಗಳು, ಲೈಂಗಿಕ ದೌರ್ಜನ್ಯಗಳು, ಮಾನಸಿಕ ಕಿರುಕುಳಗಳು, ಅಪಹರಣದಂಥ ಪ್ರಕರಣಗಳು, ಸುಟ್ಟು ಕೊಂದ ಘಟನೆಗಳು, ಎಲ್ಲವೂ ಸೇರಿವೆ. ಒಟ್ಟಿನಲ್ಲಿ ಮಹಿಳೆ ವರ್ಷದಿಂದ ವರ್ಷಕ್ಕೆ ಹೆಚ್ಚು ಹೆಚ್ಚು ಕ್ರೌರ್ಯಗಳನ್ನು ಅನುಭವಿಸಬೇಕಾಗಿ ಬಂದಿದೆ. ನಾನೀಗ ಹೇಳುತ್ತಿರುವುದು ನಮ್ಮ ದೇಶದ ಗೃಹಸಚಿವಾಲಯದ, 'ನ್ಯಾಷನಲ್ ಕ್ರೈಮ್ ಬ್ಯೂರೋ' ದಾಖಲೆಯ ಪಟ್ಟಿಯನ್ನು ಆಧರಿಸಿ. ಈ ದಾಖಲೆ ಮುಂದುವರಿದು ಹೇಳುತ್ತದೆ: ಭಾರತದಲ್ಲಿ ಪ್ರತಿ ೨೬ ನಿಮಿಷದಲ್ಲಿ ಒಬ್ಬ ಮಹಿಳೆ ಒಂದಲ್ಲಾ ಒಂದು ಕಿರುಕುಳವನ್ನು ಅನುಭವಿಸು ತ್ತಾಳಂತೆ. ಪ್ರತಿ ೩೪ ನಿಮಿಷದಲ್ಲಿ ಒಬ್ಬ ಹೆಣ್ಣು ಅತ್ಯಾಚಾರಕ್ಕೆ ಒಳಗಾಗುತ್ತಾಳಂತೆ. ಪ್ರತಿ ೪೩ ನಿಮಿಷಕ್ಕೆ ಒಂದು ಹೆಣ್ಣಿನ ಅಪಹರಣವಾಗುತ್ತದೆಯಂತೆ!

ಕಳೆದ ತಿಂಗಳಲ್ಲಿ ಗ್ರಾಮೀಣ ಭಾಗದಲ್ಲಿ ನಡೆದ ಒಂದು ಕಾರ್ಯಕ್ರಮವನ್ನು ಉದ್ಘಾಟಿಸಲೆಂದು ಹೋಗಿದ್ದೆ: ಮಹಿಳೆಯರು ಮುಖ್ಯವಾಹಿನಿಗೆ ಬರಲು ಚಡಪಡಿಸುತ್ತ ಇತ್ತೀಚಿನ ವರ್ಷಗಳಲ್ಲಿ ಈ ಬಗೆಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದಾರೆ. ದುರ್ದೈವದ ಸಂಗತಿಯೆಂದರೆ ಮಹಿಳೆಯರೇ ಬಹುಸಂಖ್ಯೆಯಲ್ಲಿದ್ದ, ಮಹಿಳೆಯರೇ ಬಹುಸಂಖ್ಯೆಯಲ್ಲಿ ದುಡಿದು – ಬೆವರು ಚೆಲ್ಲಿದ ಈ ಸಂಘಟನೆಯಲ್ಲಿ, ವೇದಿಕೆಯ ಮೇಲೆ ಆಸೀನರಾದ ಏಳೆಂಟು ಜನರೊಳಗೆ ಒಬ್ಬ ಮಹಿಳೆ ಕೂಡ ಇರಲಿಲ್ಲ! ಅಂದು – ಅಲ್ಲಿ ಕೂಡ ನಾನು, ಅಕ್ಷರ ಹುಟ್ಟುವ ಮೊದಲೇ ಹೆಣ್ಣಿನ ನಾಲಿಗೆಗೆ ಬೀಗ ಜಡಿದ ದುರಂತ ನಮ್ಮ ಇತಿಹಾಸದ ಪುಟಗಳಲ್ಲಿದೆಯೆಂದು ಎಚ್ಚರಿಸಿದ್ದೆ. ಸಂಪ್ರದಾಯದ ಹೆಸರಿನಲ್ಲಿ, ಶಿಷ್ಟಾಚಾರದ ಹೆಸರಿನಲ್ಲಿ, ಮರ್ಯಾದೆಯ ಹೆಸರಿನಲ್ಲಿ ಹೆಣ್ಣು ಕೂಡ ಹಾರಲೆತ್ನಿಸಿದ ತನ್ನೊಳಗಿನ ಹಕ್ಕಿಯ ಕುತ್ತಿಗೆ ಹಿಚುಕಿ – ಒಳಗೊಳಗೇ ನೊಂದಿದ್ದಾಳೆ; ಬೆಂದಿದ್ದಾಳೆ. ಗಂಡ ಸತ್ತಾಗ ಕೇಶಮುಂಡನದಂಥ ಅಮಾನುಷ ಕೃತ್ಯಕ್ಕೆ ಅವಳನ್ನು ನಮ್ಮದೇ ಸಮಾಜ ಒಡ್ಡಿ, ಮೂಲೆಸೈಜಿನ ಮಣೆ ತೋರಿಸಿ ಕೂಡಿಹಾಕಿದ್ದಿದೆ. ಗಂಡನೆಂಬ ಜೀವ ಸತ್ತುಹೋದ ಮೇಲೆ ಅವನ ಹೆಂಡತಿಯಾದವಳು ಈ ದೇಶದಲ್ಲಿ ಪಡುವಷ್ಟು ಅವಮಾನದ ಪ್ರಸಂಗಗಳನ್ನು – ಪ್ರಪಂಚದ ಬೇರೆ ಯಾವ ದೇಶದಲ್ಲೂ ಕಾಣಲು ಸಾಧ್ಯವಿಲ್ಲ.

ಹಾಗಿದ್ದರೆ ಏನು ಮಾಡಬೇಕು? ಕಳೆದ ಕೆಲವು ದಶಕಗಳಿಂದ ಮಹಿಳಾ ಪಡೆಗಳು ಸಿದ್ಧವಾಗುತ್ತಿವೆ. ದುರ್ದೈವದ ಸಂಗತಿಯೆಂದರೆ ಸಂಪ್ರದಾಯವನ್ನು ಧಿಕ್ಕರಿಸುವ ನೆಲೆಯಲ್ಲಿ ಅವರೂ ಕೂಡ ಇನ್ನೂ ಪೂರ್ತಿ ಅನುಮಾನಗಳನ್ನು ಬಿಟ್ಟುಕೊಟ್ಟಂತಿಲ್ಲ! ತಾಯ್ತನವನ್ನು ಧಿಕ್ಕರಿಸಬೇಕೆಂದು ನಾನು ಹೇಳುವುದಿಲ್ಲ. ಯಾವುದು **ಹೆಣ್ಣಿಂದ ಮಾತ್ರ ಸಾಧ್ಯವೋ,** ಅಂಥ ನೈಸರ್ಗಿಕ ಹೊಣೆಗಾರಿಕೆಗಳನ್ನು ಅವಳು ಶ್ರದ್ಧೆಯಿಂದಲೇ ನಿಭಾಯಿಸಲಿ. ಆದರೆ ಇನ್ನುಳಿದ ಕಾರ್ಯಗಳಲ್ಲಿ ಯಾಕೆ **'ನಾವಿಬ್ಬರೂ ಸಮ ಸಮ'** ಎಂಬ ಭಾವನೆಯನ್ನು ಬೆಳೆಸಿಕೊಳ್ಳುತ್ತಿಲ್ಲ? ಅಥವಾ ಆ ದಾರಿಗೆ ಗಂಡು ಬರುವ ಹಾಗೆ ಯಾಕೆ ಪಟ್ಟುಹಿಡಿದು ಹೋರಾಡುತ್ತಿಲ್ಲ? ಇದು ಮುಖ್ಯ ಪ್ರಶ್ನೆ.

ಈಗಲೂ ಕೂಡ ಸ್ವಸಹಾಯ ಸಂಘಗಳು, ಮಹಿಳಾಪರ ಹೋರಾಟದ ಪಡೆಗಳು, ಸಮಾನ ಮನಸ್ಕ ಪ್ರಗತಿಪರ ಮಹಿಳಾ ಸಂಘಟನೆಗಳು, ಇನ್ನೂ ಅನುಮಾನದಲ್ಲಿರುವ ಬಹುಸಂಖ್ಯಾತ ಸಂಪ್ರದಾಯವಾದಿ ಹೆಣ್ಣುಮಕ್ಕಳನ್ನು ಎಚ್ಚರಿಸುವುದಕ್ಕೆ ಕೈತೊಳೆದು ಕೆಲಸ ಮಾಡುತ್ತಿಲ್ಲವೇಕೆ ಎಂಬ ಪ್ರಶ್ನೆಗಳಿಗೆ ಅವಕಾಶವಿದೆ. ನಮ್ಮ ನಡುವೆ ದೊಡ್ಡ ಸಂಖ್ಯೆಯಲ್ಲಿ ದಲಿತ ಮಹಿಳೆಯರಿದ್ದಾರೆ. ಅವರಲ್ಲಿ ಹೆಚ್ಚಿನವರು ಅಸಂಘಟಿತ ಮಹಿಳೆಯರು. ಬುಡಕಟ್ಟು ಮಹಿಳೆಯರದೂ ಇದೇ ಪಾಡು. ಶೂದ್ರ, ಅಲ್ಪಸಂಖ್ಯಾತ ಮಹಿಳೆಯರಲ್ಲೂ ಕೂಡ ಸಂಘಟನೆಯ ಬರವಿದೆ. ಹಾಗಂತ ಮೇಲ್ವರ್ಗದ ಮಹಿಳೆಯರು ಸಂಘಟಿತರಾಗಿದ್ದಾರೆ, ಎಂದರೆ ಸುರಕ್ಷಿತರಾಗಿದ್ದಾರೆಂದೇನೂ ಭಾವಿಸುವಂತಿಲ್ಲ; ಇಡೀ ಹೆಣ್ಣು ಕುಲವೇ ಅಸ್ವಸ್ಥ ಮನಃಸ್ಥಿತಿಯಲ್ಲಿದೆ.

ನಮ್ಮ ದೇಶದಲ್ಲೇ, ಸರಿ-ಸುಮಾರು ಅರವತ್ತು ಕೋಟಿಯಷ್ಟು ಹೆಣ್ಣು ಜೀವಗಳಿವೆ. ಹೆಚ್ಚೂ-ಕಡಿಮೆ ಅಷ್ಟೇ ಗಂಡು ಜೀವಗಳಿವೆ. ಆಳುವವರು, ಆಳಿಸಿಕೊಳ್ಳುವವರು; ಮುಕ್ತರು, ಮುಕ್ತರಲ್ಲದವರು ಎಂಬಂಥ ಭಾವನೆ ಎಲ್ಲಿಯವರೆಗೆ ಗಂಡು-ಹೆಣ್ಣು ಜಾತಿಗಳ ಮಧ್ಯೆ ಇರಲಿದೆಯೋ ಅಲ್ಲಿಯವರೆಗೆ ಈ ದೇಶ ಉದ್ಧಾರವಾಗುವುದಿಲ್ಲ. ಹಿಂದೊಮ್ಮೆ ನಾನು ಎಲ್ಲೋ ಬರೆದ ಮಾತೇ ಇಲ್ಲೂ ನೆನಪಾಗುತ್ತಿದೆ: ಪೂರ್ಣಪ್ರಮಾಣದ ಒಂದು ದೇಹಕ್ಕೆ ಪಾರ್ಶ್ವವಾಯು ಬಾಧೆ ತಟ್ಟಿದಾಗ ದೇಹದ ಒಂದು ಭಾಗವೇ ಬಿದ್ದುಹೋಗುತ್ತದೆ. ನಮ್ಮ ದೇಶದ ಆರ್ಥಿಕ ಸ್ಥಿತಿಯೂ ಹೆಚ್ಚೂ-ಕಡಿಮೆ ಹಾಗೇ ಆಗಿದೆ. ೧೨೦ ಕೋಟಿ ಮಂದಿಯಲ್ಲಿ ಅರ್ಧದಷ್ಟು ಮಂದಿ ಕ್ರಿಯಾಶೂನ್ಯರಾಗಿ ಮನೆಯ ನಾಲ್ಕು ಗೋಡೆಗಳ ಒಳಗೇ ಉಳಿದುಬಿಟ್ಟರೆ, ಅವರ (ಮಾನವ) ಸಂಪತ್ತು ದೇಶದ ಸಂಪತ್ತಾಗುವುದಾದರೂ ಹೇಗೆ?... ಹಾಗಂತ ಮಹಿಳೆಯರು ದುಡಿಯುತ್ತಲೇ ಇಲ್ಲವೆಂದರ್ಥವಲ್ಲ. ವಿಶ್ವಸಂಸ್ಥೆಯ ಒಂದು ವರದಿಯಲ್ಲಿ ಹೇಳುವಂತೆ, ಜಗತ್ತಿನಲ್ಲಿ ಅರ್ಧದಷ್ಟು ಮಹಿಳೆಯರಿದ್ದಾರೆ. ಆದರೆ ಜಗತ್ತಿನಲ್ಲಿ ಒಟ್ಟೂ ದುಡಿಮೆಯ ಅವಧಿ ಇದೆಯಲ್ಲ, ಅದರಲ್ಲಿ ಮೂರನೇ ಎರಡು ಭಾಗದಷ್ಟು ಮಹಿಳೆಯರದೇ ಆಗಿದೆ. ಆದರೆ ಇಷ್ಟು ದೊಡ್ಡ ಪ್ರಮಾಣದಲ್ಲಿ ದುಡಿಯುವ ಮಹಿಳೆಯರಿಗೆ ಸಿಗುವುದು ಜಗತ್ತಿನ ಒಟ್ಟೂ ಆದಾಯದಲ್ಲಿ ಹತ್ತನೇ ಒಂದು ಭಾಗ ಮಾತ್ರವಂತೆ! ಹೆಣ್ಣುಮಕ್ಕಳು ಹೊಂದಿರುವ ಆಸ್ತಿಯೂ ನೂರರಲ್ಲಿ ಒಂದು ಭಾಗ ಮಾತ್ರವಂತೆ! ಈ ಘೋರ ಅನ್ಯಾಯವನ್ನು ಪ್ರತಿಭಟಿಸುವ ಮನಸ್ಸುಗಳನ್ನು ಕೇವಲ ಹೆಣ್ಣು ಸಮಾಜದಿಂದ ನಿರೀಕ್ಷಿಸಿದರೆ ಸಾಲದು, ಅವರ ಹಂಗಿನಲ್ಲೇ ಬೆಳೆದಿರುವ ಗಂಡು ಜಾತಿಯೂ ಕೂಡ ಬೇಷರತ್ತಾಗಿ ಅವಳಿಗಾಗಿರುವ ಅನ್ಯಾಯವನ್ನು ಸರಿಪಡಿಸಬೇಕಾಗಿದೆ. ಪ್ರಗತಿಪರ ಮಹಿಳಾ ಸಂಘಟನೆಗಳು ಕುರುಡು ಸಂಪ್ರದಾಯಸ್ಥ ಕುಟುಂಬಗಳ ಮನೆಯ ಬಾಗಿಲು ಬಡಿಯಲೇಬೇಕಾದ ಕಾಲ ಈಗ ಸನ್ನಿಹಿತವಾಗಿದೆ. ಗಂಡು ಜಾತಿ ತನ್ನೊಳಗಿನ ಮೇಲರಿಮೆಯನ್ನು ಕಿತ್ತೆಸೆದು ಅವರ ಬಲಕ್ಕೆ ನಿಲ್ಲಬೇಕಾದುದಿದೆ.

ಕೊನೆಯಲ್ಲಿ ಒಂದು ಮಾತು: ಹೆಣ್ಣು-ಗಂಡಿನ ಕುರಿತು ಸಾಕಷ್ಟು ಜಿಜ್ಞಾಸೆ ನಡೆಸಿದ ಹಿರಿಯ ಚಿಂತಕ ಡಾ॥ ಗೌರೀಶ ಕಾಯ್ಕಿಣಿಯವರು ಗಂಡು-ಹೆಣ್ಣು ಎಂಬ ತಮ್ಮ ಪುಸ್ತಕದಲ್ಲಿ ಬರೆದ ಒಂದು ಮಾತಿನ ಬಗ್ಗೆ ಓದುಗರ ಗಮನ ಸೆಳೆಯುತ್ತೇನೆ: **"ಬಾಳೆಂಬ ಬಂಟನಿಗೆ ಗಂಡು ತ್ರಾಣವಾದರೆ ಹೆಣ್ಣು ಪ್ರಾಣ"** – ಎನ್ನುತ್ತಾರೆ ಕಾಯ್ಕಿಣಿ. ಪ್ರಾಣವಿಲ್ಲದೆ ತ್ರಾಣಿಕನಾಗುತ್ತೇನೆ ಎಂದು ಕನಸು ಕಾಣುವ ಕಾಲ ಈಗ ಮುಗಿದಿದೆ. ಹೆಣ್ಣುಮಕ್ಕಳು ತಮಗಾದ ಅನ್ಯಾಯದ ವಿರುದ್ಧ ಬೀದಿಗೆ ಇಳಿಯುತ್ತಿದ್ದಾರೆ; ಇಳಿಯಬೇಕು. ಇಳಿಯಲಿ. ಗಂಡು ಜಾತಿಯೂ ಚೌಕಾಶಿಗಿಳಿಯದೆ ಅವರ ಬೆಂಬಲಕ್ಕೆ ನಿಲ್ಲಲಿ.



**ವಿಷ್ಣು ನಾಯ್ಕ**
'ಪರಿಮಳ', ಅಂಬಾರಕೊಡ್ಲ
ಅಂಕೋಲಾ – ೫೮೧ ೩೫೪
ಉತ್ತರ ಕನ್ನಡ ಜಿಲ್ಲೆ



# ಕೆಡುತ್ತಿರುವ ರಾಷ್ಟ್ರೀಯ ನೈರ್ಮಲ್ಯ ಅನಾರೋಗ್ಯದತ್ತ ಮಾನವ ಸಂಪನ್ಮೂಲ

**ಎನ್. ಆರ್. ಪಾಟೀಲ**

ಒಂದು ರಾಷ್ಟ್ರದ ಪ್ರಗತಿ ಆ ರಾಷ್ಟ್ರದ ಮಾನವ ಸಂಪನ್ಮೂಲದ ಆರೋಗ್ಯವನ್ನೇ ಅವಲಂಬಿಸಿದೆ. ಇದಕ್ಕಾಗಿ ರಾಷ್ಟ್ರ ಮಾಲಿನ್ಯರಹಿತವಾಗಿರಬೇಕು. ನೆಲ, ಜಲ, ಗಾಳಿ ಪರಿಶುದ್ಧವಾಗಿರಬೇಕು. ಆದರೆ ವಿಷಾದದಿಂದ ಹೇಳಲೇ ಬೇಕಾಗಿರುವ ಕಹಿ ಸತ್ಯವೆಂದರೆ ನಮ್ಮ ದೇಶ ಮಾಲಿನ್ಯ ರಹಿತವಾಗಿಲ್ಲ. ದೇಶದ ಬಹುತೇಕ ಎಲ್ಲ ನಗರಗಳು ಮಾಲಿನ್ಯಗೊಂಡಿವೆ. ಇದಕ್ಕೊಂದು ಉತ್ತಮ ಉದಾಹರಣೆ ನಮ್ಮ ರಾಜ್ಯದ ರಾಜಧಾನಿ ಬೆಂಗಳೂರು ! ಅಮೆರಿಕೆಯ ನ್ಯೂಯಾರ್ಕ್ ಟೈಮ್ಸ್ ಪತ್ರಿಕೆ ಬೆಂಗಳೂರಿನಲ್ಲಿ ರಾಶಿ ರಾಶಿಯಾಗಿ ಬಿದ್ದಿರುವ ಕಸ ಕುರಿತು ವರದಿ ಮಾಡುತ್ತ "ಗಾರ್ಡನ್ ಸಿಟಿ ಗಾರ್ಬೇಜ್ ಸಿಟಿ" ಎಂದು ಹೇಳಿದ್ದು ನಿಜಕ್ಕೂ ವಿಷಾದನೀಯ. ಮಾಲಿನ್ಯ ನಿಯಂತ್ರಣಕ್ಕಾಗಿ 'ರಾಷ್ಟ್ರೀಯ ಮಾಲಿನ್ಯ ನಿಯಂತ್ರಣ ಮಂಡಳಿ' ಇದ್ದರೂ ಮಾಲಿನ್ಯ ರಾಕ್ಷಸನ ಹಾವಳಿ ರಾಷ್ಟ್ರಾದ್ಯಂತ ಹೆಚ್ಚುತ್ತಲೇ ಇದೆ.

**ಸರ್ವಂ ವಿಷಮಯಂ**

ವಿಶ್ವ ಆರೋಗ್ಯ ಸಂಸ್ಥೆಯ ವರದಿಯ ಪ್ರಕಾರ ಭಾರತದಲ್ಲುಂಟಾಗುತ್ತಿರುವ ಶೇ. ೮೦ರಷ್ಟು ಮಾರಣಾಂತಿಕ ರೋಗಗಳಿಗೆ ಮಾಲಿನ್ಯವೇ ಕಾರಣ. ರಾಷ್ಟ್ರೀಯ ಪರ್ಯಾವರಣ ಮತ್ತು ಸಂಶೋಧನಾ ಸಂಸ್ಥೆ ಹೇಳುವಂತೆ ಭಾರತದಲ್ಲಿ ಶೇ. ೮೦ರಷ್ಟು ಕುಡಿಯುವ ನೀರು ಮಲಿನಗೊಂಡಿದೆ. ಕೈಗಾರಿಕೆ, ಕೃಷಿ, ಗೃಹಬಳಕೆಯ ಕೊಳಚೆ ಜಲಮೂಲಗಳಿಗೆ ಸೇರುವುದರಿಂದ ಜಲ ಮಾಲಿನ್ಯ ಹೆಚ್ಚುತ್ತಲಿದೆ. ರಾಜಸ್ತಾನದಂತಹ ನೀರಿಲ್ಲದ ಕಡೆ ಕೈಗಾರಿಕೆಗಳು ತಮ್ಮ ಕೊಳಚೆಯನ್ನು ಭೂಮಿಯೊಳಗೆ ಪಂಪ್ ಮಾಡುತ್ತಿವೆ.

ಹೆಸರು – ಕಾರಣ ಗೊತ್ತಿಲ್ಲದ ಹೊಸ ಹೊಸ ರೋಗಗಳು ಕಾಣಿಸಿಕೊಳ್ಳುತ್ತಿವೆ. ಆಧುನಿಕ ವೈದ್ಯಕೀಯ ಯಂತ್ರಗಳಲ್ಲೂ ಈ ಹೊಸ ರೋಗಗಳು ಪತ್ತೆ ಆಗುವುದಿಲ್ಲ. ದೆಹಲಿಯ 'ಸೆಂಟರ್ ಫಾರ್ ಸೈನ್ಸ್ ಆ್ಯಂಡ್ ಎನ್‌ವಿರಾನ್‌ಮೆಂಟ್' ಹೇಳುವಂತೆ, "ದೆಹಲಿಯೊಂದರಲ್ಲೇ ಪ್ರತಿವರ್ಷ ಗೊತ್ತಿಲ್ಲದ ಕಾರಣಗಳಿಂದ ಬರುವ ಹೊಸ ರೋಗಗಳಿಂದ ಸುಮಾರು ೫೨,೦೦೦ಕ್ಕೂ ಹೆಚ್ಚು ಜನ ಸಾಯುತ್ತಾರೆ. ದೆಹಲಿಯ 'ವಲ್ಲಭಭಾಯಿ ಪಟೇಲ್ ಟೆಸ್ಟ್ ಇನ್‌ಸ್ಟಿಟ್ಯೂಟ್' ಪ್ರಕಾರ ದೆಹಲಿಯ ಹವಾಮಾಲಿನ್ಯ ಹೆಚ್ಚಾಗಿದ್ದು, ದೊಡ್ಡವರಲ್ಲಿ ಹಾಗೂ ಮಕ್ಕಳಲ್ಲಿ ಉಸಿರಾಟದ ತೊಂದರೆಗಳು ಕಾಣಿಸಿ ಕೊಳ್ಳುತ್ತಿವೆ. ಭೂಮಿಯ ಮೇಲಿನ ವಾಯು ಪದರಿನಲ್ಲಿ ಆಮ್ಲಜನಕದ ಪ್ರಮಾಣ ಕಡಿಮೆ ಆಗುತ್ತಿದ್ದು, ನೈಟ್ರೋಜನ್, ಇಂಗಾಲದ ಡೈಆಕ್ಸೈಡ್, ಸಲ್ಫರ್ ಆಕ್ಸೈಡ್‌ಗಳ ವಿಷಪೂರಿತ ಮಿಶ್ರಣ ಹೆಚ್ಚುತ್ತಿದೆ. ಶ್ವಾಸಕೋಶದ ತೊಂದರೆಗಳು ಹೆಚ್ಚುತ್ತಿವೆ. ಸೀಸದ ಪ್ರಭಾವದಿಂದಾಗಿ ಮಕ್ಕಳಲ್ಲಿ ಮೆದುಳು, ಹೃದಯ,

"ಸಿಲಿಕಾನ್ ಸಿಟಿ" ಎಂದೇ ವಿಶ್ವ ಖ್ಯಾತಿ ಪಡೆದಿರುವ ಉದ್ಯಾನ ನಗರಿ ಬೆಂಗಳೂರು ಇಂದು ಕಸದ ವಿಷಯದಲ್ಲಿ ಕಸಿವಿಸಿಗೊಂಡಿದೆ. ಇದು ಆಡಳಿತದ ವೈಫಲ್ಯ ಎಂಬ ದೂರು ಕೇಳಿಬರುತ್ತಿದೆ. ಉದ್ಯಾನ ನಗರಿಯಲ್ಲಿ ದಿನನಿತ್ಯ ಹೊರಬೀಳುವ ಕಸದ ಪ್ರಮಾಣ ೪ರಿಂದ ೫ ಸಾವಿರ ಟನ್ ! ಹೊಟೇಲುಗಳ ತ್ಯಾಜ್ಯವೇ ೨೦೦೦ ಟನ್ ! ನೆನೆಸಿಕೊಂಡರೇನೇ ಭಯವಾಗುತ್ತದೆ. ಅಂತರರಾಷ್ಟ್ರೀಯ ಖ್ಯಾತಿಯ ನಮ್ಮ ರಾಜಧಾನಿ ಅನೈರ್ಮಲ್ಯದ ಕಾರಣದಿಂದ ಕುಖ್ಯಾತಿ ಪಡೆದರೆ ಅದಕ್ಕಿಂತ ಹೆಚ್ಚಿನ ನಾಚಿಕೆಗೇಡಿನ ವಿಷಯ ಇದೆಯೇ ?



ಮೂತ್ರಕೋಶಗಳ ತೊಂದರೆಗಳು ಕಾಣಿಸಿಕೊಂಡಿವೆ.

ಒಂದು ಅಂದಾಜಿನ ಪ್ರಕಾರ ಪ್ರತಿವರ್ಷ ದೇಶದ ಮಹಾನಗರಗಳಲ್ಲಿ ವಿಷಮಯ ವಾಯುವಿನಿಂದ ಸಾಯುವವರ ಸಂಖ್ಯೆ ಎರಡು ಲಕ್ಷಕ್ಕೂ ಹೆಚ್ಚು! ಕಾರ್ಖಾನೆಗಳು ಹೆಚ್ಚುತ್ತಿವೆ. ಅವು ಬಿಡುವ ಹೊಗೆ, ರಸ್ತೆಯ ಮೇಲೆ ಓಡುವ ಸಣ್ಣ–ದೊಡ್ಡ ವಾಹನಗಳ ಹೊಗೆ ವಾತಾವರಣದಲ್ಲಿ ಗಂಧಕದ ಅಂಶವನ್ನು ಹೆಚ್ಚಿಸಿವೆ. ಬಹುತೇಕ ಎಲ್ಲ ನಗರಗಳಲ್ಲಿ ವಿಷಮಯ ವಾತಾವರಣವಿದೆ. ಹೃದಯ ರೋಗಗಳು ಹೆಚ್ಚಿವೆ. ಸಿಹಿಮೂತ್ರ ರೋಗ, ಕಣ್ಣು–ಚರ್ಮ ಉರಿ, ನಿದ್ದೆಗೇಡು, ಮಾನಸಿಕ ಒತ್ತಡ, ಬುದ್ಧಿಮಾಂದ್ಯ... ಇಂತಹ ಇನ್ನೂ ಹಲವಾರು ಭಯಾನಕ ರೋಗಗಳಿಂದ ಜನ ಬಳಲುತ್ತಿದ್ದಾರೆ. ಜಗತ್ತಿನ ಅತ್ಯಂತ ಹೆಚ್ಚು ವಿಷಮಯ ನಗರಗಳೆಂದರೆ ಭಾರತದ ಕೊಲ್ಕೊತ್ತಾ, ದೆಹಲಿ, ಚೆನ್ನೈ, ಅಹಮದಾಬಾದ್, ಬೆಂಗಳೂರು!




**ಪ್ರತಿ ತುತ್ತಿನಲ್ಲೂ ವಿಷ**

ಬೆಳೆಗಳ ಸಂರಕ್ಷಣೆಗೆಂದು ಬಳಸುವ ಕೀಟನಾಶಕಗಳ ಕೆಲ ಪ್ರಮಾಣ ಮಣ್ಣಿನಲ್ಲೂ ಸೇರಿ ಅದನ್ನು ವಿಷಮಯಗೊಳಿಸುತ್ತದೆ. ಜೊತೆಗೆ ಆ ವಿಷಾಂಶ ಜಲಮೂಲಗಳಾದ ಬಾವಿ, ಕೆರೆ, ಹಳ್ಳ, ನದಿಗಳನ್ನೂ ಸೇರಿ ವಿಷಮಯಗೊಳಿಸುತ್ತದೆ. ಅದೇ ಮಣ್ಣು, ಅದೇ ನೀರನ್ನು ಹೀರಿಕೊಂಡು ಬೆಳೆಯುವ ಬೆಳೆಯ ಎಲ್ಲ ಆಹಾರ ಪದಾರ್ಥಗಳಲ್ಲೂ ವಿಷ ಸೇರಿಕೊಳ್ಳುತ್ತದೆ. ಅಷ್ಟೇ ಅಲ್ಲ, ಈ ಕೀಟನಾಶಕಗಳ ವಿಷ ಅಂತರ್ಜಲವನ್ನೂ ಸೇರಿಕೊಳ್ಳುತ್ತದೆ. ಹೀಗಾಗಿ ನಾವು ತಿನ್ನುವ ಪ್ರತಿ ಆಹಾರದಲ್ಲೂ ಹಾಗೂ ಕುಡಿಯುವ ನೀರಿನಲ್ಲೂ ವಿಷವಿದೆ. ಇಂಥ ಬೆಳೆಯ ಮೇವನ್ನು ತಿನ್ನುವ, ನೀರನ್ನು ಕುಡಿಯುವ ಪ್ರಾಣಿಗಳಿಗೂ ಇದು ಮಾರಕವಾಗುತ್ತಿರುವುದು ಸಾಬೀತಾಗಿದೆ.

ಭಾರತದಲ್ಲಿ ಆಹಾರ ಪದಾರ್ಥಗಳನ್ನು ಸುರಕ್ಷಿತವಾಗಿಡುವುದಕ್ಕಾಗಿ ೧೪೩ ಬಗೆಯ ವಿಷಪೂರಿತ ಕೀಟನಾಶಕಗಳನ್ನು ಬಳಸುತ್ತಾರೆ. ಹೀಗಾಗಿ ನಾವು ತಿನ್ನುವ ಅಕ್ಕಿ, ರಾಗಿ, ಗೋಧಿ, ತರಕಾರಿ ಹಣ್ಣು ಹಂಪಲುಗಳಲ್ಲೂ ವಿಷ ತುಂಬಿದೆ. ಪಂಜಾಬಿನ ಕೃಷಿ ವಿಶ್ವವಿದ್ಯಾಲಯ ನಡೆಸಿದ ಅಧ್ಯಯನದ ಪ್ರಕಾರ ಕ್ರಿಮಿನಾಶಕಗಳ ವಿಷ ನಾವು ತಿನ್ನುವ ಆಹಾರಗಳಲ್ಲಿ ಶೇ. ೧೨ರಿಂದ ೫೩ರವರೆಗೆ ಸೇರಿಕೊಂಡಿದೆ. 'ಇಂಡಿಯನ್ ಕೌನ್ಸಿಲ್ ಆಫ್ ಮೆಡಿಕಲ್ ರಿಸರ್ಚ್' ನಡೆಸಿದ ಪರೀಕ್ಷೆಯ ಪ್ರಕಾರ ನಾವು ಬಳಸುವ ಸುಮಾರು ೨೦೦೦ ಬಗೆಯ ಆಹಾರ ಪದಾರ್ಥಗಳಲ್ಲಿ ಶೇ. ೨೫ರಿಂದ ೯೭.೫ರಷ್ಟು ವಿಷ ತುಂಬಿದೆ. ನಾವು ಎಂತಹ ವಿಷಮಯ ಪರಿಸ್ಥಿತಿಯಲ್ಲಿ ಇದ್ದೇವೆ ಎಂದರೆ ಇಂದಿನ ತಾಯಂದಿರ ಹಾಲಿನಲ್ಲೂ ವಿಷವಿದೆ! ಕೀಟನಾಶಕಗಳ ಪ್ರಯೋಗ ಕೀಟಗಳ ಮೇಲಾದರೂ ಅವು ಕೊನೆಗೆ ಸೇರುವುದು ಮನುಷ್ಯರ ದೇಹವನ್ನೇ! ಕೀಟಗಳು ಬೇಗ ಸಾಯುತ್ತವೆ. ಮನುಷ್ಯನು ನಿಧಾನವಾಗಿ ಕೊರಗಿ ಕೊರಗಿ ಸಾಯುತ್ತಾನೆ.

**ಕಸದ ಸಮಸ್ಯೆ**

ಈ ಲೇಖನ ಬರೆಯುವಾಗ ದೇಶದಲ್ಲಷ್ಟೇ ಅಲ್ಲ ವಿದೇಶದಲ್ಲೂ ಸುದ್ದಿ ಮಾಡಿದ್ದು ಬೆಂಗಳೂರಿನ ಕಸದ ರಾಶಿ! ತ್ಯಾಜ್ಯವು ರಾಷ್ಟ್ರೀಯ ನೈರ್ಮಲ್ಯ ಕೆಡಿಸುವ ಮಾರಕ ವಸ್ತುಗಳಲ್ಲಿ ಒಂದು. ನಗರಗಳ ಮೂಲೆ ಮೂಲೆಗಳಲ್ಲಿ ವಿಲೇವಾರಿಯಾಗದೆ ಉಳಿಯುವ ರಾಶಿ ರಾಶಿ ಕಸ ಪ್ಲೇಗ್, ಮಲೇರಿಯಾದಂತಹ ಮಾರಕ ರೋಗಗಳನ್ನು ತರುತ್ತದೆ. ದುರ್ನಾತ ವಾಂತಿ ಬರಿಸುತ್ತದೆ. ಸೊಳ್ಳೆ, ನೊಣ, ಇತರ ಕ್ರಿಮಿಕೀಟಗಳು ಹೆಚ್ಚುತ್ತವೆ. ಪರಿಸರ ಮಾಲಿನ್ಯದ ಅನೇಕ ರೋಗಗಳು ಸದ್ದಿಲ್ಲದೆ ನಮ್ಮ ಜೀವ ಹಿಂಡುತ್ತವೆ. ಇಂತಹ ಪರಿಸ್ಥಿತಿಯನ್ನು ಈಗ ಬೆಂಗಳೂರು ನಗರ ಎದುರಿಸುತ್ತಿದೆ.

ಹೌದು! ಬೆಂಗಳೂರಿನಲ್ಲಿ ವಿಲೇವಾರಿಯಾಗದೆ ಉಳಿದಿರುವ ತ್ಯಾಜ್ಯ ಈಗ ಜನಾಕ್ರೋಶಕ್ಕೆ ಕಾರಣವಾಗಿದೆ.

**ಬೇಟೆ**

ಹಿಂಸಿಸಬೇಡಿ
ಅವುಗಳ
ಮೃಗಾಲಯದಲಿ;
ಹಸಿದರೆ ಮಾತ್ರವೇ
ಬೇಟೆಯಾಡುವುವು
ಮೃಗಗಳು ಸ್ವಭಾವದಲಿ।

ಡಾ॥ ವಿ. ಪುಗಳೇಂದಿ
ಬಳ್ಳಾರಿ

ಅಷ್ಟೇ ಅಲ್ಲ, ರಾಜ್ಯದ ಉಚ್ಚ ನ್ಯಾಯಾಲಯ ಈ ವಿಷಯದಲ್ಲಿ ಬೆಂಗಳೂರು ಬೃಹತ್ ಮಹಾನಗರ ಪಾಲಿಕೆಯನ್ನು ತರಾಟೆಗೆ ತೆಗೆದುಕೊಂಡಿದ್ದು ಹೀಗೆ: "ಸ್ವಚ್ಛ ಪರಿಸರ ಮತ್ತು ವಾತಾವರಣ ಪ್ರತಿಯೊಬ್ಬ ನಾಗರಿಕನ ಹಕ್ಕು. ಅದೇ ರೀತಿ ಕಸಮುಕ್ತಿ ನಿಮ್ಮ ಪ್ರಾಥಮಿಕ ಕರ್ತವ್ಯ. ಪ್ರತೀ ಬಾರಿ ನಗರ ಸ್ವಚ್ಛಗೊಳಿಸಿದ್ದೇವೆ ಎಂದೇ ಹೇಳುತ್ತೀರಿ. ಪತ್ರಿಕೆಗಳ ವರದಿ–ಛಾಯಾಚಿತ್ರಗಳು ಸುಳ್ಳೇ? ಹಸಿರು ನಗರ ಕಸದ ನಗರವಾಗಿದೆ. ಈ ವಿಷಯದಲ್ಲಿ ರಾಜಕೀಯ ಮಾಡಿದರೆ ಬಿಬಿಎಂಪಿಯನ್ನು ಸೂಪರ್ ಸೀಡ್ ಮಾಡ ಬೇಕಾಗುತ್ತದೆ." ನ್ಯಾಯಪೀಠದ ಈ ಎಚ್ಚರಿಕೆ ಬೆಂಗಳೂರಿನಲ್ಲಿ ಕಸ ದೊಡ್ಡ ಸಮಸ್ಯೆಯಾಗಿರುವದರ ಸೂಚಕ.

"ಸಿಲಿಕಾನ್ ಸಿಟಿ" ಎಂದೇ ವಿಶ್ವ ಖ್ಯಾತಿ ಪಡೆದಿರುವ ಉದ್ಯಾನ ನಗರಿ ಬೆಂಗಳೂರು ಇಂದು ಕಸದ ವಿಷಯದಲ್ಲಿ ಕಸಿವಿಸಿಗೊಂಡಿದೆ. ಇದು ಆಡಳಿತದ ವೈಫಲ್ಯ ಎಂಬ ದೂರು ಕೇಳಿಬರುತ್ತಿದೆ. ಉದ್ಯಾನ ನಗರಿಯಲ್ಲಿ ದಿನನಿತ್ಯ ಹೊರಬೀಳುವ ಕಸದ ಪ್ರಮಾಣ ೪ರಿಂದ ೫ ಸಾವಿರ ಟನ್! ಹೋಟೇಲುಗಳ ತ್ಯಾಜ್ಯವೇ ೨೦೦೦ ಟನ್! ನೆನೆಸಿಕೊಂಡರೇನೇ ಭಯವಾಗುತ್ತದೆ. ಅಂತರರಾಷ್ಟ್ರೀಯ ಖ್ಯಾತಿಯ ನಮ್ಮ ರಾಜಧಾನಿ ಅನೈರ್ಮಲ್ಯದ ಕಾರಣದಿಂದ ಕುಖ್ಯಾತಿ ಪಡೆದರೆ ಅದಕ್ಕಿಂತ ಹೆಚ್ಚಿನ ನಾಚಿಕೆಗೇಡಿನ ವಿಷಯ ಇದೆಯೇ?

ಆದರೆ ಇದು ಕೇವಲ ಬೆಂಗಳೂರಿನ ಕರ್ಮಕಾಂಡ ಮಾತ್ರವಲ್ಲ. ದೇಶದ ಎಲ್ಲ ಬೃಹತ್ ನಗರಗಳೂ ಈ ಸಮಸ್ಯೆಯನ್ನು ಎದುರಿಸುತ್ತಿವೆ. ನಮ್ಮ ದೇಶದ ಮಹಾನಗರಗಳ (ಮೆಟ್ರೋ) ತ್ಯಾಜ್ಯದತ್ತ ಒಂದು ದೃಷ್ಟಿ ಹಾಯಿಸೋಣವೇ?

- ಹೊಸ ದೆಹಲಿ – ಇದು ದೇಶದ ರಾಜಧಾನಿ. ಇಲ್ಲಿಯ ತ್ಯಾಜ್ಯದ ಮೇಲ್ವಿಚಾರಣೆ ಮತ್ತು ವಿಲೇವಾರಿಯ ಜವಾಬ್ದಾರಿ ಮುನ್ಸಿಪಲ್ ಕಾರ್ಪೊರೇಶನ್ ಆಫ್ ದೆಹಲಿಯದು. ಇಲ್ಲಿ ವಿವಿಧ ಮೂಲಗಳಿಂದ ಹೊರಬರುವ ತ್ಯಾಜ್ಯ ೪೦೦೦ ಟನ್. ಹೆಚ್ಚಿನ ತ್ಯಾಜ್ಯವನ್ನು ಭೂ ಒಡಲೊಳಗೆ ಸೇರಿಸಲಾಗುತ್ತಿದೆ. ಕಸವನ್ನು ರಸವನ್ನಾಗಿಸುವ ಕಾರ್ಯ ಮಂದಗತಿಯಿಂದ ಸಾಗಿದೆ. ೨೦೦೮ರಲ್ಲಿ ಕಸವನ್ನು ಜೈವಿಕ ಗೊಬ್ಬರವಾಗಿಸುವ ಘಟಕ ಆರಂಭವಾಯಿತು. ಆದರೂ ತ್ಯಾಜ್ಯ ವಿಲೇವಾರಿ ಈಗಲೂ ಸಮಸ್ಯೆಯೇ ಹೌದು.
- ಮುಂಬಯಿ–ಮುಂಬಯಿ ಮಹಾನಗರ ಪಾಲಿಕೆ ೨೦ ಮೈಕ್ರಾನ್‌ಗಿಂತ ಕಡಿಮೆ ಗುಣಮಟ್ಟದ ಪ್ಲಾಸ್ಟಿಕ್‌ಅನ್ನು ನಿಷೇಧಿಸಿದೆ. ನಿತ್ಯ ಹೊರಬರುವ ತ್ಯಾಜ್ಯ ೭,೦೨೫ ಟನ್. ಬಹುಪಾಲು ತ್ಯಾಜ್ಯ ಭೂಭರ್ತಿ. ಕಸವನ್ನು ಜೈವಿಕ ಗೊಬ್ಬರವಾಗಿಸುವ ಕಾರ್ಯ ಇನ್ನೂ ಪರಿಪೂರ್ಣವಾಗಿಲ್ಲ. ೨೦೨೫ರ ಹೊತ್ತಿಗೆ ಈ ಮಹಾನಗರದಿಂದ ನಿತ್ಯ ೧೦,೦೦೦ ಟನ್ ತ್ಯಾಜ್ಯ ಹೊರಬರುವ ಅಂದಾಜು. ವಿಲೇವಾರಿಯ ವೈಜ್ಞಾನಿಕ ಪರಿಣಾಮಕಾರಿ ವಿಧಾನಗಳ ಅಳವಡಿಕೆ ಇನ್ನೂ ಆಗಬೇಕು.
- ಚೆನ್ನೈ – ತ್ಯಾಜ್ಯ ವಿಲೇವಾರಿಯಲ್ಲಿ ಸಂಪೂರ್ಣ ವಿಫಲ. ನಿತ್ಯ ಹೊರಬರುವ ತ್ಯಾಜ್ಯ ೩,೫೦೦ ಟನ್. ಕಸ ಸಂಸ್ಕರಣೆಯ ಯಾವುದೇ ಘಟಕಗಳಿಲ್ಲ. ಬಹುಪಾಲು ತ್ಯಾಜ್ಯವನ್ನು ಬಯಲಿನಲ್ಲಿ ಸುರಿಯುವುದರಿಂದ ಅನೇಕ ಅನಾರೋಗ್ಯಕರ ಸಮಸ್ಯೆಗಳು ಕಾಣಿಸಿಕೊಂಡಿವೆ. ನಗರಾಡಳಿತವು ಮೂಲದಲ್ಲೇ ಕಸ ವಿಂಗಡಿಸುವ ಕಾರ್ಯ ಆರಂಭಿಸಿದರೂ ಫಲಕಾರಿಯಾಗಿಲ್ಲ.
- ಕೊಲ್ಕತ್ತ – ನಿತ್ಯ ಹೊರಬರುವ ತ್ಯಾಜ್ಯ ೩,೦೦೦ ಟನ್. ಬಹುಪಾಲು ತ್ಯಾಜ್ಯ ಭೂಭರ್ತಿ. ಎಲ್ಲ ಮನೆಗಳಿಂದ ಕಸ ಸಂಗ್ರಹಿಸುವ ಕಾರ್ಯ ಇನ್ನೂ ಕೈಗೂಡಿಲ್ಲ. ತ್ಯಾಜ್ಯವನ್ನು ಜೈವಿಕ ಗೊಬ್ಬರವನ್ನಾಗಿ ಪರಿವರ್ತಿಸುವ ಘಟಕ ಆರಂಭವಾಗಿದ್ದರೂ ಪರಿಣಾಮಕಾರಿಯಾಗಿಲ್ಲ. ಕಾರಣ ಹೆಚ್ಚಿನ ತ್ಯಾಜ್ಯ ಭೂಭರ್ತಿ ಆಗುತ್ತಿದೆ.

ಇದು ದೇಶದ ಮಹಾನಗರಗಳ ಕಥೆಯಾದರೆ ಉಳಿದ ನಗರಗಳಲ್ಲೂ ಪರಿಸ್ಥಿತಿ ಭಿನ್ನವಾಗಿಲ್ಲ. ಬಹುತೇಕ ತಾಲ್ಲೂಕು-ಜಿಲ್ಲಾ ಕೇಂದ್ರಗಳಲ್ಲೂ ಕಸ ವಿಲೇವಾರಿಯ ಸಮಸ್ಯೆ ಆಗಾಗ ಉಲ್ಬಣಗೊಳ್ಳುತ್ತಿದೆ. ಉದಾಹರಣೆಗೆ, ಸಾಂಸ್ಕೃತಿಕ ನಗರಿ ಮೈಸೂರಿನಲ್ಲಿ ದಿನನಿತ್ಯ ಕೇವಲ ೪೦೦ ಟನ್ ತ್ಯಾಜ್ಯ ಹೊರಬಂದರೂ ವಿಲೇವಾರಿ ಸಮಸ್ಯೆಯಾಗಿದೆ. ಮಹಾರಾಜರು ಮೈಸೂರಿನ ರಾಸುಗಳಿಗೆ ಮೇವು ಪೂರೈಸಲು ರೂಪಿಸಿದ ಸ್ಯೂಯೆಜ್ ಫಾರಂ ಸದ್ಯ ಕಸ ಸಂಗ್ರಹಣೆಯ ಸ್ಥಳ. ೪೦ ಎಕರೆಯಲ್ಲಿ ಕಸ ಸಂಗ್ರಹಿಸಲಾಗುತ್ತಿದ್ದು, ಕಸ ವಿಲೇವಾರಿಯಾಗದೆ ಹಾಗೇ ಉಳಿದಿದ್ದು, ದುರ್ನಾತ ಜನಜೀವನವನ್ನು ಘಾಸಿಗೊಳಿಸಿದೆ. ಇದು ಹೆಚ್ಚೂ ಕಡಿಮೆ ಎಲ್ಲ ನಗರ-ಪಟ್ಟಣಗಳ ಕಥೆಯೇ ಆಗಿದೆ.

**ಮುಗಿಸುವ ಮುನ್ನ**

ನಮ್ಮ ರಾಷ್ಟ್ರೀಯ ನೈರ್ಮಲ್ಯದತ್ತ ಗಮನ ಹರಿಸಿದಾಗ ನಿಜಕ್ಕೂ ಭಯವಾಗುತ್ತದೆ. ದೇಶದ ಎಲ್ಲ ನದಿಗಳು ಮಾಲಿನ್ಯಗೊಂಡಿವೆ. ಜೊತೆಗೆ ಅಭಿವೃದ್ಧಿ ಹೆಸರಿನಲ್ಲಿ ಜಾರಿಮಾಡಿರುವ ಅನೇಕ ಯೋಜನೆಗಳಿಂದು ಪರಿಸರಕ್ಕೆ ಮಾರಕವಾಗಿ ಪರಿಣಮಿಸಿವೆ. ಆದರೂ ಸರಕಾರಗಳು ಇಂಥ ಯೋಜನೆಗಳನ್ನು ಜನರ ಪ್ರತಿಭಟನೆಗೆ ಸವಾಲೆಂಬಂತೆ ಜಾರಿಗೊಳಿಸುತ್ತಲಿವೆ. ಇದಕ್ಕೊಂದು ಜ್ವಲಂತ ಉದಾಹರಣೆಯೆಂದರೆ ೧೯೬೭ರಿಂದಲೂ ರಾಜಕೀಯ ದಾಳವಾಗಿ ಸುದ್ದಿ ಮಾಡುತ್ತಿರುವ ಶಿವಮೊಗ್ಗ ಜಿಲ್ಲೆಯ ದಂಡಾವತಿ ಅಣೆಕಟ್ಟು! ಈ ಅಣೆಕಟ್ಟು ೪ ಹಳ್ಳಿಗಳನ್ನು ಸಂಪೂರ್ಣವಾಗಿ ಹಾಗೂ ೧೧ ಹಳ್ಳಿಗಳನ್ನು ಭಾಗಶಃ ಆಹುತಿ ತೆಗೆದುಕೊಳ್ಳಲಿದೆ. ಅಲ್ಲದೆ ೧೬೩೮ ಎಕರೆ ಸಾಗುವಳಿ ಭೂಮಿ ಹಾಗೂ ೧೧೦ ಎಕರೆ ಅರಣ್ಯ ಅಳಿಸಿಹೋಗಲಿವೆ. ಜೊತೆಗೆ, ೧೪೦ ಎಕರೆ ಅರಣ್ಯ ಪ್ರದೇಶ ಭೂಮಿ ಕಾಲುವೆಗೆ ಬಳಕೆಯಾಗಲಿದೆ. ಮಳೆ ಕಡಿಮೆಯಾಗಿರುವ ಇಂದಿನ ದಿನಗಳಲ್ಲಿ ಮಳೆಯನ್ನೇ ನಂಬಿ ನಿರ್ಮಿಸುತ್ತಿರುವ ಈ ಡ್ಯಾಂ ಪರಿಸರ ಮಾಲಿನ್ಯಕ್ಕೆ ಇನ್ನೊಂದು ಕೊಡುಗೆಯಷ್ಟೆ.

ಇನ್ನು ನಗರ ಪಾಲಿಕೆಗಳ ನಿಧಾನಗತಿಯ ಮಾಲಿನ್ಯ ನಿರ್ಮೂಲನಾ ಕಾರ್ಯವೈಖರಿ ಜನಸಾಮಾನ್ಯರನ್ನು ರೊಚ್ಚಿಗೇಳಿಸಿದೆ. ನಾಗರಿಕರ ಪ್ರತಿಭಟನೆಗಳು ನಗರ ಪಾಲಿಕೆಗಳಿಗೆ ಚುರುಕು ಮುಟ್ಟಿಸಿದರೂ ಯಾವುದೇ ನಿರೀಕ್ಷಿತ ಬದಲಾವಣೆ ಕಂಡುಬಂದಿಲ್ಲ ಎಂಬುದಕ್ಕೆ ಬೆಂಗಳೂರೇ ಸಾಕ್ಷಿ. ಬೆಂಗಳೂರಿನ ನಗರ ಪಾಲಿಕೆ ಎಲ್ಲಿಯ ತನಕ ಮೈಮರೆತಿತ್ತೆಂದರೆ ಆಗಲೇ ಹೇಳಿದಂತೆ ರಾಜ್ಯದ ಹೈಕೋರ್ಟ್ ಮಹಾನಗರ ಪಾಲಿಕೆಯನ್ನೇ ಸೂಪರ್‌ಸೀಡ್ ಮಾಡುವ ಬೆದರಿಕೆ ಹಾಕಿತು! ಇದು ನಮ್ಮ ಪರಿಸರ ಪ್ರಜ್ಞೆಗೆ ಸಾಕ್ಷಿ. ಹೀಗೆ ಕಾಡು ನಾಶವಾಗಿ, ನಾಡು ಬೆಳೆದು, ನಾಡಿನಿಂದ ಮನುಷ್ಯ ಬಿಡುವ ತ್ಯಾಜ್ಯದಿಂದ ಇಡೀ ಪರಿಸರ ಮಾರಣಾಂತಿಕ ಹಂತ ತಲುಪಿದೆ. ಸಮೀಕ್ಷೆಯ ಪ್ರಕಾರ ಭಾರತದ ೬೦ ನಗರಗಳಲ್ಲಿ ವಾಯು ಮಾಲಿನ್ಯ ಕಳವಳಕಾರಿ ಹಂತ ತಲುಪಿದೆ. ಭಾರತದ ರಾಜಧಾನಿ ದೆಹಲಿ ಜಗತ್ತಿನ ೪ನೇ ಅತ್ಯಂತ ಮಲಿನಗೊಂಡಿರುವ ಮಹಾನಗರ! ಈಗಾಗಲೇ ಉದ್ಯಾನ ನಗರಿ ಬೆಂಗಳೂರಿನ ಕಥೆಯನ್ನು ಕೇಳಿಯೇ ಇದ್ದೀರಿ. ಇದಕ್ಕೆಲ್ಲ ಪರಿಹಾರಾರ್ಥವಾಗಿ 'ನಾವು ಪರಿಸರ ಕಾಪಾಡಿದರೆ ಪರಿಸರ ನಮ್ಮನ್ನು ಕಾಪಾಡುತ್ತದೆ' ಎಂಬ ಮಾತಂತೂ ನಿರ್ವಿವಾದ.

ಎನ್. ಆರ್. ಪಾಟೀಲ
ಹಿಂಡಲಗಾ, ಬೆಳಗಾವಿ.

## ಅಭಿನಂದನೆ

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ನೀಡುವ ಪ್ರತಿಷ್ಠಿತ ೨೦೧೩ರ ಸಾಲಿನ ಪಂಪ ಪ್ರಶಸ್ತಿಯನ್ನು ನಾಡೋಜ, ಕವಿ, ಶತಾಯುಷಿ ಕಯ್ಯಾರ ಕಿಞ್ಞಣ್ಣ ರೈ ಅವರಿಗೆ ನೀಡಿ ಗೌರವಿಸಲಾಗಿದೆ. ಪ್ರಶಸ್ತಿ ಪುರಸ್ಕೃತರಿಗೆ ನವಕರ್ನಾಟಕ ಮತ್ತು ಹೊಸತು ಬಳಗದ ಅಭಿನಂದನೆಗಳು.




## ವಿಜ್ಞಾನ ಚಿಂತಾಮಣಿ ಸಿ. ಎನ್. ಆರ್. ರಾವ್

ಜಗದ್ವಿಖ್ಯಾತ ! ಭಾರತದ ಅನರ್ಘ್ಯ ವಿಜ್ಞಾನ ರತ್ನ
ಕಠಿಣ ಸಮರ್ಪಣ, ಪ್ರಾಂಜಲ ಮನಸ್ಸಿನ ಸದ್ಗುಣ ಸಂಪನ್ನ
ರಾಮಚಂದ್ರ ರಾಯರ ಸಂಶೋಧನೆ, ಮಿತಿಯಿಲ್ಲದ ಏಣಿ
ಚಿಂತಾಮಣಿ ನಾಗೇಶರ ವರಕುವರನೇ 'ವಿಜ್ಞಾನ ಚಿಂತಾಮಣಿ' !

ಆಧುನಿಕ ವಸ್ತುವಿಜ್ಞಾನದ ಸೋಲಿಲ್ಲದ ಸರದಾರ
ಅಧಿವಾಹಕ, ಲೋಹದಾಕ್ಸೈಡ್ ಸಂಶೋಧನೆಯ ಹರಿಕಾರ
ಘನಸ್ಥಿತಿ ರಸಾಯನ ವಿಜ್ಞಾನ, ನ್ಯಾನೊತಂತ್ರಜ್ಞಾನದ ದಿಗ್ಗಜ
ಗ್ರ್ಯಾಫೀನ್, ಕಾರ್ಬನ್ ನ್ಯಾನೊನಳಿಗೆಗಳ ಅಗ್ರಜ !

ಸಾವಿರಾರು ಸಂಶೋಧನಾ ಪ್ರಬಂಧಗಳ ಕರ್ತೃ
ಸಾಲು ಸಾಲು ಸಂಶೋಧನಾ ಸಂಸ್ಥೆಗಳ ನಿರ್ಮಾತೃ
ನೆಲವೂ ನಮಿಸಿತ್ತು, ಸಿ.ಎನ್.ಆರ್. ಅವರ ದೇಶ ಭಕ್ತಿಗೆ
ಬಾನ್ ಬೆರಗಾಗಿತ್ತು, ಇವರ ಸಾವಿರ ಅಶ್ವ ಶಕ್ತಿಗೆ !

ಮೆಚ್ಚುಗೆಯ ಪದಕಗಳೆಷ್ಟೋ ಮಿನುಗುತಿವೆ ಕೊರಳಲಿ
ದೇಶ – ವಿದೇಶಗಳ ಪ್ರಶಸ್ತಿ ಶೋಭಿಸುತಿವೆ ಇವರ ಮುಕುಟದಲಿ
ಸಿ.ಎನ್.ಆರ್. ರಾವ್ ಸಾಧನೆ ಹತ್ತು ಜನ್ಮಗಳಿಗಾಗುವಷ್ಟು
ಯುವಸಮೂಹ ದಂಗಾಗಿತ್ತು, ಇಳಿಯದ ಪ್ರಾಯದುತ್ಸಾಹ ಅನಂತಷ್ಟು !

*(ಜೂನ್ 30ಕ್ಕೆ ಭಾರತರತ್ನ ಸಿ.ಎನ್.ಆರ್. ರಾವ್ ಅವರಿಗೆ 80 ವರ್ಷ ತುಂಬುತ್ತದೆ. ಈ ಸಂದರ್ಭಕ್ಕೆ ಅವರ ವಿದ್ಯಾರ್ಥಿ ಎಸ್. ಮಂಜುನಾಥ ಬರೆದ ಕವನ)*

**ಎಸ್. ಮಂಜುನಾಥ**
ಮೇಡಂ ಕ್ಯೂರಿ ವಿಜ್ಞಾನ
ಅಕಾಡೆಮಿ, ಬಳ್ಳಾರಿ











# ಗ್ರಹಗಳ ಚಲನೆಯ ಪ್ರಾತ್ಯಕ್ಷಿಕೆ

ತಿಳಿನೀಲಿ ಆಕಾಶ ಕ್ರಮೇಣ ಬೂದುಬಣ್ಣಕ್ಕೆ ತಿರುಗಿ, ಗಾಢ ಕಪ್ಪು ಮೋಡಗಳನ್ನು ಪೇರಿಸುವ ಈ ತಿಂಗಳಲ್ಲಿ ನಭಾವಲೋಕನಕ್ಕೆ ಅವಕಾಶ ಕಡಿಮೆ. ಆದರೂ ಮೋಡಗಳ ನಡುವಿನ ಬಿರುಕುಗಳಲ್ಲಿ ಇಣುಕುವ ಆಕಾಶ ಸಿಗಬಹುದು. ತಿಂಗಳ ಮೊದಲ ವಾರದಲ್ಲಿ ನಮ್ಮನ್ನಾಕರ್ಷಿಸುವ ಎರಡು ಗ್ರಹಗಳು ಶನಿ ಮತ್ತು ಮಂಗಳ. ಪಶ್ಚಿಮದ ಅಂಚಿನಲ್ಲಿ ಗುರುಗ್ರಹವೂ ಕಾಣುವುದು. ತಿಂಗಳ ಮೊದಲ ದಿನ ಮತ್ತು ಕೊನೆಯ ದಿನ ಗುರು ಮತ್ತು ಚಂದ್ರ ಕನಿಷ್ಠ ಅಂತರದಲ್ಲಿ ಕಾಣುತ್ತವೆ. ಆದರೆ ಅವು ಕಾಣುವಾಗ ದಿಗಂತದಿಂದ ಎತ್ತರವನ್ನು ಗಮನಿಸಿ. ದಿನೇ ದಿನೇ ಗ್ರಹಗಳ ಸ್ಥಾನ ಬದಲಾಗುವ ಸೂಕ್ಷ್ಮ ಸುಳಿವು ಸಿಗುತ್ತದೆ. ಇದೇ ಪ್ರಯೋಗವನ್ನು ಮಂಗಳ ಗ್ರಹಕ್ಕೆ ಅನ್ವಯಿಸಿದಲ್ಲಿ ಖಚಿತ ಫಲಿತಾಂಶ ಸಿಗುತ್ತದೆ. ನೀಲಿಬಣ್ಣದ ಚಿತ್ತಾ ನಕ್ಷತ್ರದ ಪಕ್ಕ ಕಿತ್ತಲೆ ಬಣ್ಣದ ಮಂಗಳ ಸ್ಫುಟವಾಗಿ ಕಾಣುವುದು. ಈ ಬಣ್ಣದ ವ್ಯತ್ಯಾಸದಿಂದ ಈ ಎರಡೂ ಚುಕ್ಕೆಗಳನ್ನು ಗುರುತಿಸಿ ಅವುಗಳ ನಡುವಿನ ಅಂತರವನ್ನು ತಿಂಗಳುದ್ದಕ್ಕೂ ಗಮನಿಸುತ್ತಾ ಬನ್ನಿ. ಇದರಿಂದ ಮಂಗಳ ಯಾವ ದಿಕ್ಕಿಗೆ ಚಲಿಸುತ್ತಿದೆ ಎಂಬುದರ ಅಂದಾಜು ಸಿಗುತ್ತದೆ. ಎರಡೂ ಚುಕ್ಕೆಗಳು ಪೂರ್ವದಿಂದ ಪಶ್ಚಿಮಕ್ಕೆ ಚಲಿಸುವುದೇನೋ ನಿಜ. ಆದರೆ ಅದಲ್ಲದೆ ಪರಸ್ಪರ ಚಲನೆಯೂ ಇದೆ ಎಂದು ಇದರಿಂದ ತಿಳಿಯುತ್ತದೆ. ದಿಗಂತದ ಅಂಚಿನ ಅಂಟಾರೆಸ್ (ಆರೆಸ್ ಅಂದರೆ ಮಂಗಳ, ಅದರ ಪ್ರತಿಸ್ಪರ್ಧಿ), ಜ್ಯೇಷ್ಠಾ ನಕ್ಷತ್ರವೂ ಕೆಂಪು ಬಣ್ಣದ ಚುಕ್ಕೆ. ಈ ಎರಡೂ ಕೆಂಪು ಚುಕ್ಕೆಗಳ (ಒಂದು ಮಿನುಗುವುದು – ಇನ್ನೊಂದು ಮಿನುಗುವುದಿಲ್ಲ) ನಡುವೆ ಶನಿಗ್ರಹವಿದೆ. ತುಸು ಉತ್ತರಕ್ಕೆ ಕೆಂಪು ಬಣ್ಣದ ಇನ್ನೊಂದು ಚುಕ್ಕೆ ಇದೆ. ಅದೇ ಸ್ವಾತಿ. ಅದರ ಉತ್ತರಕ್ಕೆ ಸಪ್ತರ್ಷಿ ಮಂಡಲವಿದೆ.

ದಕ್ಷಿಣದ ಅಂಚಿನಲ್ಲಿ ಕಿನ್ನರ (ಸೆಂಟಾರೆಸ್), ತ್ರಿಶಂಕು (ದಕ್ಷಿಣ ಶಿಲುಬೆ ಅಥವಾ ಕ್ರಕ್ಸ್) ಕಾಣುತ್ತವೆ. ಆಗ್ನೇಯ ದಿಕ್ಕಿನಲ್ಲಿ ಆಕಾಶಗಂಗೆಯ ಹರಿವನ್ನೂ ಗುರುತಿಸಬಹುದು. ನಕ್ಷೆ ಸಂಜೆಯ ೭ ಗಂಟೆಗೆ ಅನ್ವಯವಾಗುವುದು. ಗುರುಗ್ರಹದ ಸಹಾಯದಿಂದ ಮಿಥುನವನ್ನು, ಅದರ ಪಕ್ಕದ ಸಿಂಹವನ್ನೂ ಗುರುತಿಸಬಹುದು. ಚಿತ್ತಾ ಮತ್ತು ಮಂಗಳ ಇರುವುದು ಕನ್ಯಾರಾಶಿಯಲ್ಲಿ. ಅದರ ತುಸು ದಕ್ಷಿಣಕ್ಕೆ ಹಸ್ತಾ ಎಂಬ ನಕ್ಷತ್ರಗಳ ಗುಂಪು ಕಾಣುತ್ತದೆ. ಶನಿ ಗ್ರಹ ಇರುವುದು ತುಲಾರಾಶಿಯಲ್ಲಿ. ಅಲ್ಲಿ ಪ್ರಕಾಶಮಾನವಾದ ನಕ್ಷತ್ರಗಳಿಲ್ಲ. ಉತ್ತರಕ್ಕೆ ಸ್ವಾತಿಯ ಆಸುಪಾಸಿನ ಸಹದೇವ (ಬೂಟಿಸ್) ಉರಗಧರ (ಒಫಿಯೂಕಸ್) ಮತ್ತು ಭೀಮ (ಹರ್ಕ್ಯೂಲಿಸ್) ಇವುಗಳನ್ನು ಕಾಣಬಹುದು. ಶುಕ್ರಗ್ರಹ ಮುಂಜಾವಿನಲ್ಲಿ ಕಾಣುವುದು.

ಈ ತಿಂಗಳಲ್ಲಿಯೂ ಶನಿಗ್ರಹವನ್ನು ಚಂದ್ರ ಮರೆಮಾಡುವ ಆಚ್ಛಾದನೆ ನಡೆಯಲಿದೆ. ಆದರೆ, ಆ ನೋಟ ನಮಗೆ ಲಭ್ಯವಿಲ್ಲ. ಬುಧಗ್ರಹದ ಹಿನ್ನಡೆ ೭ರಂದು ಆರಂಭವಾಗಿ ಅದು ೧೯ರಂದು ಸೂರ್ಯನ ಜೊತೆಗೂಡುವುದರಿಂದ ಅದನ್ನು ನೋಡುವುದು ಸಾಧ್ಯವಿಲ್ಲ.

ದಕ್ಷಿಣಾಯನ ೨೧ರಂದು ನಡೆಯಲಿದೆ. ಅತಿ ದೀರ್ಘ ಹಗಲಿನ ದಿನ ಅದು. ಆ ನಂತರ ಬೇಸಿಗೆ ಮುಕ್ತಾಯ ಎನ್ನಬಹುದು.




### ಖಗೋಳ ದಿನಚರಿ

ಜೂನ್ ೧ ಸಂಜೆ ಗುರು–ಚಂದ್ರ ನಡುವೆ ೬ ಡಿಗ್ರಿ ಅಂತರ
೩ ಚಂದ್ರ–ಭೂಮಿ ನಡುವೆ ಗರಿಷ್ಠ ದೂರ
೫ ಚಾಂದ್ರಮಾಸದ ಮೊದಲ ಪಾದ
೭ ಬುಧಗ್ರಹದ ಹಿನ್ನಡೆ ಆರಂಭ
೮ ಸಂಜೆ ಮಂಗಳ–ಚಂದ್ರ ನಡುವೆ ೨ ಡಿಗ್ರಿ ಅಂತರ
೧೦ ಸಂಜೆ ಶನಿ–ಚಂದ್ರ ನಡುವೆ ೨ ಡಿಗ್ರಿ ಅಂತರ (ಆಚ್ಛಾದನೆ ಕಾಣುವುದಿಲ್ಲ)
೧೩ ಹುಣ್ಣಿಮೆ ೯:೩೧ಕ್ಕೆ
೧೫ ಚಂದ್ರ–ಭೂಮಿ ನಡುವೆ ಕನಿಷ್ಠ ದೂರ
೧೯ ಚಾಂದ್ರಮಾಸದ ಕೊನೆಯ ಪಾದ; ಬುಧಗ್ರಹದ ಯುತಿ
೨೧ ದಕ್ಷಿಣಾಯನ
೨೪ ಮುಂಜಾವು ಶುಕ್ರ–ಚಂದ್ರ ನಡುವೆ ೪ ಡಿಗ್ರಿ ಅಂತರ
೨೭ ಅಮಾವಾಸ್ಯೆ ೧೩:೩೮ಕ್ಕೆ
೨೯ ಸಂಜೆ ಗುರು–ಚಂದ್ರ ನಡುವೆ ೬ ಡಿಗ್ರಿ ಅಂತರ
೩೦ ಚಂದ್ರ–ಭೂಮಿ ನಡುವೆ ಗರಿಷ್ಠ ದೂರ

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧



*ಜೂನ್ ೧ ಸಂಜೆ*
*ಗುರು–ಚಂದ್ರ ನಡುವೆ ೬ ಡಿಗ್ರಿ ಅಂತರ*



*ಜೂನ್ ೨೪ ಮುಂಜಾವು*
*ಶುಕ್ರ–ಚಂದ್ರ ನಡುವೆ ೪ ಡಿಗ್ರಿ ಅಂತರ*

ಪಿ. ಬಿ. ಪ್ರಸನ್ನ

# ದರ್ಶನ

ಎಲ್ರು, "ಹೌದು... ಹೌದು... ದರ್ಶನದಲ್ಲಿ ಕೇಳಿಸಿ ನೋಡುವಾ" ಅಂತ ಹೇಳಿದ್ರು. ಬಲ್ಲಾಳ್ರಿಗೆ ಅದೂ ಒಂದು ಪಾಯಿಂಟ್ ಸರಿ ಅಂತ ಕಂಡಿತು. "ನೀವು ಹೇಳಿದ ಹಾಗೆ ದರ್ಶನದಲ್ಲಿ ಈ ಪ್ರಶ್ನೆ ಇಡುವಾ. ಮುಂದಿನ ಶುಕ್ರವಾರದ ದರ್ಶನದಲ್ಲಿ ಇದೇ ಮೈನ್ ಪ್ರಶ್ನೆ. ಅವತ್ತು ಹೊರಗಿನವ್ರ ಪ್ರಶ್ನೆಗಳಿಗೆ ಅವಕಾಶ ಕೊಡುದು ಬೇಡ. ದೇವಸ್ಥಾನದ ನಿಮಿತ್ತ ವಿಶೇಷ ದರ್ಶನ ಎರೇಂಜ್ ಮಾಡುವಾ. ದರ್ಶನದಲ್ಲಿ ಗ್ಯಾರಂಟಿ ಯಾರು ಕದ್ದದ್ದು ಅಂತ ಗೊತ್ತಾಗ್ತದೆ. ಕೆಲವು ವರ್ಷಗಳ ಹಿಂದೆ ಹೀಗೆ ಯಾರೋ ಒಬ್ಬ ಕದೀಲಿಕ್ಕೆ ಟ್ರೈ ಮಾಡಿದ್ದ. ದರ್ಶನದಲ್ಲಿ ಕೇಳಿದಾಗ ಯಾರು ಕದೀಲಿಕ್ಕೆ ಪ್ರಯತ್ನಪಟ್ಟಿದ್ದಾನಾ ಅವ್ನು ಒಂದು ವಾರದಲ್ಲಿ ರಕ್ತ ಕಾರಿ ಸಾಯ್ತಾನೆ ಅಂತ ನುಡಿಕಟ್ಟಾಗಿತ್ತು. ಹಾಗೇ ಆಯ್ತು ನೋಡಿ. ಉಬ್ಜಿಲದ ಶೇಖರ ನುಡಿಕಟ್ಟಾದ ಮರುದಿವ್ಸವೇ ರಕ್ತ ಕಾರಿ ಸತ್ತ. ಸಾಯುವ ಮೊದ್ಲು ಅವ್ನು ತಾನು ಎರ್ಮಾಳು ಮಾಕಳಿ ದೇವಸ್ಥಾನದಲ್ಲಿ ಕಳವು ಮಾಡ್ಲಿಕ್ಕೆ ಟ್ರೈ ಮಾಡಿದ್ದೆ ಅಂತ ಮನೆಯವ್ರತ್ರ ಒಪ್ಪಿಕೊಂಡಿದ್ದ ಅಂತೆ" ಅಂತ ಬಲ್ಲಾಳ್ರು ಹೇಳಿದ್ರು.




**ಮಾ**ಕಾಳಿ ದೇವಸ್ಥಾನದ ತೇರು ಮುಗ್ಸಿ ರಾತ್ರಿ ಕಡುಬು ಹಾಲು ತಿಂದು ಮಲಗಿದ್ದ ಎರ್ಮಾಳಿನ ಬ್ರಾಮಣ್ರನ್ನು ಹೊಟ್ಟೆಯಲ್ಲಿ ಉಂಟಾಗಿದ್ದ ಗುಳುಗುಳು ಮ್ಯೂಸಿಕ್ಕು ಸರೀ ಬೆಳಗ್ಗೆ ಆಗುವ ಮೊದ್ಲೇ ಎಬ್ಬಿಸಿತ್ತು. ಶೂದ್ರರೆಲ್ಲ ಮರುದಿವ್ಸ ನಡೀಲಿಕ್ಕಿದ್ದ ಜುಮಾದಿ ಕೋಲದ ಮತ್ತು ಕೋರಿ ರೊಟ್ಟಿಯ ಕನ್ಸು ಕಾಣ್ತಾ ಮಲ್ಗಿದ್ರು. ಅವ್ರಿಗೂ ಬೆಳಿಗ್ಗೆ ಬೇಗ ಎಚ್ಚರಿಕೆ ಆಗಿತ್ತು. ಎರ್ಮಾಳು ಬೀಡಿನ ಗುರ್ಕಾರ್ರಾದ ರವಿರಾಜ ಬಲ್ಲಾಳ್ರು ಇವತ್ತು ಕೋಲದಲ್ಲಿ ತಾನು ಯಾವ ರೀತಿ ರೈಸ್‌ಬೇಕು ಅಂತ ಎಣಿಸ್ತಾ ಮಂಚದಲ್ಲಿ ಹೊರಳಾಡ್ತಾ ಇದ್ರು. ಅಷ್ಟೊತ್ತಿಗೆ, "ಗುರ್ಕಾರ್ರೆ !... ಗುರ್ಕಾರ್ರೆ !... ...ಬೇಗ ಬನ್ನಿ !... ಬೇಗ ಬಾಗಿಲು ತೆಗೆಯಿರಿ... ..." ಅಂತ ಕೂಗಿದ್ದು ಕೇಳಿತು. ಬಲ್ಲಾಳ್ರು ಬೇಗ ಎದ್ದು, ಮುಂಡನ್ನು ಎತ್ತಿ ಕಟ್ಟಿಕೊಂಡು ಹೊರಗೆ ಬಂದ್ರು. ಬಾಗ್ಲು ತೆಗ್ದು ನೋಡ್ತಾರೆ, ಮಾಕಾಳಿ ದೇವಸ್ಥಾನದ ಭಟ್ರು ರಾಮೈತಾಳ್ರು.

"ಎಂತ ಭಟ್ರೇ ?... ಇಷ್ಟು ಬೆಳಿಗ್ಗೆ ಬೆಳಿಗ್ಗೆ ಓಡಿ ಬಂದಿದ್ದೀರಿ ? ಬೆವ್ರಿ ಚಂಡಿ ಆಗಿದ್ದೀರಿ ? ಎಂತ ಕತೆ ?" ಬಲ್ಲಾಳ್ರು ಕೇಳಿದ್ರು.

"ಗುರ್ಕಾರ್ರೇ... ಎಂತಾಂತ ಹೇಳುದು ?... ದೇವಿಗೆ ನಿನ್ನೆ ಹಾಕಿದ ನೆಕ್ಲೇಸು, ನಾಲಿಗೆ, ಕರಿಮಣಿ ಒಂದೂ... ಒಂದೂ..."

"ಎಂತಾ ?!... ಒಂದೂ..."

"ಒಂದೂ ಕಾಣ್ತ ಇಲ್ಲ ಗುರ್ಕಾರ್ರೇ !..." ರಾಮೈತಾಳ್ರಿಗೆ ಮೈ ನಡುಕ ಇನ್ನೂ ಪೂರ್ತಿ ನಿಂತಿರ್ಲಿಲ್ಲ. "ಒಂಚೂರು ನೀ... ನೀರು ಕೊಡಿ ಗುರ್ಕಾರ್ರೇ..." ಶೂದ್ರನ ಮನೆಯಲ್ಲಿ ನೀರು ಕುಡಿಯುದು ಹೇಗೆ ಅಂತ ಒಮ್ಮೆ ಎಣಿಸಿದ್ರೂ ಆಪದ್ಧರ್ಮದಲ್ಲಿ ಇದಕ್ಕೆಲ್ಲ ಎಂತದೂ ತೊಂದ್ರೆ ಇಲ್ಲಾಂತ ರಾಮೈತಾಳ್ರು ಧೈರ್ಯ ತಂದುಕೊಂಡ್ರು !

"ಇಗಾ... ಭಟ್ರಿಗೆ ಒಂದು ಲೋಟೆ ಹಾಲು ತಗೊಂಡು ಬಾ" ಅಂತ ಬಲ್ಲಾಳ್ರು




ಗುರ್ಕಾರ್ರಿತಿಯ ಹತ್ರ ಹೇಳಿದ್ರು. ಅವ್ರಿಗೆ ಮಂಡೆ ಬಿಸೀss ಆಗ್ಲಿಕ್ಕೆ ಸುರುವಾಯ್ತು ಐತಾಳ್ರು ಹೇಳಿದ್ದನ್ನು ಕೇಳಿ.

ಎರ್ಮಾಳು ಮಾಕಾಳಿ ದೇವಸ್ಥಾನ ಅಂದ್ರೆ ಸುತ್ತಮುತ್ತಕ್ಕೆಲ್ಲ ಭಾರೀ ಫೇಮಸ್ ದೇವಸ್ಥಾನ. ದೇವಿದ್ದು ಕಾರ್ಣಿಕ ಅಂದ್ರೆ ಕಾರ್ಣಿಕ. ದೇವಿಯನ್ನು ಬೈದವ್ರು ಮೊನ್ನೆ ಮೊನ್ನೆ ತಂಕವೂ ರಕ್ತ ಕಾರಿ ಹೈವೆ ಸರ್ಕಲ್‌ನ ಹತ್ರ ಬಿದ್ದು ಸಾಯ್ತಿದ್ರು. ಈಗ ಹೈವೇ ಸರ್ಕಲ್‌ನಲ್ಲಿ ಸೋಡಿಯಂ ಲೈಟ್ ಹಾಕಿದ್ರಿಂದ ರಕ್ತ ಕಾರಿ ಸಾಯುವವ್ರ ಸಂಖ್ಯೆ ಕಡಿಮೆ ಆಗಿದೆ. “ಗರ್ಭಗುಡಿಗೆ ಇಲೆಕ್ಟ್ರಿಕ್ ಲೈಟು ಹಾಕಿದ್ಮೇಲೆ ಮತ್ತು ದ್ಯಾವಸ್ಥಾನದ ಸುತ್ಮುತ್ತ ಸೋಡಿಯಂ ಲೈಟು ಹಾಕಿದ್ಮೇಲೆ ದೇವಿದ್ದು ಕಾರ್ಣಿಕ ಸ್ವಲ್ಪ ಡೌನಾಗಿದೆ” ಅಂತ ಎರ್ಮಾಳಿನ ಬಿಳಿತಲೆಗಳು ಯಾವಗ್ಲೂ ಪರೆಂಚ್ತಾ ಇರುದುಂಟು.

ಪ್ರತೀ ಶುಕ್ರವಾರ ನಡಿಯುವ ದೇವಿಯ ದರ್ಶನ ಇಲ್ಲಿ ಭಾರೀ ಫೇಮಸ್. ಸುತ್ಮುತ್ತ ಜನ್ರು ಕಾಯಿಲೆ ಕಸಾಲೆ ಬಂದಾಗ ದನಕರು ಕಳ್ದುಹೋದಾಗ, ಕೋಳಿ ಕಾಣದೆ ಇದ್ದಾಗ, ಬೀಡಿ ಬ್ರ್ಯಾಂಚಿಗೆ ಹೋದ ಮಗ್ಳು ಹಿಂದಕ್ಕೆ ಬರ್ದೇ ಇದ್ದಾಗ ದರ್ಶನದಲ್ಲಿ ಪ್ರಶ್ನೆ ಕೇಳಿಸ್ತಾ ಇರ್ತಾರೆ. ರವಿರಾಜ ಬಲ್ಲಾಳ್ರು ದೇವಿಯ ಪಾತ್ರಿಯ ಹತ್ರ ಬಂದವ್ರ ಕಷ್ಟಗಳ ಬಗ್ಗೆ ವಿವರಿಸಿ, ಬಂದವ್ರು ಹೇಳಿದ್ದಕ್ಕಿಂತ ಡೀಟೈಲಾಗಿ ಹೇಳ್ತಾರೆ. ದೇವಿ ಎಂಥದೋ ‘ಮುಣು ಮುಣು’ ಅಂತ ಹೇಳಿ ಒಂದಷ್ಟು ಸನ್ನೆ ಮಾಡ್ತಾಳೆ. ಕೂಡ್ಲೆ ಬಲ್ಲಾಳ್ರು, “ದೇವಿ ಹೇಳ್ತಿದ್ದಾಳೆ ನಿಮ್ಮ ಕಷ್ಟ ಪರಿಹಾರ ಆಗ್ತದೇಂತ. ಕಳ್ದುಹೋಗಿರುವ ನಿಮ್ಮ ವಸ್ತು ಇಲ್ಲಿಂದ ಆಗ್ನೇಯ ದಿಕ್ಕಿನಲ್ಲಿ ಉಂಟು. ಅದು ಒಂದು ವಾರದಲ್ಲಿ ಸಿಕ್ತದೆ. ಸಿಕ್ಕಿದ ಕೂಡ್ಲೆ ನೀವು ಬಂದು ಒಂದು ಹೂವಿನ ಪೂಜೆ ಅಥವಾ ಒಂದು ಕಂಚಿ ಸೀರೆ ಒಪ್ಪಿಸ್ಬೇಕು ಅಂತ ಅಪ್ಪಣೆ ಮಾಡ್ತಿದ್ದಾಳೆ” ಅಂತ ಹೇಳ್ತಿದ್ರು. ಬಂದವ್ರು ಭಕ್ತಿಯಿಂದ ಒಪ್ಪಿ ಹಾಗೇ ಮಾಡ್ತಿದ್ರು. ಪ್ರಶ್ನೆ ಕೇಳಿದವ್ರು ಕಾರಿನಲ್ಲಿ ಬಂದಿದ್ರೆ ಅವ್ರ ಕೈಯಲ್ಲಿ ಬಂಗಾರದ ಕಡಗ, ಎಂಟೆಂಟು ಉಂಗುರ ಎಲ್ಲ ಕಂಡ್ರೆ ದೇವಿ ಚಿನ್ನದ ಕರಿಮಣಿ, ಕಾಸಿನ ಸರ, ವಜ್ರದ ಮೂಗುಬೊಟ್ಟು ಮಾಡಿಸಿ ಹಾಕ್ಲಿಕ್ಕೆ ಹೇಳ್ತಿದ್ಲು. ಒಟ್ಟಾಗಿ, ದೇವಿ ಎಂತ ಕೇಳಿದ್ರೂ ಭಕ್ತರು ಇಲ್ಲಾಂತ ಹೇಳ್ತಿರ್ಲಿಲ್ಲ. ಇತ್ತೀಚೆಗೆ ದೇವಿಯ ಭಕ್ತರು ತುಂಬ ಜನ ಬೊಂಬ್ಯಾಯಲ್ಲಿ, ದುಬೈಯಲ್ಲಿ, ಅಮೆರಿಕದಲ್ಲಿ ಎಲ್ಲಾ ಇದ್ದದ್ರಿಂದ ದೇವಿ ಬಂಗಾರ, ವಜ್ರವನ್ನೇ ಜಾಸ್ತಿ ಕೇಳ್ತಿದ್ಲು.

ಹೀಗಿರುವಾಗ ರವಿರಾಜ ಬಲ್ಲಾಳ್ರ ಅಳಿಯ ಕೀರ್ತಿರಾಜ ಬಲ್ಲಾಳ್ರು ಬೊಂಬ್ಯಾಯಲ್ಲಿ ಹೊಸತೊಂದು ಬಾರ್ ಅಂಡ್ ರೆಸ್ಟೋರಾಂಟ್ ಓಪನ್ ಮಾಡ್ಲಿಕ್ಕೆ ದೇವಿಯ ಹತ್ರ ಪ್ರಶ್ನೆ ಕೇಳಿದ್ರು. ದೇವಿ, “ನಿಂಗೆಲ್ಲ ಒಳ್ಳೇದಾಗ್ತದೆ. ಒಂದು ವರ್ಷದಲ್ಲಿ ನಿಂಗೆ ಮೂರು ಪಾಲು ಲಾಭ ಆಗ್ತದೆ. ನಂಗೇನೂ ಬೇಡ. ಆದ್ರೆ ನನ್ನ ಉತ್ಸವದ ಮೂರ್ತಿ ನೋಡು ಹೇಗೆ ಡಲ್ಲಾಗಿದೇಂತ. ನನ್ನ ಉತ್ಸವದ ಮೂರ್ತಿ ಬೇರೆ ಅಲ್ಲ. ನಾನು ಬೇರೆ ಅಲ್ಲ. ಅದಕ್ಕೆ ಚಿನ್ನದ ನಾಲಗೆ, ದೃಷ್ಟಿ, ಕರಿಮಣಿ ಎಲ್ಲ ಮಾಡಿಸಿ ಹಾಕು” ಅಂತ ಹೇಳಿದ್ಲು. ಕೀರ್ತಿರಾಜ ಬಲ್ಲಾಳ್ರು ಒಪ್ಪಿದ್ರು. ದೇವಿಯ ಕಾರ್ಣಿಕ ನೋಡಿ. ಕೀರ್ತಿರಾಜ ಬಲ್ಲಾಳ್ರಿಗೆ ಫ್ರಾಫಿಟ್ಟೋ ಫ್ರಾಫಿಟ್ಟು! ಅವ್ರು ತೇರಿನ ದಿವ್ಸ ಬೊಂಬ್ಯಾಯಿಂದ ಹೊಸ ಕಾರಿನಲ್ಲೇ ಬಂದ್ರು. ದೇವಿ ಕೇಳಿದ್ದನ್ನು ಉತ್ಸವ ಮೂರ್ತಿಗೆ ಮಾಡಿಸಿ ಹಾಕಿದ್ರು. ಅದು ಊರು ಇಡೀ ಪ್ರಚಾರ ಆಗಿತ್ತು. ಕೀರ್ತಿರಾಜ ಬಲ್ಲಾಳ್ರು ದೇವಿಯ ಉತ್ಸವ ಮೂರ್ತಿಗೆ ಬಂಗಾರ್ದು ನಾಲಗೆ, ದೃಷ್ಟಿ, ಕರಿಮಣಿ ಎಲ್ಲ ಹಾಕ್ತಾರಂತೆ ಅಂತ ಕೇಳಿಯೇ ಎರಡು ಮೂರು ಸಾವಿರ ಜನ ಹೆಚ್ಚಿಗೆ ಬಂದಿದ್ರು. ಆವತ್ತು ಎಲ್ರೂ ಉತ್ಸವ ಮೂರ್ತಿಯನ್ನು ಕಣ್ಣು ದೊಡ್ಡದು ಮಾಡಿ ನೋಡುವವ್ರೇ.

ಎರ್ಮಾಳು ಮಾಕಾಳಿಯ ಬಗ್ಗೆ ನಿಮ್ಗೆ ಸ್ವಲ್ಪ ಡೀಟೈಲ್ ಕೊಡ್ಬೇಕು. ಜನ ಎಲ್ಲ ಹೇಳುವ ಹಾಗೆ ಎರ್ಮಾಳು ಮಾಕಾಳಿ ಅಂದ್ರೆ ಪಡುಬಿದ್ರೆಯ ಮಾಲಿಂಗೇಶ್ವರನ ವೈಫು. ಅವ್ಳು ಎರ್ಮಾಳಿಗೆ ಯಾಕೆ ಬಂದ್ಲು ಅಂದ್ರೆ ಪಾರ್ವತಿ ತನ್ನ ಅಪ್ಪನ ಯಾಗಕ್ಕೆ ಹೋಗ್ತೇನೆ ಅಂತ ಹೇಳಿದಾಗ ಶಿವ ಬೇಡ ಅಂತ ಹೇಳಿದ್ನಲ್ಲಾ ಅದಕ್ಕೆ ಸಿಟ್ಟಿನಿಂದ ಬಂದವ್ಳು, ತನ್ನ ಅಪ್ಪನ ಮನೆಯಲ್ಲಿ ತನ್ನ ಗಂಡನಿಗೆ ಇನ್‌ಸಲ್ಟ್ ಆದದ್ದನ್ನು ನೋಡ್ಲಿಕ್ಕಾಗದೆ ತಾನೇ ಒಂದು ಹೋಮಕುಂಡ ರೆಡಿಮಾಡ್ಕೊಂಡು ಹಾರುವ ಮೊದ್ಲು ನಾಲಗೆ ಹೊರಗೆ ಹಾಕಿ ಮಾಕಾಳಿ ಆದ್ಲು ಅಂತ ಜನ್ರ ಕತೆ. ಹೆಂಡತಿಯನ್ನು ನೋಡ್ಲಿಕ್ಕೆ ತೇರಿನ ದಿವ್ಸ ರಾತ್ರಿ ಪಡುಬಿದ್ರಿ ಮಾಲಿಂಗೇಶ್ವರ ಮೆರವಣಿಗೆಯಲ್ಲಿ ಬರುವುದುಂಟು. ರಾತ್ರಿ ಮೆರವಣಿಗೆಯಲ್ಲಿ ಬಂದ ಮಾಲಿಂಗೇಶ್ವರನ ಉತ್ಸವ ಮೂರ್ತಿಯನ್ನು ಮಾಕಾಳಿಯ ಉತ್ಸವ ಮೂರ್ತಿಯ ಹತ್ರ ಗರ್ಭ ಗುಡಿಯಲ್ಲಿ ಇಟ್ಟು, ಅದ್ರ ಹತ್ರ, ಹಾಲು ಹಣ್ಣು ಎಲ್ಲ ಇಟ್ಟು ಬಾಗಿಲು ಹಾಕ್ತಾರೆ. ಅವತ್ತು ರಾತ್ರಿ ದೇವಸ್ಥಾನದ ಒಳಗೆ ಯಾರೂ ಇರುವುದಿಲ್ಲ. ವರ್ಷವಿಡೀ ಮಿಸ್ ಮಾಡಿಕೊಂಡ ಮಿಸೆಸ್‌ನ ಹತ್ರ ಮಾಲಿಂಗೇಶ್ವರ ಸರಸ ಸಲ್ಲಾಪ ಮುಗ್ಸಿ ಬೆಳಿಗ್ಗೆ ಬಾಗಿಲು ತೆರ್ದಾದ ಮೇಲೆ ಆರತಿ ಮಾಡಿಸಿಕೊಂಡು ಭಾರೀ ಉತ್ಸಾಹದಲ್ಲಿ ಪಡುಬಿದ್ರೆಗೆ ವಾಪಾಸ್ ಹೋಗ್ತಾನೆ. ಬೆಳಿಗ್ಗೆ ಬಾಗಿಲು ತೆಗೀವಾಗ ಮಾಲಿಂಗೇಶ್ವರ ರಾತ್ರಿ ಬಂದಿದ್ದ ಎನ್ನುದಕ್ಕೆ ಸಾಕ್ಷಿಯಾಗಿ ಮಾಕಾಳಿದ್ದು ಕುಂಕುಮ ಕೆದರಿರ್ತದೆ, ಹೂ ಚೆಲ್ಲಿರ್ತದೆ. ಹಾಲು–ಹಣ್ಣು ಎಲ್ಲ ಅರ್ಧಂಬರ್ಧ ಖಾಲಿಯಾಗಿರ್ತದೆ ಅಂತ ಭಟ್ರುಗಳು, ಜನ್ರು ಎಲ್ಲ ಹೇಳ್ತಾರೆ. ಒಟ್ಟಾಗಿರುವ ದಂಪತಿಗಳನ್ನು ನೋಡ್ಲಿಕ್ಕೂ ಬೆಳಿಗ್ಗೆ ತುಂಬ ಜನ ಸೇರ್ತಾರೆ. ತೇರಿನ ದಿವ್ಸದ ಇಂಥ ರಾತ್ರಿಯೇ ದೇವಿಯ ಬಂಗಾರ ಕಳುವಾದ ಸುದ್ದಿಯನ್ನು ರಾಮೈತಾಳ್ರು ರವಿರಾಜ ಬಲ್ಲಾಳ್ರತ್ರ ತಂದದ್ದು.

ರವಿರಾಜ ಬಲ್ಲಾಳ್ರು ಎರ್ಮಾಳು ಬೀಡಿನ ಗುರ್ಕಾರ್ರು ಮಾತ್ರ ಅಲ್ಲ, ಮಾಕಾಳಿ ದೇವಸ್ಥಾನದ ಧರ್ಮದರ್ಶಿಗಳು. ಪೂಜೆಗೆ ಬ್ರಾಮಣ್ರನ್ನು ಬಿಟ್ಟು ಪೂರ್ತಿ ಆಡಳಿತವನ್ನು ತಾವೇ ಇಟ್ಟುಕೊಂಡಿದ್ರು. ಅವ್ರ ಅಳಿಯ ಹಾಕಿದ ಆಭರಣ, ಅದೂ ತೇರಿನ ದಿವ್ಸವೇ ಕಳುವಾದ್ದು ಇನ್ನೂ ಮಂಡೆ ಬಿಸಿಗೆ ಕಾರಣವಾಗಿತ್ತು.

ರಾಮೈತಾಳ್ರು ಗುರ್ಕಾರ್ರಿ ತಂದ ಹಾಲನ್ನು ಗಟಗಟಾಂತ ಕುಡ್ದು, “ಗುರ್ಕಾರ್ರೇ ಹೊರಡುವನಾ ?” ಅಂತ ಕೇಳಿದ್ರು. ಬಲ್ಲಾಳ್ರು ಅಂಗಿ ಸಿಕ್ಕಿಸಿಕೊಂಡು ಐತಾಳ್ರ ಬೆನ್ನ ಹಿಂದೆ ಬೀಸ ಬೀಸ ಹೊರಟ್ರು. ಐತಾಳ್ರು, ಬಲ್ಲಾಳ್ರು ದೇವಸ್ಥಾನದ ಹತ್ರ ಬರುವಷ್ಟ್ರಲ್ಲಿ ಸುದ್ದಿ ಎಲ್ಲ ಹಬ್ಬಿಯಾಗಿತ್ತು ದೇವಸ್ಥಾನದ ಮುಂದೆ ನೂರಾರು ಜನ ಸೇರಿತ್ತು.

“ದೇವಿಯ ನಾಲಗೆ, ದೃಷ್ಟಿ, ಕರಿಮಣಿಗೇ ಕೈ ಹಾಕಿದ್ದಾರೇಂದ್ರೆ ಎಂತ ಮಾರಾಯ್ರೇ ಇದು ? ಇದು ಎಂಥ ಕಲಿಗಾಲಾಂತ ?”

“ಇದು ಬೇರೆ ಯಾರ ಕೆಲ್ಸವೂ ಅಲ್ಲ. ನಂಗೊತ್ತುಂಟು ಇದು ಯಾರ ಕೆಲ್ಸಾಂತ. ಇಷ್ಟು ದಿವ್ಸ ತೇರಿಗೆ ಒಬ್ರೂ ಸ್ಯಾಬ್ರೂ ಬರ್ತಿರ್ಲಿಲ್ಲ. ಈ ಸಾರಿ ಇಬ್ರು ಸ್ಯಾಬ್ರು ಪುಗ್ಗ ಮಾರುವ ನೆವನದಲ್ಲಿ ರಾತ್ರಿ ದೇವಸ್ಥಾನದ ಹತ್ರವೇ ತಿರ್ಗ್ಯಾಡಿಕೊಂಡಿದ್ರು. ಅವ್ರದ್ದೇ ಕೆಲ್ಸ ಇದು. ಬೋಳಿಮಕ್ಳು ಸ್ಯಾಬ್ರು ಎಲ್ಲಿದ್ರೂ ಡೇಂಜರ್ರೇ. ಅವ್ರನ್ನು ನೋಡಿದಾಗ್ಲೇ ನಾನು ಎಣಿಸಿದ್ದೆ. ಇವ್ರು ಎಂತದೋ ಮಾಡ್ತಾರೇಂತ. ನಾನು ಎಣಿಸಿದ್ದು ಸರೀ ಆಯ್ತು ನೋಡಿ ಗುರ್ಕಾರ್ರೆ” ಅಂತ ಬ್ರಾಮಣ ಸಂಘದ ಯುವ ಲೀಡರ್ ವಾಸುದೇವ ಹೇಳಿದ.

“ಅಲ್ಲ ಮಾರ್ರೆ, ಬೀಗ ಹಾಕಿದ್ದು ಹಾಕಿದ ಹಾಗೆಯೇ ಉಂಟು. ಆಳೆತ್ತರದ ಕಾಂಪೌಂಡು ಹಾರಿ ಇಷ್ಟೆಲ್ಲ ಮಾಡಿದ್ದಾರೆಂದ್ರೆ ಎಂಥ ಅನುಭವಸ್ತ್ರು ಮಾರ್ರೆ ಅವ್ರು ?”

“ಅಲ್ಲ ಮಾರ್ರೆ, ಇಲ್ಲೇ ಹತ್ರದಲ್ಲೇ ದೇವಿ ಮಹಾತ್ಮೆ ಆಟ ಆಗ್ತಾ ಇತ್ತು. ಚೆಂಡೆ ಪೆಟ್ಟಿಗೆ ಒಬ್ರಿಗೂ ಈ ಕಡೆ ಎಂತ ಆಗ್ತದೆ ಅಂತ ಗೊತ್ತಾಗ್ಲಿಲ್ಲ. ಎಂತ ಮಾಯಕ ನೋಡಿ”... ...ಹೀಗೆ ಜನ್ರೆಲ್ಲ ಕುಂಡೆಗೊಂದು ಮಂಡೆಗೊಂದು ಮಾತಾಡ್ತಿದ್ರು. ಬಲ್ಲಾಳ್ರು ಎಲ್ರನ್ನೂ ಹಿಂದೆ ಹಾಕ್ಕೊಂಡು ದೇವಸ್ಥಾನದ ಒಳಗೆ ಬಂದ್ರು. ಪಡುಬಿದ್ರಿಯಿಂದ ಮಾಲಿಂಗೇಶ್ವರನನ್ನು ಹೊತ್ತು ತಂದಿದ್ದ ವೇದವ್ಯಾಸ ತಂತ್ರಿಗಳು ತಲೆ ಮೇಲೆ ಕೈ ಹೊತ್ತು ಕೂತಿದ್ರು. ಬಲ್ಲಾಳ್ರು ನೋಡ್ತಾರೆ, ಎಂತ ಹೇಳುದು ? ಎಲ್ಲ ಚಲ್ಲಾಪಿಲ್ಲಿಯಾಗಿ ಬಿದ್ದಿತ್ತು. ಆಚೆ ಈಚೆ ನೋಡುವಷ್ಟ್ರಲ್ಲಿ ಯಾರೋ, “ಪೊಲೀಸನವ್ರು ಬಂದ್ರು” ಅಂತ ಹೇಳಿದ್ರು.

ದಡದಡಾಂತ ಎರ್ಡು ಜೀಪಿನಲ್ಲಿ ಪಡುಬಿದ್ರೆ ಎಸ್.ಐ. ನಾಗ್ರಾಜ, ಉಡುಪಿ ಜಿಲ್ಲೆ ಪೊಲೀಸ್ ಎಸ್.ಪಿ. ಹಿಮಾಂಶು, ಒಂದಿಷ್ಟು ಜನ ಪೊಲೀಸನವ್ರು, ಒಂದೆರ್ಡು ನಾಯಿಗಳು ಎಲ್ಲ ಬಂದದ್ದನ್ನು ನೋಡಿಯೇ ಕೆಲವ್ರಿಗೆ ಹೇಲು–ಉಚ್ಚೆ ಎಲ್ಲ ಬರುವ ಹಾಗಾಯ್ತು. ನಾಯಿಗಳನ್ನು ಮುಂದಿಟ್ಟುಕೊಂಡು ಇನ್ನೇನು ಎಸ್ಸೈ ನಾಗ್ರಾಜ ಒಳಗೆ ಹೋಗ್ಬೇಕು ಅನ್ನುವಾಗ, ಐತಾಳ್ರು “ಗುರ್ಕಾರ್ರೇ... ಇದೆಂತದು ಇದು ? ನಾಯಿ ಒಳಗೆ ಬರ್ತಾ ಉಂಟು ?” ಅಂತ ಮೆಲ್ಲ ಅಪಸ್ವರ ತೆಗ್ದ್ರು.

ಬಲ್ಲಾಳ್ರು, "ಎಂತ ಭಟ್ರೇ? ನಿಮ್ಮ ಪಿರಿ ಪಿರಿ? ಕದ್ದವ್ರು ಯಾರೂಂತ ಗೊತ್ತಾಗ್ಬೇಕಾದ್ರೆ ನಾಯಿ ಒಳಗೆ ಬರ್ಲೇ ಬೇಕು ಗೊತ್ತಾಯ್ತಾ? ಸುಮ್ನೆ ಚೊರೆ ಮಾಡ್ಬೇಡಿ. ಮೊದ್ಲೇ ಮಂಡೆ ಪೂರ ಹಾಳಾಗಿದೆ ನಂದು!" ಗರ್ಜನೆ ಮಾಡಿದ್ರು.

"ಅಲ್ಲ ಗುರ್ಕಾರ್ರೆ... ಪೊಲೀಸ್ನವ್ರು ತನಿಖೆ ಮಾಡ್ಲಿ... ಆದ್ರೆ ನಾಯಿ ಗರ್ಭಗುಡಿ ಒಳಗೆ ಹೋದ್ರೆ ಮತ್ತೆ ಬ್ರಮ್ಮ ಕಲಶ ಆಗ್ಬೇಕು. ಹೋದ ವರ್ಷ ಅದೆಲ್ಲ ಮುಗ್ದದ್ದು. ಮತ್ತೊಂದು ಸರ್ತಿ ಬ್ರಮ್ಮ ಕಲಶ ಮಾಡುದೂ ಅಂತಂದ್ರೆ ಕಂಡಾಬಟ್ಟೆ ಮಂಡೆ ಬಿಸಿಯ ಕೆಲ್ಸ ಮಾರ್ರೆ" ಅಂತ ಮೆಲ್ಲ ನರಕಿದ್ರು.

"ವಾಯ್... ಭಟ್ರೇ, ದೇವಸ್ಥಾನದ ಮೇಲೆ ನಿಮ್ಗಿರುವಷ್ಟೇ ಭಕ್ತಿ ನಮ್ಗೂ ಉಂಟು ಗೊತ್ತಾಯ್ತಾ? ಈಗ ನಾಯನ್ನು ಒಳಗೆ ಹೋಗ್ಲಿಕ್ಕೆ ಬಿಡದಿದ್ರೆ ನಿಮ್ಮನ್ನೇ ಒಳಗೆ ಹಾಕ್ಬೇಕಾಗ್ತದೆ ಗೊತ್ತಾಯ್ತಾ? ಎಸ್ಸೈ ನಾಗ್ರಾಜ ಎಸ್.ಪಿ. ಎದುರಲ್ಲಿ ಭಾರೀ ಸ್ಟಂಟ್ ಮಾಡ್ತಾ ಗರ್ಜಿಸಿದ. ಐತಾಳ್ರಿಗೆ ಹೆದ್ರಿಕೆ ಜಾಸ್ತಿಯಾಯ್ತು. ವಾಸುದೇವನ ಮುಖ ನೋಡಿದ್ರು. ಕೂಡ್ಲೆ ವಾಸುದೇವ, "ವಾಯ್ ಇನ್ಸ್‌ಪೆಕ್ಟ್ರೆ, ನಿಮ್ಮ ನಾಯಿ ಎಂತ ಲೌಂತರಿ ಮಾಡ್ತದೇಂತ ನಂಗೊತ್ತುಂಟು, ಆಯ್ತಾ? ಕಳ್ದ ತಿಂಗಳು ಉಚ್ಚಿಲದಲ್ಲಿ ಬ್ಯಾಂಕು ದರೋಡೆ ಆಗಿದ್ದಾಗ ಇದೇ ನಾಯನ್ನಲ್ಲವಾ ನೀವು ತಂದದ್ದು? ಅದು ಎಂತ ಮಾಡಿತು ಅಜ್ಜಿ ಬೆಡಿ? ಓ... ಅಷ್ಟು ದೂರ ಓಡಿತು, ಕಾಲೆತ್ತಿ ಮೂತ್ರ ಮಾಡಿತು! ಅದು ಬಿಟ್ರೆ ನಿಮ್ಗೆ ಎಂತಾದ್ರೂ ಮಾಡ್ಲಿಕ್ಕಾಯ್ತಾ? ದರೋಡೆ ಮಾಡಿದವ್ರು ಎಲ್ಲಿಗೆ ಓಡಿ ಹೋದ್ರೋ ಎಂತದೂ ಗೊತ್ತಾಗ್ಲಿಲ್ಲ. ನಿಮ್ಮ ನಾಯಿ ಎಂತಕ್ಕೆ ಸುಮ್ನೆ ಶ್ಟೈಲಿಗೆ," ಅಂತ ಹೇಳಿದ್ದೇ ತಡ ಎಲ್ರೂ ಗೊಳ್ಳಂತ ನಕ್ರು. ವಾಸುದೇವ ಅಲ್ಲಿಗೇ ಬಿಡ್ಲಿಲ್ಲ, "ವಾಯ್ ಇನ್ಸ್‌ಪೆಕ್ಟ್ರೆ, ನಂಗೆ ಇಬ್ರು – ಮೂವರು ಸ್ಯಾಬರ ಮೇಲೆ ಡೌಟುಂಟು. ಅವ್ರು ಪಡುಬಿದ್ರಿಯವ್ರು. ಅವ್ರದ್ದೇ ಇದೆಲ್ಲ ಕಿತಾಪತಿ ಇರ್ಬೇಕು" ಅಂತೆಲ್ಲ ಸುರು ಮಾಡಿದ. ಸ್ಯಾಬರ ಹೆಸ್ರು ಹೇಳಿದ್ದೇ ನಾಗ್ರಾಜನ ಕಿವಿ ನೆಟ್ಟಗಾಯ್ತು. "ಯಾರು? ಹೇಳಿ?" ಅಂತ ಸುರು ಮಾಡಿದ. ಕೂಡ್ಲೆ ಎಸ್.ಪಿ., "ನೋ...ನೋ... ಹಾಗೆಲ್ಲ ಪ್ರೂಫ್ ಇಲ್ದೇ ಆ್ಯಕ್ಷನ್ ತಗೊಳ್ಳಿಕ್ಕೆ ಆಗುದಿಲ್ಲ. ಏನೋ ಮಾಡ್ಲಿಕ್ಕೆ ಹೋಗಿ ಇನ್ನೆಂಥದೋ ಆಗುದು ಬೇಡ" ಅಂದ್ರು. ಬಲ್ಲಾಳ್ರ ಹತ್ರ ಬಂದು, "ನಾಯಿ ಒಳ್ಗೆ ಬಂದು ಮೈಲಿಗೆ ಆಗ್ತದೇಂತಾದ್ರೆ ಬೇಡ ಬಿಡಿ. ಫಿಂಗರ್ ಪ್ರಿಂಟ್ಸ್ ತಗೊಳ್ತೇವೆ. ಅಷ್ಟು ಸಾಕಾಗ್ತದೆ ನಮ್ಗೆ" ಅಂತ ಹೇಳಿದ್ರು. ಬಲ್ಲಾಳ್ರಿಗೆ ಒಮ್ಮೆ ಜೀವ ಬಂದ ಹಾಗೆ ಆಯ್ತು. "ಆಯ್ತು ಹಾಗೇ ಮಾಡಿ" ಅಂದ್ರು. ಪೊಲೀಸ್ನವ್ರು ಫಿಂಗರ್ ಪ್ರಿಂಟ್ಸ್ ಎಲ್ಲ ತಕೊಂಡು, ಭರ್ರಂತ ಹೋದ್ರು.

ಪೊಲೀಸ್ರೆಲ್ಲ ಹೋದ್ಮೇಲೆ, ಸಂಜೆ ಎರ್ಮಾಳು ಮತ್ತು ಸುತ್ಮುತ್ತದ ಎಂಟು ಮಾಗಣೆಗಳ ಮುಖ್ಯಸ್ಥರನ್ನು ಒಟ್ಟು ಸೇರ್ಸಿ ಬಲ್ಲಾಳ್ರು ಒಂದು ಸಭೆ ಸೇರ್ಸಿದ್ರು. ಆ ಸಭೆಯಲ್ಲಿ ಎಲ್ರೂ ಒಟ್ಟಾಗಿ, "ಎಂತದೇ ಆಗ್ಲಿ, ಬೆಳ್ಮಣ್ಣಿನ ಮದ್ವರಾಯ ಭಟ್ರನ್ನು ಕರ್ಸಿ ಪ್ರಶ್ನೆ ಕೇಳಿಸುವಾ" ಅಂತಂದ್ರು. ಮದ್ವರಾಯ ಭಟ್ರು ಅಂತಿಂಥ ಜೋಯಿಸರಲ್ಲ. ಹೇಳಿದ್ದು ಪಟ್ಟ್‌ಕಡಿ. ಸರಿ ಅವ್ರು ಬಂದ್ರು ಮರುದಿವ್ಸ. ಎಲ್ಲ ಮುಖ್ಯಸ್ಥರ ಎದ್ರು ಕವ್ಡೆ ಹಾಕಿದ್ರು. "ಬೇರೆ ಎಂತದೂ ಅಲ್ಲ. ಒಳಗಿನವ್ರದ್ದೇ ಕೆಲ್ಸ!" ಅಂದ್ರು. ಎಲ್ಲ ಒಂದು ಸಾರಿ ಹೆದ್ರಿಹೋದ್ರು. ಜೋಯಿಸರು ಅಷ್ಟು ಹೇಳಿದ್ಮೇಲೆ ಬಿಡ್ಲಿಕ್ಕುಂಟಾ? ಬಲ್ಲಾಳ್ರು ಮತ್ತೆ ಕಂಪ್ಲೇಂಟ್ ಕೊಟ್ರು. ಎಸ್ಸೈ ನಾಗ್ರಾಜ ಮತ್ತೊಂದು ರೌಂಡು ಬಂದು ಪೂಜೆಯ ರಾಮೈತಾಳ್ರಿಂದ ಹಿಡ್ದು ಕಸ ಗುಡಿಸುವ ಸೇಸಿ, ಐತನವರೆಗೆ ಹತ್ತು–ಹನ್ನೆರಡು ಜನ್ರನ್ನು ಕ್ವೆಶ್ಚನ್ ಮೇಲೆ ಕ್ವೆಶ್ಚನ್ ಮಾಡಿದ. ಎಂಥದೂ ಗೊತ್ತಾಗ್ಲಿಲ್ಲ. ಇಷ್ಟೆಲ್ಲ ಆಗುವಾಗ ಮೂರು ನಾಲ್ಕು ದಿನಗಳಾಗಿ ಹೋಯಿತು.

ಡೈಲಿ ಸಂಜೆ ಎರ್ಮಾಳು ಮತ್ತು ಸುತ್ತ ಎಂಟು ಮಾಗಣೆಯ ಮುಖ್ಯಸ್ಥರು ದೇವಸ್ಥಾನದಲ್ಲಿ ಒಟ್ಟಾಗ್ತಾ ಇದ್ರು. ಒಂದು ದಿನ ಒಬ್ರು "ಗುರ್ಕಾರ್ರೆ... ಇಷ್ಟೆಲ್ಲ ಆಯ್ತು. ಎಂತ ಪ್ರಯೋಜನವೂ ಆಗ್ಲಿಲ್ಲ. ನಾವು ನಮ್ಮ ದೇವಿಯ ಹತ್ರವೇ ಪ್ರಶ್ನೆ ಕೇಳ್ಳಿಲ್ಲ. ನಾವೇ ನೆಗ್ಲೆಕ್ಟ್ ಮಾಡಿದ ಹಾಗಾಯ್ತು. ದರ್ಶನದಲ್ಲಿ ಕೇಳಿಸಿದ್ರೆ ಹೇಗೆ?" ಅಂತ ಕೇಳಿದ್ರು.

ಎಲ್ರು, "ಹೌದು... ಹೌದು... ದರ್ಶನದಲ್ಲಿ ಕೇಳಿಸಿ ನೋಡುವಾ" ಅಂತ ಹೇಳಿದ್ರು. ಬಲ್ಲಾಳ್ರಿಗೆ ಅದೂ ಒಂದು ಪಾಯಿಂಟ್ ಸರಿ ಅಂತ ಕಂಡಿತು. "ನೀವು ಹೇಳಿದ ಹಾಗೆ ದರ್ಶನದಲ್ಲಿ ಈ ಪ್ರಶ್ನೆ ಇಡುವಾ. ಮುಂದಿನ ಶುಕ್ರವಾರದ ದರ್ಶನದಲ್ಲಿ ಇದೇ ಮೈನ್ ಪ್ರಶ್ನೆ. ಅವತ್ತು ಹೊರಗಿನವ್ರ ಪ್ರಶ್ನೆಗಳಿಗೆ ಅವಕಾಶ ಕೊಡುದು ಬೇಡ. ದೇವಸ್ಥಾನದ ನಿಮಿತ್ತ ವಿಶೇಷ ದರ್ಶನ ಎರೇಂಜ್ ಮಾಡುವಾ. ದರ್ಶನದಲ್ಲಿ ಗ್ಯಾರಂಟಿ ಯಾರು ಕದ್ದದ್ದು ಅಂತ ಗೊತ್ತಾಗ್ತದೆ. ಕೆಲವು ವರ್ಷಗಳ ಹಿಂದೆ ಹೀಗೆ ಯಾರೋ ಒಬ್ಬ ಕದೀಲಿಕ್ಕೆ ಟ್ರೈ ಮಾಡಿದ್ದ. ದರ್ಶನದಲ್ಲಿ ಕೇಳಿದಾಗ ಯಾರು ಕದೀಲಿಕ್ಕೆ ಪ್ರಯತ್ನಪಟ್ಟಿದ್ದಾನಾ ಅವ್ನು ಒಂದು ವಾರದಲ್ಲಿ ರಕ್ತ ಕಾರಿ ಸಾಯ್ತಾನೆ ಅಂತ ನುಡಿಕಟ್ಟಾಗಿತ್ತು. ಹಾಗೇ ಆಯ್ತು ನೋಡಿ. ಉಚ್ಚಿಲದ ಶೇಖರ ನುಡಿಕಟ್ಟಾದ ಮರುದಿವ್ಸವೇ ರಕ್ತ ಕಾರಿ ಸತ್ತ. ಸಾಯುವ ಮೊದ್ಲು ಅವ್ನು ತಾನು ಎರ್ಮಾಳು ಮಾಕಳಿ ದೇವಸ್ಥಾನದಲ್ಲಿ ಕಳವು ಮಾಡ್ಲಿಕ್ಕೆ ಟ್ರೈ ಮಾಡಿದ್ದೆ ಅಂತ ಮನೆಯವ್ರತ್ರ ಒಪ್ಪಿಕೊಂಡಿದ್ದ ಅಂತೆ" ಅಂತ ಬಲ್ಲಾಳ್ರು ಹೇಳಿದ್ರು.

"ಹೌದು, ಮತ್ತೆ ಮಾಕಾಳಿ ಅಂದ್ರೆ ಎಂತದು? ಸಾಮಾನ್ಯವಾ? ಅವ್ಳು ಬೇರೆ ಅಲ್ಲ. ಅವ್ಳ ದರ್ಶನ ಬೇರೆ ಅಲ್ಲ. ದರ್ಶನದಲ್ಲಿ ಅವ್ಳೇ ಬಂದು ಮಾತಾಡುದು ಬೇರೆ ಎಲ್ಲಾದ್ರೂ ಉಂಟಾ ಈ ದೇಶದಲ್ಲಿ? ಅದಕ್ಕೆ ನೋಡಿ ಎಲ್ಲೆಲ್ಲಿಂದ್ಲೋ ಜನ ಬಂದು

# ಅಲ್ಲಿ ಶಿವನಿದ್ದ



ಮಂದಾಕಿನಿ ನುಗ್ಗಿ ಬಂದ
ಆ ಕ್ಷಣ
ಇಲ್ಲಾರದೋ ಗರ್ಭದಲಿ ರೇತಸ್ಸು

ನದಿಯಾಯಿತು
ಅಲ್ಲಿ ಬದುಕು ಕೊಚ್ಚಿ
ಇಲ್ಲಿ
ಜೀವ ಚಿಗಿಯಿತು

ಬದುಕಲು ಬೆಸಗೊಂಡ
ಕೈ ಕೈ ಆಸರೆಗಳೆ ಮುಳುವಾದವು
ಇಲ್ಲಾದರೂ ಅಷ್ಟೆ...
ದೇಣಿಗೆ ಡಬ್ಬಿಯಲಿ ಮಹಾಪೂರ
ಮಾನವತೆ...
ಮುಳುಗಿಹೋಗಬಹುದಾದ ಸಾಧ್ಯತೆ

ಯಾರಿಗೆ ಗೊತ್ತು
ಬರಗೆಟ್ಟ ಬದುಕ ಬೇಯಿಸಲು
ಗರ್ಭ ತೊರೆದು ನದಿ
ಭೋರ್ಗರೆದಿರಬಹುದು

ಅಲ್ಲೆಲ್ಲೋ
ಬರ್ಫ ಗುಡ್ಡೆಯಡಿ ಸಿಕ್ಕು
ಗಂಟಲ ಪಸೆ ಹನಿ ನೀರಿಗೆ
ಕಾದು... ಕಾದು...
ಜೀವ ಆವಿಯಾಗಿರಬಹುದು

ಪಾಪ ಕೂಪಗಳ ತೊಳೆಯಲು
ಮಳೆಯಾಗಿರಬಹುದು
ಇಲ್ಲೋ...
ಕೊಳೆ ಬಟ್ಟೆ ಬದಿಗಿಟ್ಟ
ಪುಣ್ಯದೂರಿನ ಹೆಂಗಸರು ಕಾಲು ಇಳಿಬಿಟ್ಟು
ಮತ್ಸ್ಯ ಚುಂಬನ ಬಯಕೆಗೆ ಬಸಿರಾದರು

ಎಲ್ಲಕ್ಕೂ ಶಿವನಿದ್ದ ಮೂಕ
ಸಾಕ್ಷಿಯಾಗಿ
ಅವನೂ ನಡು ನೀರಲಿ




**ಲಿಂಗರಾಜ ಸೊಟ್ಟಪ್ಪನವರ**
'ರೇಣುಕಾ ನಿಲಯ', ಕಾಳೇ ಬಿಲ್ಡಿಂಗ್,
ವಿದ್ಯಾನಗರ (ಪಶ್ಚಿಮ), ಹಾವೇರಿ – ೫೮೧ ೧೧೦

ಇಲ್ಲಿ ದರ್ಶನದಲ್ಲಿ ಕೇಳದು ?" – ಜನ್ರೆಲ್ಲ ಒಟ್ಟಾಗಿ ಹೇಳಿದ್ರು.

ಬಲ್ಲಾಳ್ರು ಮರುದಿವ್ಸವೇ ಪೇಪರ್ನಲ್ಲಿ, "ಈ ಸಾರಿ ಶುಕ್ರವಾರದ ದರ್ಶನದಲ್ಲಿ ಸಾರ್ವಜನಿಕರ ಪ್ರಶ್ನೆಗಳಿಗೆ ಅವಕಾಶವಿಲ್ಲ. ದೇವಸ್ಥಾನದ ಕಳುವಿನ ಬಗ್ಗೆ ಮಾತ್ರ ಪ್ರಶ್ನೆ ಕೇಳಲಾಗುವುದು" ಅಂತ ಹಾಕ್ಸಿದ್ರು. ಪೇಪರ್ನವ್ರೆಲ್ಲ ದೇವಸ್ಥಾನದ ದರ್ಶನದ ಬಗ್ಗೆ, 'ದೇವರೇ ಬಗೆಹರಿಸುವ ವಿಶಿಷ್ಟ ನ್ಯಾಯಾಂಗ ವ್ಯವಸ್ಥೆ' 'ದೇವಿಯೇ ಇಲ್ಲಿ ಜಡ್ಜಿಣಿ!...' 'ದರ್ಶನವೇ ಇಲ್ಲಿ ಸಂವಿಧಾನ' ಅಂತೆಲ್ಲ ಹೆಡ್ಡಿಂಗು ಕೊಟ್ಟು ಭಾರೀ ಕವರೇಜ್ ಮಾಡಿದ್ರು. ಜನ್ರೆಲ್ಲ, "ಈ ಸಾರಿ ದರ್ಶನದಲ್ಲಿ ಕದ್ದವ ಯಾರು ಅಂತ ಗೊತ್ತಾಗ್ತದೆ. ಕದ್ದವ ಕುಷ್ಠ ರೋಗದಿಂದ ಸಾಯುದು ಗ್ಯಾರಂಟಿ" ಅಂತೆಲ್ಲ ಮಾತಾಡಿಕೊಳ್ಳಿಕ್ಕೆ ಶುರು ಮಾಡಿದ್ರು.

ಇದೆಲ್ಲ ಆಗಿ ಎರ್ಡು ದಿನ ಕಳ್ದಿತ್ತು. ದೇವಸ್ಥಾನದ ಹೊರಗಿನ ಸುತ್ತನ್ನು ಬೆಳಿಗ್ಗೆ ಗುಡಿಸುವಾಗ ಸೇಸಿಗೆ ಎಂತದೋ ಹೊಳೀತಾ ಇರುದು ಕಂಡಿತು. ಹತ್ರ ಹೋಗಿ ನೋಡ್ತಾಳೆ. ಬಂಗಾರದ್ದು ನಾಲಗೆ! ದೇವಿದ್ದು! ಕೂಡ್ಲೆ, "ಭಟ್ರೇ... ಭಟ್ರೇ!..." ಅಂತ ಕರೀತಾ ಓಡಿದ್ಲು. ತೋರ್ಸಿದ್ಲು. ಅವ್ರು ನೋಡಿ. "ಡೌಟೇ ಇಲ್ಲ... ಇದು ಉತ್ಸವ ಮೂರ್ತಿದ್ದೇ" ಅಂತ ಹೇಳಿದವ್ರೆ ಬಲ್ಲಾಳ್ರಿಗೆ ಸುದ್ದಿ ಮುಟ್ಟಿಸಿದ್ರು. ಬಲ್ಲಾಳ್ರು ಬಂದ್ರು, ನೋಡಿದ್ರು. "ದರ್ಶನದ ಹೆಸ್ರು ಹೇಳಿದ್ದೇ ಕಳ್ಳನಿಗೆ ಹೇಗೆ ಹೆದ್ರಿಕೆ ಹುಟ್ಟಿದೆ ನೋಡಿ" ಅಂತ ಗತ್ತಿನಲ್ಲಿ ಹೇಳಿದವ್ರೇ ಮನೆಗೆ ಹೊರಟ್ರು.

ಮರುದಿವ್ಸ ಅಲ್ಲ, ಅದ್ರ ಮರುದಿವ್ಸ ರಾಮೈತಾಳ್ರು ಬೆಳಿಗ್ಗೆ ದೇವಸ್ಥಾನದ ಬಾಗಿಲು ತೆಗೀಬೇಕು ಅಂತ ಹೆಬ್ಬಾಗಿಲಿನ ಹತ್ರ ಬರ್ತಾರೆ, ದೇವಿದ್ದು ಕಳುವಾಗಿದ್ದ ಕರಿಮಣಿ ಬಿದ್ದಿದೆ! ಮತ್ತೆ ಸುದ್ದಿಯಾಯ್ತು ಎಲ್ಲ ಕಡೆ. ಬಲ್ಲಾಳ್ರು, ಊರಿನ ಮುಖ್ಯಸ್ಥರು, ಯುವ ಬ್ರಾಮಣ ಸಂಘದವ್ರು ಎಲ್ಲ ಒಟ್ಟಾದ್ರು. ಪೇಪರಿನವ್ರೂ ಬಂದ್ರು, ಸುದ್ದಿ ಗೊತ್ತಾಗಿ. ಬಲ್ಲಾಳ್ರು, ಊರಿನ ಮುಖ್ಯಸ್ಥರು, "ಇದ್ರಲ್ಲಿ ಎಂತದೋ ಹಿಕ್ಮತ್ತು ಉಂಟು ಮಾರ್ರೆ. ದರ್ಶನಕ್ಕೆ ದಿನ ಇಟ್ಟದ್ದೇ ಕಳುವಾದದ್ದು ಒಂದೊಂದೇ ಹೇಗೆ ಬಂದು ಬೀಳ್ಳಿಕ್ಕೆ ಸಾಧ್ಯ? ಐತಾಳ್ರದ್ದೇ ಎಂತದೋ ಕಿತಾಪತಿ ಇರ್ಬೇಕು ಇದ್ರಲ್ಲಿ" ಅಂತ ಡೌಟು ಮಾಡಿದ್ರು. ಬಲ್ಲಾಳ್ರಿಗೆ ಇರ್ಬಹುದು ಅಂತ ಅನಿಸಿತು. ಆದ್ರೆ ಬಾಯಿ ಬಿಟ್ಟು ಹೇಳದೆ, ಸುಮ್ನೆ ತಲೆ ಹಾಕಿದ್ರು. "ಗುರ್ಕಾರ್ರೇ... ಯಾರಿಗೂ ಎಂತದೂ ಹೇಳುದು ಬೇಡ. ಇವತ್ತು ರಾತ್ರಿ ನಾವು ಒಂದೆರಡು ಜನ ಕಾಯುವ. ನಾಲಗೆ, ಕರಿಮಣಿ ಎಲ್ಲ ಬಂದಾಯ್ತು. ದೃಷ್ಟಿ ಒಂದು ಬರ್ಲಿಕ್ಕುಂಟು. ನಿನ್ನೆ ಮೊನ್ನೆಯ ಹಾಗೆ ಕಳ್ಳ ಅದನ್ನೂ ಹಾಕ್ಲಿಕ್ಕೆ ರಾತ್ರಿ ಬಂದೇ ಬರ್ತಾನೆ. ನೋಡುವ ಎಂತ ಆಗ್ತದೇಂತ" ಅಂತ ಹೇಳಿದ್ರು.

ಯುವ ಬ್ರಾಮಣ ಸಂಘದವ್ರೂ ಕೂಡ ಗುಟ್ಟಾಗಿ ಸಭೆ ಸೇರಿ, "ಕದ್ದಮಾಲು ಸೇಸಿಗೆ ಸಿಕ್ತದೇ ಅಂದ್ರೆ ಇದು ಶೂದ್ರರದ್ದೇ ಎಂತದೋ ಹಿಕ್ಮತ್ತು. ಈ ಬಲ್ಲಾಳ್ರೂ ಸಾಮಾನ್ಯದ ಕುಳ ಅಲ್ಲ. ದೇವಸ್ಥಾನದ ಮೇಲೆ ಇನ್ನೂ ಹಿಡಿತ ಸಾಧಿಸ್ಲಿಕ್ಕೆ ಎಂತದೋ ನಾಟಕ ಮಾಡ್ತಾ ಇದ್ದಾರೆ. ಎಂತದೇ ಆಗ್ಲಿ, ಇವತ್ತು ರಾತ್ರಿ ಕಾಯುವ. ದೇವಿದ್ದು ದೃಷ್ಟಿ ಹಾಕ್ಲಿಕ್ಕೆ ಕಳ್ಳ ರಾತ್ರಿ ದೇವಸ್ಥಾನದ ಹತ್ರ ಬಂದೇ ಬರ್ತಾನೆ. ಹಿಡ್ದು ನಾಕು ಬಾರಿಸುವ ಮುಸುಂಟಿಗೆ. ಸತ್ಯ ಹೊರಗೆ ಬರ್ತದೆ" ಅಂತ ಡಿಸೈಡ್ ಮಾಡಿಕೊಂಡ್ರು.

ಹೀಗೆ ಎರ್ಡೂ ಪಾರ್ಟಿಯವ್ರು ಇನ್ನೊಬ್ರಿಗೆ ಗೊತ್ತಾಗದ ಹಾಗೆ ದೇವಸ್ಥಾನದ ಹತ್ರ ಕಣ್ಣಿಗೆ ಎಣ್ಣೆ ಹಾಕ್ಕೊಂಡು ಕಾಯ್ತಾ ಕೂತ್ರು. ಬೆಳಿಗ್ಗೆ ಆದ್ರೂ ಕಳ್ಳ ಬರ್ಲಿಲ್ಲ! ಮರುದಿವ್ಸವೂ ಕೂತ್ರು. ಉಪಯೋಗ ಆಗ್ಲಿಲ್ಲ. ಹೀಗೆ ದರ್ಶನದ ದಿನದ ತನಕವೂ ಟ್ರೈ ಮಾಡಿದ್ರು. ಎಲ್ಲ ಫೇಲಾಯ್ತು.

ಕೊನೆಗೂ ದರ್ಶನದ ದಿನ ಬಂತು. ಅವತ್ತು ತೇರಿಗಿಂತ್ಲೂ ಹೆಚ್ಚು ಜನ. ದರ್ಶನದ ಪಾತ್ರಿ ಕಾಂತು ಪೂಜಾರಿ ಎಪ್ಪತ್ತು ದಾಟಿದವ. ಮುಸ್ಸಂಜೆ ಹೊತ್ತಿಗೆ ಕೆಂಪು ಮಡಿ ಉಟ್ಟು ಗಂಧದ ನಾಮ, ಕುಂಕುಮದ ನಾಮಗಳನ್ನು ಹಾಕ್ಕೊಂಡು ರೆಡಿಯಾಗಿದ್ದ. ಪ್ರಶ್ನೆ ಕೇಳುವ ಬಲ್ಲಾಳ್ರಿಗೆ ಒಂದು ಮೈಕು, ನುಡಿಕಟ್ಟು ಕೊಡುವ ಪಾತ್ರಿಗೆ ಒಂದು ಮೈಕು ಈ ಸಾರಿಯ 'ಪೆಷಲ್' ಎರೇಂಜ್‌ಮೆಂಟಾಗಿತ್ತು. ವಾದ್ಯ, ತಾಸೆಯವ್ರನ್ನೂ ಸಾ 'ಪೆಷಲ್ಲಾಗಿ' ಕರ್ಸಿದ್ರು. ಸುಮಾರು ಟಿವಿ ಚಾನೆಲ್‌ನವ್ರೂ ಸಾ ಬಂದಿದ್ರು ರಿಪೋರ್ಟ್ ಮಾಡ್ಲಿಕ್ಕೆ.

ಬಲ್ಲಾಳ್ರು, ಊರ ಹತ್ತು ಸಮಸ್ತರ ಎದ್ರು ಪ್ರಾರ್ಥನೆ ಮಾಡಿ ಪಾತ್ರಿಯ ಮೇಲೆ ಅಕ್ಷತೆ ಹಾಕಿದ್ದೇ ಸುರುವಾಯ್ತು ಆವೇಶ ಬರ್ಲಿಕ್ಕೆ. ವಾದ್ಯ ತಾಸೆ ಎಲ್ಲ ಪೇssss... ಪೇssss... ಟ್ರಕ್ಕಂ ಟಂ... ಟ್ರಕ್ಕಂ ಟಂ' ಅಂತ ಎಲ್ಲ ಶಬ್ದ ಮಾಡಿದವು. ಕದೋಣಿ ಹೊಡ್ದ್ರು. ಒಟ್ರಾಶಿ ಒಂದಷ್ಟು ಹೊತ್ತು ಭಯಂಕರ ಶಬ್ದ, ಗಲಾಟೆ. ಪಾತ್ರಿ ಹಿಂದೆ ಮುಂದೆ ಓಡಿದ. ಕುಣ್ದ. ಭಕ್ತರೆಲ್ಲ ಕೈ ಮುಗ್ದು ಕಣ್ಣು ಮುಚ್ಚಿ ನಿಂತಿದ್ರು. ಮತ್ತೆ ಕೆಲವ್ರು ಕೈ ಮುಗ್ದು ಕಣ್ಣು ಬಾಯಿ ಬಿಟ್ಟುಕೊಂಡೇ ನಿಂತಿದ್ರು. ಎಲ್ಲ ಸೌಂಡು ಒಂದೇ ಸರ್ತಿಗೆ ಕಡಿಮೆಯಾಗಿ ಸೂಜಿ ಬಿದ್ರೂ ಕೇಳಿಸುವಷ್ಟು ಸೈಲೆಂಟಾಯ್ತು ವಾತಾವರಣ.

"ಹಾಂ!... ಹೂಂ!... ಬಲ್ಲಾಳ್ರೇ... ಏನು ಪ್ರಶ್ನೆ?" ಪಾತ್ರಿ ಕೇಳಿದ. ಬಲ್ಲಾಳ್ರು, "ದೇವಿ ಜಗಜ್ಜನನಿ! ನಿಂಗೆ ಗೊತ್ತಿಲ್ಲದೇ ಇರುದು ಎಂತದುಂಟು. ನೀನು ನಮ್ಮ ಹತ್ರವೇ ಕೇಳಿಸ್ತಾ ಇದ್ದೀ. ಇದೆಲ್ಲ ನಿನ್ನ ಲೀಲೆ. ತೇರಿನ ದಿವ್ಸ ರಾತ್ರಿ ನಿನ್ನ ಉತ್ಸವ ಮೂರ್ತಿದ್ದು ಬಂಗಾರದ್ದು ನಾಲಗೆ, ದೃಷ್ಟಿ, ಕರಿಮಣಿ ಎಲ್ಲ ಕಳುವಾಗಿತ್ತು. ಎಷ್ಟು ಪ್ರಯತ್ನ ಮಾಡಿದ್ರೂ ಕದ್ದದ್ದು ಯಾರು ಅಂತ ಗೊತ್ತಾಗ್ಲಿಲ್ಲ. ದರ್ಶನದಲ್ಲಿ ಕೇಳುದು ಅಂತ ನಿರ್ಣಯ ಮಾಡಿದಾಗ ನಾಲಗೆ, ಕರಿಮಣಿ ಎಲ್ಲ ಯಾವುದೋ ಮಾಯಕದಲ್ಲಿ ಹಿಂದಕ್ಕೆ ಬಂತು. ದೃಷ್ಟಿ ಒಂದು ಬರ್ಲಿಕ್ಕುಂಟು... ತಾಯೇ, ಕದ್ದವ್ರು ಯಾರು? ಅವ್ರಿಗೆ ಎಂತ ಶಿಕ್ಷೆ? ನೀನೆ ನಿರ್ಣಯ ಮಾಡು" ಅಂತ ಬಲ್ಲಾಳ್ರು ಗಟ್ಟಿಯಾಗಿ ತಮ್ಮೆದ್ರು ಇದ್ದ ಮೈಕಲ್ಲಿ ಹೇಳಿದ್ರು. ಪೇಪರಿನವ್ರು, ಟಿ.ವಿ.ಯವ್ರು ಎಲ್ಲ ರೆಕಾರ್ಡು ಮಾಡಿಕೊಳ್ಳಿಕ್ಕೆ ಸುಲಭ ಆಗ್ಲಿ ಅಂತ ಬಲ್ಲಾಳ್ರು ಈ ಸಾರಿ ಮೈಕಿನ ಎರೇಂಜ್‌ಮೆಂಟ್ ಮಾಡ್ಸಿದ್ರು. ಈ ಸಾರಿ ಅವೆಲ್ಲ ಬಂದದ್ರಿಂದ ಪಾತ್ರಿಯೂ ಮುಣು ಮುಣು ಅಂತ ಮಾತಾಡದೆ ಸ್ಪಷ್ಟವಾಗಿಯೇ ಮಾತಾಡಿದ!

"ಹಾಂ!... ಹೂಂ!... ಇದ್ರ ಬಗ್ಗೆ ಪೊಲೀಸಿನವ್ರಿಗೆ ಕಂಪ್ಲೇಂಟ್ ಕೊಟ್ಟಿದ್ದೀರಾ?"

"ಹೌದು ತಾಯೇ... ಆದ್ರೆ ಏನು ಪ್ರಯೋಜನ ಕಾಣ್ಲಿಲ್ಲ. ಕಡೇಗೆ ನಿನ್ನ ದರ್ಶನ ಅಂದಾಗ ಇಷ್ಟು ಪ್ರಯೋಜನಕ್ಕೆ ಬಂತು. ದೃಷ್ಟಿ ಒಂದು ಸಿಕ್ಕಿದ್ರೆ ಸಾಕು ನಿನ್ನ ಲೀಲೆಯಿಂದ..."

"ಹಾಂ... ಹೂಂ... ಇಲ್ಲಿ ದರ್ಶನ ಆದ ನಂತ್ರವೂ ಪೊಲೀಸಿನವ್ರ ತನಿಖೆ ಮುಂದುವರಿಸ್ತೀರಾ?..."

"ನೀನು ಹೇಗೆ ಹೇಳ್ತೀಯಾ ಹಾಗೇ ಆಗ್ಲಿ. ನೀನು ಬೇಡ ಅಂದ್ರೆ ಮುಂದುವರಿಸುವುದಿಲ್ಲ. ಒಟ್ರಾಷಿ ಯಾರು ಕದ್ದಿದ್ದಾರೆ ಅಂತ ಗೊತ್ತಾಗ್ಬೇಕು. ಅವ್ರಿಗೆ ಶಿಕ್ಷೆ ಆಗ್ಬೇಕು. ಅದೂ ನನ್ನ ಅಳಿಯ ಹಾಕಿದ ಆಭರಣಗಳು..."

"ಬಲ್ಲಾಳ್ರೇ, ಒಬ್ಬ ಯಾಕೆ ಕದಿಯುವ ಕೆಲಸಕ್ಕೆ ಕೈ ಹಾಕ್ತಾನೆ ಹೇಳಿ?"

"ದೇವಿ... ಅವ್ರು ಬಡವನಾಗಿರುದ್ರಿಂದ... ದುಡ್ಡಿಗೆ ತತ್ವಾರ ಆದ್ರೆ ಕದಿಯುವ ಕೆಲಸಕ್ಕೆ ಕೈ ಹಾಕ್ತಾನೆ."

"ಹಾಗೆಯೇ ಇವ್ನೂ ಕದ್ದವ ಒಬ್ಬ ಬಡವ. ದುಡ್ಡಿಲ್ಲದೆ ಒದ್ದಾಡ್ತಿದ್ದ. ದಿನಾ ಸಂಜೆ ಬಂದು ನನ್ನ ಬಡತನವನ್ನು ಹೋಗಲಾಡಿಸು ಅಂತ ದಮ್ಮಯ್ಯ ದಕ್ಕಯ್ಯ ಹಾಕ್ತಿದ್ದ. ನಂಗೆ ಅವ್ನ ಕಷ್ಟ ನೋಡ್ಲಿಕ್ಕಾಗದೆ ನಾನೇ ಅವ್ನ ಕನಸ್ನಲ್ಲಿ ಪ್ರತ್ಯಕ್ಷ ಆಗಿ ನನ್ನ ಉತ್ಸವ ಮೂರ್ತಿಯ ಬಂಗಾರ ಕದೀಲಿಕ್ಕೆ ಹೇಳಿದೆ. ಅವ್ನು ನನ್ನ ಭಕ್ತ. ನಾನು ಹೇಳಿದ್ದನ್ನು ನಿಷ್ಠೆಯಿಂದ ಮಾಡಿದ. ಯಶಸ್ಸು ಸಿಕ್ಕಿತ್ತು. ಆದ್ರೆ ಕಳ್ಳರಲ್ಲೂ ಅವ ಸ್ವಾಭಿಮಾನಿ, ಸಹೃದಯಿ. ಕದ್ದ ಮೇಲೆ ಪಶ್ಚಾತ್ತಾಪ ಪಟ್ಟ. ಬದುಕ್ಲಿಕ್ಕೆ ಎಷ್ಟು ಬೇಕೋ ಅಷ್ಟನ್ನು ಇಟ್ಟುಕೊಂಡ. ಉಳ್ದದ್ದನ್ನು ಹಿಂದಕ್ಕೆ ಕೊಟ್ಟ..."

"ಅಂದ್ರೆ ದೃಷ್ಟಿ!"

"ಇಲ್ಲ. ಅದು ಇನ್ನು ಹಿಂದಕ್ಕೆ ಬರುದಿಲ್ಲ. ನನ್ನ ಭಕ್ತ ಬಡವ. ಅವ್ನು ಕೇಳಿದ. ನಾನು ಕೊಟ್ಟೆ. ಈ ಬಗ್ಗೆ ಇನ್ನು ಪೊಲೀಸ್ರು ತನಿಖೆ ಮಾಡ್ಬೇಬಾರ್ದು. ಒಮ್ಮೆ ಮಾಡಿದ್ರೆ ಈ ಊರಲ್ಲಿ ಕೆಂಡದ ಮಳೆ ಆದೀತು! ಗುರ್ಕಾರ್ರ ಮನೆಯ ಕಂಬ ಮುರ್ದುಹೋದೀತು! ನನ್ನ ತಂಗಿ ಮಾರಿಯ ಉಪದ್ರ ಯಾರನ್ನೂ ಬಿಡ್ಲಿಕ್ಕಿಲ್ಲ ಎಚ್ಚರಿಕೆ! ನಿನ್ನ ಅಳಿಯನೇ ಇನ್ನೊಂದು ಬಂಗಾರದ ದೃಷ್ಟಿಯನ್ನು ನಂಗೆ ಮಾಡಿಸಿ ಹಾಕ್ಲಿ! ...ಹಾಂ... ಹೂಂ!" ಅಂತ ಹೇಳಿದವ್ನೇ ಪಾತ್ರಿ ಕುಣೀಲಿಕ್ಕೆ ಸುರು ಮಾಡಿದ.

ಸೇರಿದ ಜನ ಎಲ್ಲ, "ಅಬ್ಬಾ ದೇವಿಯ ಲೀಲೆಯೇ!" ಅಂತ ಅಂದ್ರು. ಕೊನೆಗೆ ದರ್ಶನ ಇಳಿಯಿತು. ಬಂದ ಪೇಪರಿನವ್ರು ಟಿ.ವಿ.ಯವ್ರೆಲ್ಲ, 'ಭಕ್ತನ ಬಡತನ ತೀರಿಸಿದ ದೇವಿ', 'ಶ್ರೀಮಂತರ ಸೊಕ್ಕನ್ನು ಅಡಗಿಸಿದ ದೇವಿ', 'ದೇವಿಯ ನ್ಯಾಯಾಲಯದಲ್ಲಿ ಬಡವನ ರಕ್ಷಣೆ' ಅಂತೆಲ್ಲ ಅದ್ದೂರಿಯಾಗಿ ವರದಿ ಮಾಡಿದ್ರು ಮರುದಿವ್ಸ.

ಪಾತ್ರಿ ಕಾಂತು ಪೂಜಾರಿ ಮಾತ್ರ ಕದ್ದು ಓಡಿದ್ದು ತನ್ನ ಮಗ ಸುಧಾಕರ ಅಂತ ಇವ್ರಿಗೆ ಕಡೆಗೂ ಗೊತ್ತಾಗ್ಲಿಲ್ಲ ಅಂತ ಒಳಗೊಳಗೇ ಖುಷಿ ಪಟ್ಟ!

ಪಿ. ಬಿ. ಪ್ರಸನ್ನ
ಆಯ್ಕೆ ಶ್ರೇಣಿ ಕನ್ನಡ ಉಪನ್ಯಾಸಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಐದು ರಸ್ತೆ ಹತ್ತಿರ, ಶಿರಸಿ – ೫೮೧ ೪೦೧




ಕೃತಿ : **ಇತಿಹಾಸದ ರಾಜಕೀಯ**
ಲೇಖಕರು : **ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**
ಬೆಲೆ : ರೂ. ೫೦ ಪುಟಗಳು : ೯೬

ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ನಂ. ೧೧, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧




# ಇತಿಹಾಸದ ರಾಜಕೀಯ

## ಒಂದು ಸಮೀಕ್ಷೆ

**ಶಂಕರನಾರಾಯಣ**

**ಡಾ||** ಕೆ. ಎಲ್. ಗೋಪಾಲಕೃಷ್ಣಯ್ಯನವರ ಗ್ರಂಥ 'ಇತಿಹಾಸದ ರಾಜಕೀಯ' ಎರಡನೇ ಮುದ್ರಣ ಕಂಡಿರುವುದು ಸಂತಸದ ವಿಷಯ. ಯಾವುದೇ ಗ್ರಂಥ ಮರುಮುದ್ರಣ ಕಂಡಿದ್ದರೆ, ಓದುಗರು ಆ ಗ್ರಂಥಕ್ಕೆ ಮಾನ್ಯತೆ ನೀಡಿದ್ದಾರೆಂದು ಅರ್ಥೈಸಬಹುದು. ಯಾವುದೇ ಪ್ರಾಂತ್ಯದ ಅಥವಾ ದೇಶದ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಮತ್ತು ಆರ್ಥಿಕ ಬೆಳವಣಿಗೆಯ ಅನೇಕ ಹಂತಗಳನ್ನು ನಿಖರವಾಗಿ, ನಿರ್ದಿಷ್ಟವಾಗಿ ಮತ್ತು ವಸ್ತುನಿಷ್ಠವಾಗಿ ದಾಖಲಿಸುವುದೇ ಇತಿಹಾಸದ ಉದ್ದೇಶವೆಂದು ನನ್ನ ಅಭಿಪ್ರಾಯ. ಗತಕಾಲವನ್ನು ವರ್ತಮಾನಕ್ಕೆ ಪರಿಚಯಿಸುವ ಅಧ್ಯಯನ ಪದ್ಧತಿಯೇ ಇತಿಹಾಸ ಎಂದೂ ಹೇಳಬಹುದು.

ಸುಮಾರು ಮೂರು ಸಾವಿರದಿಂದ ನಾಲ್ಕು ಸಾವಿರ ವರ್ಷಗಳ ಗತಕಾಲವನ್ನು ಹೊಂದಿರುವ ಭಾರತ ದೇಶದ ಇತಿಹಾಸವನ್ನು ನಿರೂಪಿಸುವುದು ಅತ್ಯಂತ ಕ್ಲಿಷ್ಟಕರವಾದ ಪ್ರಕ್ರಿಯೆ. ಅನೇಕ ಕಾಲಘಟ್ಟಗಳನ್ನು ಹಾದು ಬಂದಿರುವ ಭಾರತದೇಶದ ಇತಿಹಾಸದಲ್ಲಿ ನಿರಂತರತೆಯ ಕೊರತೆಯಿದೆ. ಒಂದು ಕಾಲಘಟ್ಟದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಸಾಮಾಜಿಕ ಮತ್ತು ಬೌದ್ಧಿಕ ಪರಿಸರ ಅವನತಿಯನ್ನು ಕಂಡಿದ್ದೇಕೆ ? ಎಂಬ ಪ್ರಶ್ನೆಗೆ ಸರಳ ಉತ್ತರ ಸಿಗುವುದಿಲ್ಲ. ಉತ್ಖನನದಲ್ಲಿ ದೊರಕುವ ಅವಶೇಷಗಳು, ಪಳೆಯುಳಿಕೆಗಳು ಮತ್ತು ಕಲ್ಲಿನ ಶಾಸನಗಳು ಇತಿಹಾಸದ ದಾಖಲಾತಿಗೆ ಲಭ್ಯವಾಗುವ ಆಧಾರಗಳು. ಇಂತಹ ಆಧಾರಗಳು ಒಂದು ನಿರ್ದಿಷ್ಟ ಕಾಲಘಟ್ಟದಲ್ಲಿ ಸಾಮಾಜಿಕ ಸ್ಥಿತಿಗತಿಗಳ ಕುರುಹುಗಳನ್ನು ಒದಗಿಸುತ್ತವೆ.

ಅನೇಕ ಇತಿಹಾಸ ತಜ್ಞರು ಭಾರತದ ಇತಿಹಾಸವನ್ನು ಕುರಿತು ಗ್ರಂಥಗಳನ್ನು ರಚಿಸಿದ್ದಾರೆ. ತಮಗೆ ಲಭ್ಯವಾದ ಆಧಾರಗಳನ್ನು ಪರಾಮರ್ಶಿಸಿ ಈ ದೇಶದ ಐತಿಹಾಸಿಕ ಪರಂಪರೆಯನ್ನು ವಿವರಿಸಿದ್ದಾರೆ.

ವೇದಕಾಲೀನ ಸಮಾಜ ಅಸ್ತಿತ್ವಕ್ಕೆ ಬರುವ ಮೊದಲು ಅನೇಕ ಬುಡಕಟ್ಟು ಜನಾಂಗಗಳು ಈ ದೇಶದ ದುರ್ಗಮ ಅರಣ್ಯ ಪ್ರದೇಶಗಳಲ್ಲಿ ವಾಸಿಸುತ್ತಿದ್ದವು. ನಂತರದ ದಿನಗಳಲ್ಲಿ, ಭಾರತದ ವಾಯುವ್ಯ ಮೂಲೆಯಿಂದ ಪ್ರವೇಶಿಸಿದ ಆರ್ಯರು ತಮ್ಮ ಶಸ್ತ್ರಗಳು ಮತ್ತು ಆಯುಧಗಳ ಬಲದಿಂದ ವಿಶಾಲವಾದ ಭೂ ಪ್ರದೇಶವನ್ನು ಆಕ್ರಮಿಸಿ, ಗ್ರಾಮ ಮತ್ತು ನಗರಗಳ ನಿರ್ಮಾಣ ಪ್ರಾರಂಭಿಸಿದರು. ಕೃಷಿ ಜ್ಞಾನವನ್ನು ಹೊಂದಿದ್ದ ಆರ್ಯರು ಬೇಸಾಯವನ್ನು ಪ್ರಾರಂಭಿಸಿದರು. ಮೂಲನಿವಾಸಿಗಳಾದ 'ಆದಿಮ' ಬುಡಕಟ್ಟು ಜನರನ್ನು ತಮ್ಮ ಹೊಲ–ಗದ್ದೆಗಳಲ್ಲಿ ದುಡಿಯುವ ಕೆಲಸಕ್ಕೆ ನೇಮಕಗೊಳಿಸಿದರು. ಕ್ರಮೇಣ, ಶೋಷಕ ಮತ್ತು ಶೋಷಿತ ವರ್ಗಗಳು ಸಮಾಜದ ಪ್ರಮುಖ ಅಂಗಗಳಾಗಿ ಅಸ್ತಿತ್ವಕ್ಕೆ ಬಂದವು. ವರ್ಗಹಿತಾಸಕ್ತಿಗಳು ಸ್ಪಷ್ಟವಾಗಿ ರೂಪುಗೊಂಡಂತೆ, ಅನೇಕ ರಾಜಕೀಯ ವ್ಯವಸ್ಥೆಗಳು ಮತ್ತು ಸಿದ್ಧಾಂತಗಳು ಹುಟ್ಟಿಕೊಂಡವು. ಆರ್ಯರ ಪ್ರಾಬಲ್ಯ ಹೆಚ್ಚಿದಂತೆ, ಬುಡಕಟ್ಟು ಜನರು ದುರ್ಬಲರಾದರು. ಸಾಮಾಜಿಕ ಕಾಯಿದೆ, ಕಟ್ಟಳೆಗಳು ಆಳುವ ವರ್ಗದ ಹಿತದೃಷ್ಟಿಯಿಂದ ರೂಪಿತವಾಗಿ, ದುಡಿಯುವ ವರ್ಗದ ಜನರಿಗೆ ಮುಂದುವರಿಯಲು ಅವಕಾಶ ನೀಡಲಿಲ್ಲ. ಸಾಂಸ್ಕೃತಿಕ ವಲಯದಲ್ಲೂ, ಆರ್ಯರು ತಮ್ಮ ಸಂಸ್ಕೃತಿಯನ್ನು ಇಡೀ ಸಮಾಜದ ಸಂಸ್ಕೃತಿಯೆಂದು ಪ್ರಚಾರ ಮಾಡಿದರು. ಪರ್ಯಾಯವಾಗಿ, ಬುಡಕಟ್ಟು ಜನರು ತಮ್ಮದೇ ಆದ ಸಂಸ್ಕೃತಿ ಮತ್ತು ಆಚರಣೆಗಳನ್ನು ಹೊಂದಿದ್ದರೂ, ಅವರ ಸಾಂಸ್ಕೃತಿಕ ನಂಬಿಕೆಗಳು ಮತ್ತು ಜೀವನಶೈಲಿ ನೇಪಥ್ಯದಲ್ಲೇ ಉಳಿದವು.

ಭಾರತ ಬ್ರಿಟಿಷರ ಆಳ್ವಿಕೆಯಿಂದ ಮುಕ್ತವಾಗಿ, ದೇಶ ವಿಭಜನೆಯ ನಂತರ ಹಿಂದೂ 'ಮೂಲಭೂತವಾದಿ' ಸಂಘಟನೆಗಳು 'ಹಿಂದೂ ರಾಷ್ಟ್ರ' ಪರಿಕಲ್ಪನೆಯನ್ನು ವ್ಯಾಪಕವಾಗಿ ಪ್ರಚಾರ ಮಾಡಲು ಪ್ರಾರಂಭಿಸಿದವು. ಕೆಲವು ಇತಿಹಾಸಕಾರರ ಪ್ರಕಾರ, ಮುಸ್ಲಿಂ ದೊರೆಗಳ ದಾಳಿಯ ನಂತರವೇ 'ಹಿಂದೂ' ಎಂಬ ಶಬ್ದದ ಬಳಕೆ ರೂಢಿಗೆ ಬಂದಿತು ಎಂಬ ಅಭಿಪ್ರಾಯವಿದೆ. ಕಾಲಕ್ರಮೇಣ, ಹಿಂದೂ ಮೂಲಭೂತವಾದಿ ಸಂಘಟನೆಗಳು 'ಆರ್ಯ ಸಂಸ್ಕೃತಿ'ಯನ್ನೇ ಇಡೀ ಭಾರತೀಯ ಸಂಸ್ಕೃತಿಯೆಂದು ಬಿಂಬಿಸಿದವು. ತತ್ಪರಿಣಾಮವಾಗಿ ಆರ್ಯರು ಈ ದೇಶದ ಮೂಲನಿವಾಸಿಗಳೆಂದು ಸಾಬೀತುಪಡಿಸುವ ಅನಿವಾರ್ಯತೆ ಉಂಟಾಯಿತು. ಈ ನಿಟ್ಟಿನಲ್ಲಿ ಹಿಂದುತ್ವವಾದಿ 'ಸಂಶೋಧಕ'ರು ಆರ್ಯರು ಈ ದೇಶದ ಮೂಲನಿವಾಸಿಗಳೆಂಬ ವಾದವನ್ನು ಸಮರ್ಥಿಸಲು ಅನೇಕ ಗ್ರಂಥಗಳನ್ನು ರಚಿಸಿದರು.

ಪ್ರಾಚೀನ ಭಾರತದ ನಾಗರಿಕತೆಗಳಲ್ಲಿ ಹರಪ್ಪ ಮತ್ತು ಸಿಂಧೂ ಕಣಿವೆ ನಾಗರಿಕತೆಗಳು ಪ್ರಮುಖವಾಗಿ ಚರ್ಚೆಯಾಗಿರುವ ವಿಷಯಗಳು. ಆ ಪ್ರದೇಶಗಳಲ್ಲಿ ಕೈಗೊಂಡ ಸಂಶೋಧನೆ ಮತ್ತು




# ಶುರುವಾಗಲಿ ಕ್ರಾಂತಿ



ನಿನ್ನೆಯವರೆಗೂ ಹೆಣ್ಣು
ಮನೆಯ ಮಡಿಕೆ ಕುಡಿಕೆ
ಮೆಟ್ಟಿಲ ಮೇಲೆ ಬಿದ್ದಿರುವ ಕಾಲೊರಸು
ಬಾಗಿಲ ಸಂದಿಯ ಕಸಬರಿಕೆ
ಕೊಟ್ಟಿಗೆಯಲ್ಲಿ ಕೊರಳಾಡಿಸುವ ಹಸು
ಒಟ್ಟಿನಲ್ಲಿ ಅಸ್ತಿತ್ವವಿಲ್ಲದವುಗಳೊಂದಿಗೆ
ಒಂದು ವಸ್ತುವಾದವಳು.

ಅತ್ತರೆ ಅಪಶಕುನ
ನಕ್ಕರೆ ಕೇಡು
ಲಕ್ಷ್ಮಣರೇಖೆಯೊಳಗೆ ಹೆಣ್ಣಿಗೆ
ನೂರು ಕಟ್ಟುಪಾಡು

ಇಂದು ಹಾಗಿಲ್ಲ
ಗಂಡಿನೊಂದಿಗೆ ಸಮಹೆಜ್ಜೆ
ಅವನಿಗಿಂತಲೂ ವೇಗ
ವಿದ್ಯೆ ವಿದ್ವತ್ತು ಅವಳ ಮಹತ್ತು
ಒಪ್ಪಿಕೊಂಡಿದೆ ಈ ಜಗತ್ತು

ಈಗ
ವೇಗಕ್ಕೆ ತಡೆಯೊಡ್ಡಲು
ಹುಲಿ ಅವಳ ದಾರಿಯಲಿ
ಸಿಂಹ ಕೇರಿಯಲಿ
ಊಳಿಡುವ ನಾಯಿ ನರಿ ಊರ ತುಂಬ

ಎಲ್ಲ ಕಡೆಯಿಂದ ಅವಳ
ಹತ್ತಿಕ್ಕುವ ಕಾಯಕ
ಮಾನಿನಿಯ ಮೇಲೆರಗುವ ಮೃಗಗಳಿಗೆ
ಸ್ವಾತಂತ್ರ್ಯ ಕಸಿಯುವ ತವಕ

ಗಾಯಕ್ಕೆ ಉಪ್ಪು ಸವರುವ ಹಾಗೆ
ಉಪದೇಶಿಸುವರು ಮನುವಾದದ ಮೊಮ್ಮಕ್ಕಳು
ಹೆಣ್ಣಿಗೆ ಹೆಚ್ಚಿನಿಸುವಷ್ಟು ದಿಟ್ಟೆಯಂತೆ
ಎಲ್ಲ ದುರಂತಕ್ಕೆ ಕಾರಣ ಅವಳು ಧರಿಸುವ ಬಟ್ಟೆಯಂತೆ !

ಹೋಗಲಿ ಬಿಡಿ; ಹಳ್ಳಕ್ಕೆ ಬಿದ್ದರೆ ಆಳಿಗೊಂದು ಕಲ್ಲು ಇದ್ದದ್ದೇ
ಸೋತುಹೋದವರಿಗೆ ಈ ಏಟು ಎಂದಿನಿಂದಲೂ ಬಿದ್ದದ್ದೇ !

ಬದುಕಲು ಬಿಡಿ ಎಂದು
ಬೇಡಿಕೊಳ್ಳುವ ಬದಲು
ಬದಲಾಗಬೇಕು ಕೋಮಲೆ
ಕಲಿಯಬೇಕು ಬದುಕುವ ಕಲೆ
ಚಂಡಿಚಾಮುಂಡಿ ಅವತಾರ ತಾಳಿ
ರಣಹದ್ದುಗಳ ಇಂಚಿಂಚೂ ಸೀಳಿ
ನಿಲ್ಲಿಸಬೇಕಿದೆ. ಈ ವಿಕೃತ ದಾಳಿ
ನಮ್ಮ ತನುಮನಕೆ ನಾವೇ ಕಾವಲು
ಇನ್ನಾರು ಹೇಳಿ ?

ಇದು ಸಂಕ್ರಾಂತಿಯ ಶುಭ ಹೊತ್ತು
ಶುರುವಾಗಲಿ ಕ್ರಾಂತಿ
ವನಿತೆ ನಿನ್ನಳಲು ನಿಂತು
ಹರಿಯಲಿ ಹೊಸ ಕಾಂತಿ

**ಡಾ॥ ವಸುಂಧರಾ ಭೂಪತಿ**
ನಂ. ೨೨೨, 'ಭಾರದ್ವಾಜ', ೨ನೇ 'ಇ' ಅಡ್ಡರಸ್ತೆ
೩ನೇ ಫೇಸ್, ೩ನೇ ಬ್ಲಾಕ್, ಬಸವೇಶ್ವರನಗರ
ಬೆಂಗಳೂರು–೫೬೦ ೦೭೯

ಉತ್ಖನನ ಯೋಜನೆಗಳ ಫಲಿತಾಂಶವಾಗಿ ಆರ್ಯರ ಆಗಮನಕ್ಕೂ ಮುಂಚೆ ಸುಂದರ ಮತ್ತು ಸುಸಜ್ಜಿತ ನಗರಗಳು ಅಸ್ತಿತ್ವದಲ್ಲಿದ್ದವು ಎಂಬ ಅಂಶವನ್ನು ಬಹಿರಂಗಗೊಳಿಸಲಾಯಿತು. ಹರಪ್ಪ ಮೊಹೆಂಜೊದಾರೊ ಸಂಸ್ಕೃತಿಯು ಪ್ರಾಚೀನ ಭಾರತದ ಸಾಂಸ್ಕೃತಿಕ ಬೆಳವಣಿಗೆಯ ಒಂದು ಪ್ರಮುಖ ಘಟ್ಟವೆಂದು ಪರಿಗಣಿಸಬೇಕಾಗಿದೆ.

ಉತ್ಖನನದ ಸಂದರ್ಭದಲ್ಲಿ ಅನೇಕ ಪಳೆಯುಳಿಕೆಗಳು, ಮಣ್ಣಿನ ಮಡಕೆಗಳು, ಕಟ್ಟಡದ ಅವಶೇಷಗಳು ಮತ್ತು ಮುದ್ರಿಕೆಗಳನ್ನು ಹೊರಕ್ಕೆ ತೆಗೆಯಲಾಯಿತು. ಅನೇಕ ದಶಕಗಳ ಕಾಲ, ಅವುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ತಜ್ಞರು ತಮ್ಮ ಅಭಿಪ್ರಾಯಗಳನ್ನು ಮತ್ತು ವಿಶ್ಲೇಷಣೆಗಳನ್ನು ಮಂಡಿಸಿದರು.

'ಹಿಂದೂ ರಾಷ್ಟ್ರೀಯವಾದ'ದಿಂದ ಪ್ರಭಾವಿತರಾದ ಅನೇಕ ಬುದ್ಧಿಜೀವಿಗಳು ಮುದ್ರಿಕೆಗಳಲ್ಲಿ ವ್ಯಕ್ತವಾಗಿರುವ ಮಾಹಿತಿ ಮತ್ತು ಚಿತ್ರಗಳನ್ನು ತಮ್ಮದೇ ರೀತಿಯಲ್ಲಿ ವ್ಯಾಖ್ಯಾನಿಸಲು ಪ್ರಯತ್ನಿಸಿದರು. ಅಮೆರಿಕಾದಲ್ಲಿ ನೆಲೆಸಿದ್ದ ಗಣಕಯಂತ್ರ ಪರಿಣತರಾದ ಡಾ॥ ಎನ್. ಎಸ್. ರಾಜಾರಾಂ ಅವರು ಮುದ್ರಿಕೆಯೊಂದರಲ್ಲಿದ್ದ ವಿಚಿತ್ರ ಪ್ರಾಣಿಯನ್ನು 'ಕುದುರೆ'ಯೆಂದು ವ್ಯಾಖ್ಯಾನಿಸಿದರು. ಗಣಕಯಂತ್ರ ತಂತ್ರಗಳನ್ನು ಬಳಸಿ ಮುದ್ರಿಕೆಯಲ್ಲಿದ್ದ ಕಾಲ್ಪನಿಕ 'ಏಕ ಶೃಂಗಿ' ಪ್ರಾಣಿಯ ಚಿತ್ರವನ್ನು ತಮ್ಮ ವ್ಯಾಖ್ಯಾನಕ್ಕೆ ಪುಷ್ಟಿ ನೀಡುವ ಸಲುವಾಗಿ ತಿರುಚಿ ಅದು 'ಕುದುರೆ'ಯ ಚಿತ್ರವೆಂದು ಘೋಷಿಸಿದರು.

ಶ್ರೀಯುತ ಗೋಪಾಲಕೃಷ್ಣಯ್ಯನವರು ತಮ್ಮ ಕೃತಿಯಲ್ಲಿ, ರಾಜಾರಾಂ ಅವರ ಕೃತ್ರಿಮ ತಂತ್ರವನ್ನು ಬಹಿರಂಗಗೊಳಿಸಿದ್ದಾರೆ. ಇತಿಹಾಸದಲ್ಲಿ ರಾಜಕೀಯ ನುಸುಳಿದಾಗ ಆಗುವ ವಿಕೃತಿಗಳನ್ನು ಮತ್ತು ವಿಕಲ್ಪಗಳನ್ನು ಕೂಲಂಕಷವಾಗಿ ಚರ್ಚಿಸಿದ್ದಾರೆ. ಇತಿಹಾಸವನ್ನು ಯಾವುದೇ ರಾಜಕೀಯ ಬಣಗಳ ವಕ್ತಾರರಾಗಿ ದಾಖಲಿಸುವ ಯತ್ನ ನಡೆದಾಗ ಇಂತಹ ಅಪಚಾರಗಳು ಸಂಭವಿಸುತ್ತವೆ. ಇತಿಹಾಸದ ಬರವಣಿಗೆಯು ಅತ್ಯಂತ ಜವಾಬ್ದಾರಿಯುತ ಕೆಲಸವೆಂದು ಅರಿತುಕೊಳ್ಳಬೇಕು.

ಪೂರ್ವಗ್ರಹ ಪೀಡಿತವಲ್ಲದ ಇತಿಹಾಸ ಗ್ರಂಥಗಳನ್ನು ಯುವಪೀಳಿಗೆಗೆ ನೀಡಬೇಕು. ಯಾವುದೇ ಮತಧಾರ್ಮಿಕ ಚಿಂತನೆಯ ಛಾಪನ್ನು ಎಳೆಯರ ಮನಗಳಲ್ಲಿ ಮೂಡಿಸುವ ಸಲುವಾಗಿ ರಚನೆಯಾದ ಗ್ರಂಥಗಳು ಸರಿಯಾದ ಮಾರ್ಗದರ್ಶನ ನೀಡಲಾರವು.

ಇಂದು ಭಾರತ ದೇಶದ 'ಚರಿತ್ರೆ'ಯ ಹೆಸರಿನಲ್ಲಿ ಅನೇಕ ಲೇಖಕರು ಪುಸ್ತಕಗಳನ್ನು ಬರೆದಿದ್ದಾರೆ. ಮಾರುಕಟ್ಟೆಯಲ್ಲಿ ಹೇರಳವಾಗಿ 'ಇತಿಹಾಸ'ದ ಗ್ರಂಥಗಳು ದೊರೆಯುತ್ತವೆ. ಈ ದೇಶದ ಇತಿಹಾಸದ ಕುರಿತಾಗಿ 'ಸತ್ಯ' ಮತ್ತು 'ಮಿಥ್ಯೆ'ಗಳನ್ನು ಬೇರ್ಪಡಿಸುವ ಗ್ರಂಥಗಳು ಈ ಹೊತ್ತಿನ ಅಗತ್ಯಗಳಾಗಿವೆ.

**ಶಂಕರನಾರಾಯಣ**
ನಂ. ೫೪/೧೧೪, ೧ನೇ ಅಡ್ಡರಸ್ತೆ, ಕೃಷ್ಣಾನಗರ
ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧

■ ಚನ್ನಪ್ಪ ಅಂಗಡಿ ಬಮ್ಮನಹಳ್ಳಿ ■

ಮಾರುತಿ ಗಲ್ಲಿಯಲ್ಲಿನ ರೆಡ್ಡಿಯವರ
ಭವ್ಯ ಬಂಗಲೆ ಭಣಗುಡುತ್ತಿತ್ತು.
ತಮ್ಮ ಅಗತ್ಯಕ್ಕನುಗುಣವಾಗಿ
ನಿರ್ಬೀಜೀಕರಣಗೊಳಿಸುವ
ಸಂಪ್ರದಾಯದ ಸಂಸ್ಥಾನಿಕರು
ಅಮಾಯಕ ರೈತರಿಗೆ ಮೊಳಕೆ
ಹಾಯದ ಬೀಜ ನೀಡಿ ಅವರನ್ನೂ
ನಿರ್ಬೀಜೀಕರಣಗೊಳಿಸಿದ್ದರು.
ಈಗ ತಮ್ಮಲ್ಲಿಯೇ ಫಲವತ್ತಾದ ನೆಲವಿದೆ.
ಆದರೆ ವಂಶಾವಳಿಯನ್ನು ಬಿತ್ತಿ ಬೆಳೆಯುವ
ಫಲವಂತ ಬೀಜವಿಲ್ಲ. ಅದೇ ಐಬು
ಸೊಸೆಯಲ್ಲಿದ್ದರೆ ಇಷ್ಟೊತ್ತಿಗೆ ಮತ್ತೊಂದು
ಶುಭಕಾರ್ಯ ಹಮ್ಮಿಕೊಳ್ಳುತ್ತಿದ್ದರೊ ಏನೊ ?



# ಭವದ ಬೀಜ ಮೊಳೆವಲ್ಲಿ?

"ಮೂರು ಮಂದಿ ಹೆಂಡ್ತೀರು, ಮ್ಯಾಲ ಒಬ್ಬಾಕಿನ ಇಟ್ಕೊಂಡು ಮೆರೆದ ಮಂತ್ಯಾನ ನಮ್ದು. ಇದೇನು ಬಂತು ?" ಎನ್ನುತ್ತ ಕುಳಿತ ಕುರ್ಚಿಯಿಂದ ಮೇಲೆದ್ದು ವೆಂಕಟೇಶರೆಡ್ಡಿ ಕಾಲು ಹೊಸೆದುಕೊಂಡ. ಹೊಟ್ಟೆಯೊಳಗಿನ ಪಿತ್ತ ಚಿಲ್ಲೆಂದು ಎದೆಗೆ ನುಗ್ಗಿ ಹುಳಿತೇಗಾಗಿ ಬಾಯಿಂದ ಹೊರಬರುವ ಪರಿಗೆ ತಾನೇ ಹೇಸಿಕೊಂಡ. ಕಿಬ್ಬೊಟ್ಟೆಯಲ್ಲಿ ಮಲೆತ ಕೊಳೆ ತಿಕ್ಕಿಸಿಮುಕ್ಕಿಸುತ್ತ ಡುರ್... ಬುರ್... ಸದ್ದು ಹೊರಡಿಸಿತು. ಬಿತ್ತನೆ ಬೀಜಕ್ಕಾಗಿ ಕವಿದ ಜನಸಂದಣಿ ಹನುಮಂತನ ಬಾಲವಾಗಿ ಅರ್ಧ ಪೇಟೆಯನ್ನು ಸುತ್ತಿಕೊಂಡಿತ್ತು. ಒಂದು ಮಳೆ ಬಿದ್ದರೆ ಸಾಕು ಬಾಲಾಜಿ ಆ್ಯಗ್ರೋ ಕೇಂದ್ರ ಗುಂಯ್‌ಗುಡುವ ಜೇನುಗೂಡಾಗುತ್ತದೆ. ಪ್ರತೀ ಸೀಸನ್‌ನಲ್ಲಿ ಖಾಕಿಗಳ ಎಂಜಲ ಕೈ ನಾಲ್ಕಾರು ಸಲ ಲಾಠಿ ಬೀಸಲೇಬೇಕು. ಹುಟ್ಟಿಗೆ ಕಲ್ಲೊಗೆದಾಗ ಕೆರಳಿ ಕಿತ್ತಾಡುವ ಹುಳುಗಳು ಕಾಯ್ದೆಯ ಜ್ವಾಲೆಗೆ ಸುಂದು ಹೊಡೆದು ನೆಲಕಚ್ಚುತ್ತಿದ್ದವು. ಸಾವಿರಾರು ರೂಪಾಯಿ ಕಿಮ್ಮತ್ತಿನ ಟೊಮೆಟೊ, ಬದನೆ, ಮೆಣಸಿನಕಾಯಿ, ಸೂರ್ಯಪಾನ, ಗೊಂಜಾಳ, ಹತ್ತಿ, ಕೆಲವು ದುಬಾರಿ ಹೂಗಳು, ಹೀಗೆ ಎಲ್ಲ ಹೈಬ್ರಿಡ್ ಬೀಜಗಳು ಬಿಸಿಬಿಸಿ ದೋಸೆಯಂತೆ ಬಿಕರಿಯಾಗುವ ಜಾಗವೆಂದರೆ ಸಾಮಾನ್ಯವೆ ? ಗದ್ದಲ ಮಿತಿಮೀರಿದರೆ ಸ್ವತಃ ತಹಶೀಲ್ದಾರರು ಬಂದು ಪೊಲೀಸ್ ಕಾವಲಿಗೆ ಸೂಚಿಸಿ ಹೋಗುತ್ತಿದ್ದರು. ಗಲ್ಲಾಪೆಟ್ಟಿಗೆ ಮೇಲೆ ಕುಳಿತು ಪುರುಸೊತ್ತಿಲ್ಲದೆ ರೊಕ್ಕ ಎಣಿಸುವ ಮಾಲೀಕನಿಗೆ ಇದಕ್ಕಿಂತ ಪ್ರತಿಷ್ಠೆಯೇನಿದೆ ?

ಗುಬುಗುಬು ಗದ್ದಲ ಮಾಡುವ ಜನರನ್ನು ಕಂಡು "ಹೇಸಿಗೆ ಮ್ಯಾಲ ನೊಣ ಮುಕ್ಕುರಿಕೊಂಡಂಗ ಮಾಡ್ತಾರು" ಎಂದು ವೆಂಕಟೇಶರೆಡ್ಡಿ ಮುಖ ಸಿಂಡರಿಸಿದ. ಹತ್ತಿರದಲ್ಲಿದ್ದವನಿಗೆ ಅದು ಕೇಳಿತು. "ಪುಗಸಟ್ಟೆ ಕೊಡಂಗಿಲ್ಲ. ತೊಗೊಳ್ಳೊ, ಚಾಪಿ ತೊಳ್ದು ನೀರು ಕುಡಿಯೋವ್ನ. ಮಾರಿ ಮ್ಯಾಲ ರೊಕ್ಕಾ ಒಗ್ದು ತೊಗೊಂಡು ಹೋಗ್ತೇವಿ" ಮನದಲ್ಲಿ ಗುನುಗುನಿಸಿ ಸಂಕಟ ತಗ್ಗಿಸಿಕೊಂಡ.

ಆದರೂ ಇವತ್ತು ರೆಡ್ಡಿಯ ಎದೆಯಲ್ಲಿ ಬಿರುಸು ಕೈಯೊಂದು ಮನಸ್ವೀ ಹರಿದಾಡುತ್ತಿತ್ತು. ಸುತ್ತಲಿನ ಹತ್ತಾರು ಊರುಗಳಿಗೆ ಬೀಜ ಮಾರುವ ವ್ಯಾಪಾರ, ದುಡ್ಡನ್ನು ಕೇವಲ ಗಳಿಸುವದಿಲ್ಲ. ಬದಲಾಗಿ ಗರಿಗರಿ ನೋಟುಗಳನ್ನು ಮುದ್ರಿಸುತ್ತದೆ. ಹೈಬ್ರಿಡ್ ಬೀಜದ ವ್ಯಾಪಾರವೆಂದರೆ ಒಂದು ತಕ್ಕಡಿಯಲ್ಲಿ ಬೀಜವನ್ನಿಟ್ಟರೆ ಮತ್ತೊಂದರಲ್ಲಿ ನೋಟುಗಳನ್ನೇ ಇಡಬೇಕು. ಡಾಲರ್ ಲೆಕ್ಕದಲ್ಲಿ ತಯಾರಾದ ಬೀಜ ರೂಪಾಯಿ ಲೆಕ್ಕದಲ್ಲಿ ಹಂಚಬೇಕೆಂದರೆ ಮತ್ತಿನ್ನೇನು ಆಗುತ್ತದೆ ? ವಿನ್ಸೆಂಟೊ ಕಂಪನಿಯ ಅಧಿಕೃತ ವಿತರಕನೆಂಬ ಹಣೆಪಟ್ಟಿ ಅವನ ತಲೆಗೆ ಭಾರದ ಕಿರೀಟವಾಗಿದೆ. ಹೊಸಹೊಸ ನಮೂನೆಯ ಬೀಜಗಳನ್ನು ಬಣ್ಣಬಣ್ಣದ ಪಾಕೇಟಿನಲ್ಲಿ ಮಾರುತ್ತ ಜವಾರಿ ಭತ್ತ, ರಾಗಿ, ಜೋಳದ ಮೇಲೆ ಯುದ್ಧವನ್ನೇ ಸಾರಿದ್ದಾನೆ. ಜವಾರಿ ಬೀಜಗಳನ್ನು ಕಾಪಿಡುತ್ತಿದ್ದ ಗಡಿಗೆ ಮಡಿಕೆಗಳು ಠಳ್ಳೆಂದು ಚೂರುಚೂರಾಗಿ ರಸ್ತೆ ಬದಿಗೆ ಬಿದ್ದಿವೆ.

ವೆಂಕಟೇಶರೆಡ್ಡಿ ಕಟ್ಟಿರುವ ಕೋಟೆಯೂ ಬುಡದಿಂದ ಮೇಲಕ್ಕೆ ಕಂಪಿಸುತ್ತಿದೆ. ತನ್ನ ವಂಶದ ಹೆಸರು ಹೇಳುವ ಕುಡಿಯೊಂದು ಚಿಗುರುತ್ತದೊ ಇಲ್ಲವೊ ಎಂಬ ಆತಂಕದಲ್ಲಿ ತೊಳಲಾಡುತ್ತಿದ್ದಾನೆ. ಮಗ ಸುಧೀರರೆಡ್ಡಿಯ ಮುಖ ಕಬ್ಬೇರಿ ಮೊಳೆಯದ ಬೀಜದಂತಾಗಿದೆ. ಮೊಳಕೆ ಹಾಯದ ಬೀಜ, ನುಂಗುವಂತಹ ನಿರ್ವಾತ ಸೃಷ್ಟಿಸುತ್ತದೆಂಬುದರ ಅರಿವು ಅವರಿಗಿರಲಿಲ್ಲ. ದೊಡ್ಡಸ್ತಿಕೆಯಿಂದ ದುಡ್ಡು ಮಾಡುತ್ತ ನುಗ್ಗುತ್ತಿದ್ದ ರೆಡ್ಡಿಗಳಿಗೆ ಆಯಕಟ್ಟಿನಲ್ಲಿ ಮಾಯದ ಗಾಯವಾದಂತಾಗಿತ್ತು.

ಬಹಳ ಹಿಂದೆ ಆ ಭಾಗದಲ್ಲಿಯೇ ಬಲಿಷ್ಠ ಪಾಳೆಯಗಾರರಾಗಿದ್ದ ಅವರ ಮನೆತನಕ್ಕೆ ಸೇರಿದ ಒಂದು ಅರಮನೆಯೇ ಇತ್ತಂತೆ. ಅಂದ ಮೇಲೆ ಅದಕ್ಕೊಂದು ಅಂತಃಪುರ, ಮತ್ತಲ್ಲಿ ರಾಣಿಯಂದಿರು, ಸಖಿಯರು, ಸದ್ದು-ಶುದ್ಧ ವ್ಯವಸ್ಥೆ.

ರಾಣಿಯರೊಂದಿಗೆ ಸಖಿಯರು, ದೊರೆಗಳ ಸ್ವತ್ತು, ಕರೆ ಬಂದಾಗ ಹಾಸಿಗೆ ಸೇವೆ ಒದಗಿಸಬೇಕು. ಹತ್ತು ಹಲವು ಕಾರುಬಾರಿನ ಮೇಲೆ ಗಂಡಸರು ಹೊರಹೋದಾಗ ಅರಮನೆಯ ಅರಗಿಣಿಗಳ ಕಾವಲಿಗೆ ವ್ಯವಸ್ಥೆಯಾಗಬೇಕಲ್ಲ. ಅದಕ್ಕಾಗಿ ಪೈಲ್ವಾನರಂತಹ ಗಂಡಸರನ್ನು ಹುಡುಕಿ ತಂದು ಶಿಶ್ನವನ್ನು ಛೇದಿಸುತ್ತಿದ್ದರು. ಕಾಲು ಕೈಗಳಿಂದ ಕಟ್ಟುಮಸ್ತಾಗಿ ಕಂಡರೂ ಅವರಲ್ಲಿ ತೋಳ್ಬಲವಷ್ಟೇ ಉಳಿದಿರುತ್ತಿತ್ತು. ತೊಡೆಗಳ ಸಂವೇದನೆಯನ್ನು ಹಿಂಡಿ ಹಿಪ್ಪೆ ಮಾಡಿ ಚೆಲ್ಲಿದಾಗ ಅವರ ಕರ್ತವ್ಯದಲ್ಲಿ ಪ್ರಾಮಾಣಿಕತೆ ಪುಟಿದುಬರುತ್ತಿತ್ತು. ರಾಜಧರ್ಮ ಪಾಲನೆಗೆ ಗಂಡಸರು ಹೊರಹೋದಾಗ ವಿರಹವೇದನೆಯಿಂದ ಒರಲುತ್ತಿದ್ದ ಅಂತಃಪುರವಾಸಿಗಳ ಸಹಾಯಕ್ಕೆ ಬಾರದ ಸ್ಥಿತಿ ಹಿಜಡಾ ಪಡೆಯದು. ಹಸಿವು, ನಿದ್ದೆ, ನೀರಡಿಕೆ, ಆಸೆ, ಆಕಾಂಕ್ಷೆಗಳೆಲ್ಲವೂ ಖೋಜಾಗಳ ಸರ್ಪಗಾವಲಿನಲ್ಲಿ ತಣಿಯಬೇಕು. ಸ್ವಾಮಿಭಕ್ತಿಯೊ, ಹಾಸಿಗೆ ಪಥ್ಯವೊ, ತಮಗೆ ದಕ್ಕಲಾರದ ಸುಖವೆಂಬ ಹೊಟ್ಟೆಯುರಿಯೊ ಅಂತೂ ಅವರ ಕರ್ತವ್ಯ ಪ್ರಜ್ಞೆಗೆ ಚ್ಯುತಿಯೆಂಬುದಿಲ್ಲ.

ಮಹಿಳೆಯರು ಒಮ್ಮೆ ಪಾಳೆಗಾರಿಕೆಯ ಸುಪರ್ದಿಗೆ ಬಂದರೆಂದರೆ ತವರಿಗೆ ಹೋಗುವಂತಿಲ್ಲ. ತವರಿನವರು ಅವರಾಗಿಯೇ ಬಂದರೂ ಖೋಜಾಗಳ ಕಣ್ಗಾವಲಿನಲ್ಲಿ ಊಟೋಪಚಾರ, ಆದರಾತಿಥ್ಯ.

ವೆಂಕಟೇಶರೆಡ್ಡಿಯ ಅಜ್ಜ ಭರಮರೆಡ್ಡಿಯ ಕಾಲಕ್ಕೆ ತಲೆತಲಾಂತರದಿಂದ ಬಂದ ಅರಮನೆ ಹೋದರೂ ದೊಡ್ಡ ವಾಡೆಯೊಂದು ಅವನ ವತನದಾರಿಕೆಯಲ್ಲಿತ್ತು. ಮೂವರು ಹೆಂಡಿರು, ಮೇಲೊಬ್ಬಳನ್ನಿಟ್ಟುಕೊಂಡು ಸರದಾರನಾಗಿ ಮೆರೆಯುತ್ತಿದ್ದ. ತನ್ನ ವಂಶದ ರಿವಾಜಿನಂತೆ ವಾಡೆ ಸೇವಕರನ್ನು ನಪುಂಸಕರನ್ನಾಗಿಸುವ ಯೋಜನೆಗಾರಿಕೆ ಬ್ರಿಟಿಷ್ ಕಲೆಕ್ಟರ್‌ನ ಮಧ್ಯಪ್ರವೇಶದಿಂದ ತಪ್ಪಿತ್ತು. ಪಾಳೆಗಾರಿಕೆ ಪ್ರತಿಷ್ಠೆ ಕಾಯ್ದುಕೊಳ್ಳಲು ಸವದತ್ತಿ ಭಾಗದಿಂದ ಗಂಡು ಜೋಗಪ್ಪರನ್ನು ಕರೆತರಿಸಿ ಕಾವಲಿಗೆ ನೇಮಿಸಿದ. ಪರವೂರಿನಲ್ಲಿದ್ದ ಸೂಳೆಯ ಮನೆಗೂ ಇಬ್ಬರು ಗಡ್ಡ ಮೀಸೆ ಬಂದ ಜೋಗಪ್ಪರನ್ನು ಕಳುಹಿಸಿದ. "ಪಹರೆ ಇಡೋದಾದ್ರ ನನ್ನೂ ವಾಡೇಕ ಕರ್ಕೊಂಡ ಹೋಗಿ ಅವ್ರ ಹೆಂಡ್ರ ಸರಿಸಮಾ ಇಟ್ಕೊಳ್ಳಾಕ ಹೇಳ್ರಿ" ಅಂತ ಅವಳು ದಬಾಯಿಸಿದಾಗ ಅವರು ಚೌಡಕಿ ಪದ ಗುನುಗುನಿಸುತ್ತ ಮರಳಿದರು.

ಬ್ರಿಟಿಷ್ ಕಲೆಕ್ಟರ್‌ಗೆ ಎದುರಾಡಲಾಗದೆ ಕಣ್ಣು ಕೆಂಪಗೆ ಮಾಡಿಕೊಂಡಿದ್ದ ಭರಮರೆಡ್ಡಿ, ಇಟ್ಟುಕೊಂಡವಳ ಪೊಗರು ಕಂಡು ಕಿವಿ ಕಿತ್ತ ನಾಯಿಯಂತಾದ. ಸಿಕ್ಕಸಿಕ್ಕವರ ಮೇಲೆ ಹರಿಹಾಯುತ್ತ ರುಬಾಬಗಿರಿ ನಡೆಸಿದ. ಮನುಷ್ಯ ಪ್ರತಿಷ್ಠೆಯ ಹಿಂದೆ ಬಿದ್ದರೆ ಅವನ ಧಿಮಾಕಿಗೆ ಅಂಕೆಯೆನ್ನುವುದಿರುವುದಿಲ್ಲ. ಮನಸೋ ಇಚ್ಛೆ ಕಾಯ್ದೆ ಮಾಡುತ್ತ ಮಾಡುತ್ತ ಮದವೇರಿತು. ಮುಂದಿನ ಹಟ್ಟಿ ಹಬ್ಬಕ್ಕೆ ಊರಿನಲ್ಲಿರುವ ಗೂಳಿಗಳ ಬೀಜ ಒಡೆಯಬೇಕೆಂದು ಆಜ್ಞಾಪಿಸಿದ. ಏನು, ಎತ್ತ ಅಂತ ಕೇಳುವ ಧೈರ್ಯ ಮಾಡಿದವರಿಗೆ, "ಕನಸಿನಾಗ ದ್ಯಾಮವ್ವ ಬಂದು ಹೇಳಿದಳು" ಅಂತ ಬಾಯಿ ಮುಚ್ಚಿಸಿದ. ಹಟ್ಟಿ ಹಬ್ಬದ ಹಿಂದಿನ ದಿನ ದ್ಯಾಮವ್ವನ ಗುಡಿ ಪೂಜಾರಿಯ ಮೈಯಲ್ಲಿ ದೇವಿ ಬಂದಳು. ಪ್ರತಿವರ್ಷ ಹಟ್ಟಿ ಹಬ್ಬಕ್ಕೆ ಎರಡು ಗೂಳಿಗಳ ಬೀಜವೊಡೆದು ವಾಡೆಯ ಹಕ್ಕಿಮನಿಗೆ ಸೇರಿಸಬೇಕೆಂದು ತಿದ್ದುಪಡಿ ಮಾಡಿದ ಹೇಳಿಕೆಯಾಯಿತು.

ಅದರ ಲಾಗಾಯ್ತು ಊರವರು ದೇವಿಯ ಸೇವೆಗೆಂದು ಬಿಡುವ ಎರಡು ಆನೆಯಂತಹ ಗೂಳಿಗಳನ್ನು ದೀಪಾವಳಿ ದಿನದಂದು ವಾಡೆಗೆ ತರಲಾಗುತ್ತಿತ್ತು. ಮುಂದಿನ ಬಯಲಲ್ಲಿ ಅಡ್ಡ ಕೆಡವಿಸಿಕೊಂಡ ಗೂಳಿಗಳು ಸಿಡಿಲು ಬಡಿದಂತೆ ಅರಚುತ್ತಿದ್ದವು. ಎಂಟು ಜನ ಸೇರಿ ಕಾಲು, ಕುತ್ತಿಗೆ, ಕೊಂಬು, ಮೂಗುದಾಣಕ್ಕೆ ಹಗ್ಗಹಾಕಿ ಹಿಡಿದರೂ ನಿಯಂತ್ರಿಸುವುದು ಕಷ್ಟವಾಗುತ್ತಿತ್ತು. ನೆಲಕ್ಕುರುಳಿದ ಗೂಳಿಯ ಮೇಲೆ ಒಂದಿಬ್ಬರು ಹತ್ತಿ ಕೂತಾಗ ಗರಡಿಮನೆ ಚೌಡಪ್ಪ ಎರಡು ಭಾರವಾದ ಕಟ್ಟಿಗೆ ತುಂಡು ಹಿಡಿದು ಮುಂಬರುತ್ತಿದ್ದ. ಮುಂದಾಗುವುದರ ಸೂಚನೆ ತಿಳಿದೊ ಏನೋ ಪುರಮಾಸಿ ಬೆಳೆದ ದೇಹಗಳು ಬಂಡೆಗಲ್ಲಿನಂತೆ ಹೊರಳಾಡುತ್ತಿದ್ದವು. ಬುಸ್‌ಬುಸ್ ಎನ್ನುತ್ತ ದೇಹ ಎಷ್ಟೇ ಕೊಸರಾಡಿದರೂ ಹಲ್ಲಾಮಾಡಿ ಚಂಡುಮುರಿದ ಕೋಳಿಯಂತೆ ನಿಶ್ಚಲವಾಗುತ್ತಿತ್ತು. ಜಗ್ಗಿ ಹಿಡಿದ ಮೂಗುದಾಣದ ಹತ್ತಿರ ಮೂಗಿನ ಹೊರಳೆಯಿಂದ ರಕ್ತ ತೊಟ್ಟಿಕ್ಕುತ್ತಿತ್ತು. ಬಾಯಿಂದ ಧಾರಾಕಾರವಾಗಿ ಹರಿಯುವ ಜೊಲ್ಲಿನೊಂದಿಗೆ ಸೇರಿದ ರಕ್ತ ನೆಲದ ಮೇಲೆ ಇಷ್ಟಗಲ ಕಲೆ ಮೂಡಿಸುತ್ತಿತ್ತು. ಚೌಡಪ್ಪ ತೆಂಗಿನಕಾಯಿ ಗಾತ್ರದ ಮರ್ಮಾಂಗಕ್ಕೆ ತನ್ನೆಲ್ಲ ಶಕ್ತಿ ಬಳಸಿ ಎರಡೂ ಬದಿಯಿಂದ ಟಪ್ ಅಂತ ಏಟು ಹಾಕುತ್ತಿದ್ದ. ನೋವುಂಡ ಜೀವದ ವಿಕಾರವಾದ ಆಕ್ರಂದನ ಬೀಜ ನೀರಾಗಿದ್ದನ್ನು ಖಚಿತಪಡಿಸುತ್ತಿತ್ತು.

ಮನೆತನದ ಹಿರಿಯರಿಂದ ಕೇಳಿದ ಇವೆಲ್ಲ ಕಥೆಗಳನ್ನು ವೆಂಕಟೇಶರೆಡ್ಡಿ ಆಪ್ತರ ಮುಂದೆ ಹೇಳಿಕೊಳ್ಳುತ್ತಿದ್ದ. ದೇಸಗತಿ ಪರಂಪರೆಯ ವೈಭವಕ್ಕೆ ಹೆಮ್ಮೆಪಡುತ್ತ, "ನಮ್ಮ ಮುತ್ತ್ಯಾಗ ಮೂರು ಮಂದಿ ಹೆಂಡ್ರು, ಮ್ಯಾಲೊಬ್ಬಾಕಿ" ಎನ್ನುತ್ತಿದ್ದ. ತನ್ನೆಲ್ಲ ಶೀಟಿಗಳಿಗೆ ತಲೆತಲಾಂತರದಿಂದ ಹರಿದು ಬಂದ ರಕ್ತವೇ ಕಾರಣವೆಂದು ಬೀಗುತ್ತಿದ್ದ. ಆದರೆ ಇವತ್ತಾಗಿರುವದೇನು ?

ತಾನು ಆರಂಭಿಸಿದ ಬೀಜದ ವ್ಯಾಪಾರ ಸಂಸ್ಥಾನಿಕರ ಧರಾಂದುರಿಗೆ ತಕ್ಕ ರೀತಿಯಲ್ಲಿ ವ್ಯಾಪಿಸಿದಾಗ ರೊಕ್ಕ ಹತ್ತೂ ದಿಕ್ಕಿನಿಂದ ಹರಿದುಬಂತು. ವಿನ್ಸೆಂಟೊ ಕಂಪನಿಯ ವಹಿವಾಟೆಂದರೆ ಹಾಗೆಯೇ. ಹತ್ತು ಗ್ರಾಮ್ ಬೀಜಕ್ಕೆ ಬಲ್ಲಂಗ ಬೆಲೆ. ಪಾಕೀಟಿನ ಮೇಲಿರುವ ಟೊಮೆಟೊ, ಬದನೆ, ಬೆಂಡಿ, ಮೆಣಸಿನಕಾಯಿ, ಸೊಯಾಬೀನ್, ಗೊಂಜಾಳ, ಸೂರ್ಯಪಾನ, ಕಟ್‌ಫ್ಲವರ್‌ಗಳ ಚಿತ್ರ ನೋಡಿದರೆ ಎಂಥವರಿಗೂ ತಮ್ಮ ಹೊಲದಲ್ಲಿ ಇಂಥ ಬೆಳೆಯನ್ನು ಕಂಡ ಕನಸು ಬೀಳುತ್ತದೆ. "ಹೊಲಾ ಹೋಗ್ಲಿ, ಬದಾ ಉಳಿಲಿ, ಒಮ್ಮೆರ ಇಂಥಾ ಫಾರಂ ತಳಿ ಹಾಕಬೇಕು" ಎಂಬ ಹೊಟ್ಟೆಯೊಳಗಿನ ಮಾತು ಹೊರಬರುತ್ತಿತ್ತು. ಬಿ. ಟಿ. ಹತ್ತಿ ಬೀಜವಂತೂ ನಿಂತ ನಿಂತಲ್ಲೇ ಲೋಡುಗಟ್ಟಲೆ ಕರಗುತ್ತದೆ. ಸಾಂಪ್ರದಾಯಿಕ ಬೆಳೆಗಳಿಗೆ, ಜವಾರಿ ತಳಿಗಳಿಗೆ ಮಣ್ಣು ಕೊಟ್ಟ ಹೈಬ್ರಿಡ್ ಬೀಜಗಳಿಗೆ ಯದ್ವಾತದ್ವಾ ಬೇಡಿಕೆ ಹೆಚ್ಚಿತು. ಅದಕ್ಕೆ ತಕ್ಕಂತೆ ಮಾಲು ತಂದು ಸುರಿಯಲು ಕಂಪನಿಗೆ ಸಾಧ್ಯವಾಗಲಿಲ್ಲ. ವಹಿವಾಟು ಸರಿದೂಗಿಸುವ ಒತ್ತಡದಲ್ಲಿ ಫಾರಂ ಬೀಜಗಳ ಗುಣಮಟ್ಟದಲ್ಲಿ ಕುಸಿತ ಕಂಡುಬಂದಿತು. ನರಮಾಂಸದ ರುಚಿ ನೋಡಿದ ಹುಲಿ ಮನುಷ್ಯನನ್ನೇ ಹುಡುಕಿ ತಿನ್ನುವಂತೆ, ನೂರಕ್ಕೆ ಹತ್ತಿಪ್ಪತ್ತು ಲಾಭ ತರುವ ದಂಧೆಯನ್ನು ಯಾವ ಬೆಲೆ ತೆತ್ತಾದರೂ ಕಾಯ್ದುಕೊಳ್ಳುವ ದರ್ದು ರೆಡ್ಡಿಗಿತ್ತು. ಹಾಕಿದ ಪ್ರತಿಯೊಂದು ಬೀಜವೂ ಮೊಳಕೆಯೊಡೆಯುವದಿಲ್ಲ ಎಂಬ ಅನುಭವದ ಮೇಲೆ ಕಂಪನಿಯ ಪಾಕೀಟಿನಲ್ಲಿ ಬೇರೆ ಬೀಜವನ್ನು ಸೇರಿಸುತ್ತಿದ್ದ. ಕಂಪನಿಯ ಬ್ರಾಂಡ್ ಹೊತ್ತ ಪೊಟ್ಟಣಗಳು ಹೊಟ್ಟೆಯೊಳಗಿನ ಕಲಬೆರಕೆಯರಿಯದೆ ಎಂದಿನಂತೆ ಸ್ಮಾರ್ಟಾಗಿಯೇ ಕಂಡವು. ಹೀಗೆ ರ‍್ಯಾಕಿಗೆ ಬಂದ ಮಾಲು ಹಾಗೇ ಕರಗುತ್ತಿದ್ದಂತೆ ಹತ್ತು ಉಳಿಯುವಲ್ಲಿ ನೂರು, ನೂರು ಉಳಿಯುವಲ್ಲಿ ಸಾವಿರ. ಶುಭ – ಲಾಭ; ರೆಡ್ಡಿಗೆ ಲಾಭದ ಲೋಭ.

ಕೇಳಿದಷ್ಟು ಬೀಜ ಕೊಡುವ ಬಾಲಾಜಿ ಆ್ಯಗ್ರೊ ಕೇಂದ್ರಕ್ಕೆ 'ಎಣ್ಣಿಯ ಕೊಡಕ್ಕ ಸಣ್ಣಿರುವಿ ಕವಿದಂಗ' ಜನ ಮುತ್ತಿದರು. ಸಾಲ ಮಾಡಿಯಾದರೂ ಸರಿ ಬೀಜ ಕೊಂಡೊಯ್ದು ಭೂಮಿಗೆ ಹಾಕಿ ಮುಗಿಲು ನೋಡುತ್ತ ಕುಳಿತರು. ಮದ್ದಾನೆಯಂತಹ ಮೋಡಗಳು ಫೀಳಿಟ್ಟಾಗ ಮುಗಿಲು ನೋಡುವದನ್ನು ಬಿಟ್ಟ ರೈತ ನೆಲ ನೋಡಲು ಹತ್ತಿದ. ವಿನ್ಸೆಂಟೊ ಕಂಪನಿ ಬೀಜ ಮುನಿಸಿಕೊಂಡಿತೊ ಏನೊ ಎದೆ ಬಿರಿಯುವಂತೆ ನಗಲಿಲ್ಲ. ಮೊದಮೊದಲು ಹೊಲದ ಮೇಲೆ ಹಸಿರು ಚಾದರ ಹೊದಿಸಿದಂತೆ ಎದ್ದು ಬರುತ್ತಿದ್ದ ಫಸಲು ಅಲ್ಲಲ್ಲಿ ಜೊಳ್ಳು ಬಿದ್ದು ತಗ್ಗುತಗ್ಗಾಯಿತು. ಸ್ವಲ್ಪ ಭಯವಾದರೂ ಫಾರಂ ತಳಿಯನ್ನು ಈಗೀಗ ಇಟ್ಟುಕೊಂಡವಳಂತೆ ಪ್ರೀತಿಸುತ್ತಿದ್ದ ಜನರು ಮತ್ತಷ್ಟು ಕಾಯ್ದು ನೋಡುವ ನಿರ್ಧಾರಕ್ಕೆ ಬಂದರು.

ಆ ಕಡೆ ಬಾಲಾಜಿ ಕೇಂದ್ರದಲ್ಲಿ ಮಾಲೀಕರು ಒತ್ತಟ್ಟಿಗಿರಲಿ, ಕಾರಕೂನರು ಕೂಡ ರೊಕ್ಕ ಎಣಿಸಿ ಎಣಿಸಿ ಬಕ್ಕಬಾರಲು ಬಿದ್ದರು. ವೆಂಕಟೇಶರೆಡ್ಡಿ ಮಾತ್ರ ಎರಡು ದಿನದ ಹಿಂದೆ ಜೋಶಿ ಡಾಕ್ಟರು ಹೇಳಿದ ಸಂಗತಿಯನ್ನು ಮತ್ತೆ ಮತ್ತೆ ಮೆಲಕುಹಾಕುತ್ತಿದ್ದ.

ಕರ್ನಾಟಕದ ಗುಳೇದಗುಡ್ಡದವರಾದರೂ ಮುಂಬೈ ಸೇರಿ ಪ್ರಸಿದ್ಧ ವೈದ್ಯರಾಗಿರುವ ಡಾ॥ ಜೋಶಿಯವರ ಕನ್ನಡ ಬಲು ತುಟ್ಟಿ. ಒಟ್ಟಾವದಲ್ಲೊಂದು, ಬಾಸ್ಟನ್‌ನಲ್ಲೊಂದು ಡಿಗ್ರಿ ಮಾಡಿರುವ ಡಾಕ್ಟರು ಮರಾಠಿಯಲ್ಲಾದರೂ ಕೈಗೆ ಕಡ್ಡಿ ಕೊಟ್ಟಂತೆ ಸ್ಪಷ್ಟವಾಗಿಯೇ ಹೇಳಿದ್ದರು. "ರೆಡ್ಡಿಯವರೆ, ನೀವು ಸೈನ್ಸ್ ಗ್ರಾಜ್ಯುಯೇಟ್ ಆಗಿರೋದ್ರಿಂದ ನಿಮಗೆಲ್ಲಾ ಅರ್ಥ ಆಗ್ತೇತಿ. ನಿಮ್ಮ ಸುಧೀರಗ ಕ್ಲಿನೆಫೆಲ್ಟರ್ ಸಿಂಡ್ರೋಮ್ ಐತಿ."

ನಾಲ್ಕೈದು ವರ್ಷದಿಂದ ಸೊಸೆ ಸರಿತಾಳ ಬಸಿರಿನಲ್ಲಿ ಕೈಕಾಲು ಮೂಡುವ ನಿರೀಕ್ಷೆಯಲ್ಲಿ ಒಂದರ ಹಿಂದೆ ಒಂದು ದವಾಖಾನೆ ಸುತ್ತಿ ಮುಂಬೈಗೆ ಬಂದಿದ್ದವರಿಗೆ ಶಾಕ್ ಹೊಡೆದಂತಾಯಿತು. ಅರ್ಧ ಡಜನ್ ಪರೀಕ್ಷೆಗಳು ಮೊದಲು ನಡೆದದ್ದು ಸೊಸೆಯ ಮೇಲೆಯೆ. ರಿಪೋರ್ಟ್‌ಗಳೆಲ್ಲವೂ ಆಕೆ ಬಿತ್ತಿದರೆ ಬೆಳೆಯುವ ಹುಲುಸು ನೆಲವೆಂದು ಸಾರಿದವು. ಉತ್ತಲಾಗದ ಕಮತಗಾರನೆಂದರೆ ತನ್ನ ಮಗನೆಂಬುದು ತಿಳಿದು ರೆಡ್ಡಿಯ ಆಶಾಸೌಧ ಕತ್ತರಿಸಿಕೊಂಡು ಬಿತ್ತು. ಮೊಮ್ಮಗ ಹುಟ್ಟಿದರೆ ತಮ್ಮ

ಪೂರ್ವಜರಲ್ಲಿ ಶೌರ್ಯವಂತನಾದ ವೀರರೆಡ್ಡಿಯ ಹೆಸರಿಡಬೇಕೆಂಬ ಆಸೆ ಕುಸಿದು ಬಿದ್ದ ಚಕ್ರಾಧಿಪತ್ಯವಾಯಿತು.

ಎರಡು ದಿನ ಪರೀಕ್ಷೆಗೊಳಪಡಿಸಿದ ಸುಧೀರನೆಂಬ ದೇಸಗತಿ ವಂಶಸ್ಥನಿಗೆ ಡಾಕ್ಟರು 'ಕ್ಲಿನೆಫೆಲ್ಟರ್ ಸಿಂಡ್ರೋಮ್' ಎನ್ನುವ ಪಟ್ಟ ಕಟ್ಟಿದ್ದರು.

"ಹಂಗಂದರೇನು ?" ವೆಂಕಟೇಶರೆಡ್ಡಿ ಹುಬ್ಬು ಗಂಟಿಕ್ಕಿದ.

"ಅಂದ್ರ ಹೆರಿಡಿಟರಿ ರೋಗ. ಮನುಷ್ಯನೊಳಗ XX ಕ್ರೊಮೊಝೋಮ್ ಇದ್ದರ ಹೆಣ್ಣು, XY ಕ್ರೊಮೊಝೋಮ್ ಇದ್ದರ ಗಂಡು ಅಂತ ಹೇಳ್ತೇವಿ. ಆದರ ಸುಧೀರ್‌ಗ ಇರೋದು XXY, ಅಂದ್ರ ಒಂದು X ಕ್ರೊಮೊಝೋಮ್ ಹೆಚ್ಚಿಗೆ ಐತಿ".

"ಮತ್ತ ಅವ್ನಿಗೆ ಮಕ್ಕಳಾಗೋದು ?" ಕಣ್ಣುಗುಡ್ಡೆ ಮಧ್ಯಕ್ಕೆ ತಂದು ತಗ್ಗಿದ ದನಿಯಲ್ಲಿ ಕೇಳಿದ.

"ಸಾರಿ ರೆಡ್ಡೀಜಿ, ಇಂಥವರು ನೋಡಾಕಷ್ಟ ಗಂಡಸ್ರು ತರ ಕಾಣ್ತಾರು."

ಮರಾಠಿಯ ಗಂಧ ಗಾಳಿಯಿಲ್ಲದ ಸುಧೀರ – ಸರಿತಾ ಗೋಡೆಯ ಮೇಲಿನ ಮುದ್ದುಮಕ್ಕಳನ್ನು ನೋಡುತ್ತ ಕಣ್ಣಣ್ಣು ಬಿಡುತ್ತಿದ್ದರು. ವಂಶವೃಕ್ಷದ ರೆಂಬೆ ಕೊಂಬೆಗಳನ್ನೆಲ್ಲ ಲಟಲಟ ಮುರಿದಂತಾಯಿತು. ಬೊಡ್ಡೆಗೆ ಬಿದ್ದ ಕೊಡಲಿ ಕಚ್ಚಿನಿಂದ ರಸವಾಳ ತೊಟ್ಟಿಕ್ಕಿದಂತೆ ರೆಡ್ಡಿಯ ಮುಖದಿಂದ ಬೆವರ ಹನಿಗಳು ಉದುರಿದವು. ವ್ಯಾಪಾರ ವಹಿವಾಟಿನಲ್ಲಿ ಚೊಗಚಿ ಬೀಜದಂತೆ ಸಿಡಿಯುತ್ತಿದ್ದವನು, ಮೂಗು ಮುರಿದುಕೊಂಡು ಮೊಳೆಯಲಾಗದ ಗೊಡ್ಡು ಬೀಜದಂತಾದನು.

ಮನೆಯವರ ಜೀವನೋತ್ಸಾಹ ನೆಲಕಚ್ಚಿತು. ಸುಧೀರನಂತೂ ಸರಿತಾಳ ದೃಷ್ಟಿಯನ್ನೆದುರಿಸಲಾರದೆ ತಲೆ ಕೆಳಗೆ ಹಾಕಿಬಿಟ್ಟ. ವೆಂಕಟೇಶರೆಡ್ಡಿ ಕಣ್ಮುಚ್ಚಿದರೆ ಸಾಕು, ಸುಧೀರನನ್ನು ನಾಲ್ಕಾರು ಜನ ಬಟ್ಟ ಬಯಲಿನಲ್ಲಿ ಅಟ್ಟಾಡಿಸಿಕೊಂಡು ಕೆಡವಿದಂತೆ, ಕೈಕಾಲಿಗೆ ಹಗ್ಗ ಬಿಗಿದು ಜಗ್ಗಿ ಹಿಡಿದಂತೆ, ಗರಡಿಮನಿ ಚೌಡಪ್ಪ ಗುದ್ದಿನಿಂದೆದ್ದು ಬಂದು ಮಗನ ಆಯಕಟ್ಟಿಗೆ ಜಜ್ಜಿದಂತೆ, ಪುರುಷತ್ವವನ್ನು ಪಚಕ್ ಎನಿಸಿ ಗಹಗಹಿಸಿದಂತೆ, ಗೂಳಿಯ ಆರ್ತನಾದ, ಮಗನ ಬೊಬ್ಬಿಡುವಿಕೆ, ನೆಲದಿಂದೆದ್ದ ವಂಶವೃಕ್ಷದ ಬೇರುಗಳು, ನಿಂತಲ್ಲಿ ಕುಂತಲ್ಲಿ ಬೆಚ್ಚಿಬೀಳಿಸಿದವು.

ಪ್ರತಿದಿನವೂ ಭಾನುವಾರವಲ್ಲ. ಬಾಲಾಜಿ ಕೇಂದ್ರದಿಂದ ವಿತರಿಸುವ ಬೀಜಗಳು ಕಳಪೆಯಾಗಿರುತ್ತವೆಂದು ರೈತರು ಗದ್ದಲ ಎಬ್ಬಿಸಿದರು. ಸಾಲಶೂಲ ಮಾಡಿ ಹಾಕಿದ ಬೀಜ ಭೂಮಿಯಲ್ಲಿ ಮುರುಟಿಹೋಗುವುದನ್ನು ಕಂಡು ಕಂಗಾಲಾದರು. ಆತ್ಮಹತ್ಯೆ ಪ್ರಕರಣಗಳು ಹೆಚ್ಚಾದವು. ಸರಕಾರ ಕೂಡ ಮೈ ಕೊಡವಿಕೊಂಡು ಎದ್ದಿತು. ವಿನ್ಸೆಂಟೊನ ಕಂಪನಿಗೆ ದೂರು ಹೋಗಿ ಕಾರ್ಯನಿಮಿತ್ತ ಅಮೇರಿಕೆಯಿಂದ ಬಂದಿದ್ದ ಸಿಇಓ ರಾಡ್ರಿಗ್ಸ್ ಹೊಲಗಳಿಗೆ ಭೇಟಿ ನೀಡಿದ. ಸ್ಥಳೀಯ ಅಧಿಕಾರಿಗಳು, ತಜ್ಞರೊಂದಿಗೆ ದೊಡ್ಡ ದಂಡಿನಲ್ಲಿ ಬಂದವರು ಹೊಲ ಹೊಲ ಸುತ್ತಿ ತಮ್ಮಲ್ಲಿ ಏನೇನೋ ಚರ್ಚಿಸಿಕೊಂಡರು. ಪರಿಸ್ಥಿತಿಯನ್ನು ಪರಿಶೀಲಿಸಿ ಸರಕಾರಕ್ಕೆ ವರದಿ ನೀಡುತ್ತೇವೆಂದು ಅಲ್ಲಿಂದ ನಿರ್ಗಮಿಸಿದರು. ಮರುದಿನ ಪತ್ರಿಕೆಯಲ್ಲಿ ಹೇಳಿಕೆ ಪ್ರಕಟವಾಯಿತು. ಶಿಫಾರಸಿನಂತೆ ಸಮಯಕ್ಕೆ ಸರಿಯಾಗಿ ಬಿತ್ತದಿರುವದು, ಬೀಜಗಳನ್ನು ಹೆಚ್ಚು ಆಳಕ್ಕೆ ಹಾಕಿರುವುದು ಬೆಳೆಯ ನಷ್ಟಕ್ಕೆ ಕಾರಣವೆಂದು ಅಧಿಕಾರಿಯೊಬ್ಬರು ಹೇಳಿದರು.

"ಅಲ್ಲಲ್ಲಿ ಹಾಕಿದ ಜವಾರಿ ಬೀಜಗಳು ಸರಿಯಾಗಿಯೇ ಹುಟ್ಟಿದ್ದಾವಲ್ಲ" ಎಂದು ರೈತರು ವಾದಿಸಹತ್ತಿದರು. ಅಷ್ಟರಲ್ಲಿ ರಾಡ್ರಿಗ್ಸ್‌ನ ವಿಮಾನ ಉತ್ತರ ಅಟ್ಲಾಂಟಿಕ್ ಮಹಾಸಾಗರದ ಮೇಲೆ ಹಾಯಾಗಿ ಹಾರುತ್ತಿತ್ತು. ಅವನ ಅಣತಿಯಂತೆ ವಿನ್ಸೆಂಟೊ ಕಂಪನಿಯ ನೌಕರರು ಹಿಂಗಾರು ಬೀಜ ಒದಗಿಸುವ ವ್ಯವಸ್ಥೆಗಾಗಿ ರಾಜ್ಯಾದ್ಯಂತ ಚದುರಿಹೋಗಿದ್ದರು. ಮತ್ತೆ ಐದು ಸಾವಿರ ಕ್ವಿಂಟಲ್ ಬೀಜ ಬಿಕರಿ ಮಾಡುವ ಗುರಿಯ ಬೆನ್ನು ಹತ್ತಿ ಅವರಿಗೆ ತುರಿಸಿಕೊಳ್ಳಲೂ ಪುರುಸೊತ್ತಿರಲಿಲ್ಲ.

ಅಂಗೈ ತುರಿಸಿದಾಗಲೆಲ್ಲ ಬಿ. ಟಿ. ಬೀಜದ ವಿರುದ್ಧ ಬೀದಿಗಿಳಿಯುತ್ತಿದ್ದ ರಾಜ್ಯ ರೈತ ಹೋರಾಟ ಸಮಿತಿ ಅಧ್ಯಕ್ಷ ಕೃಷ್ಣೇಗೌಡ ಬೆಂಗಳೂರಿನ ಡಾಲರ್ಸ್ ಕಾಲನಿಯಿಂದಲೇ ಗುಡುಗಿದ. ನಕಲಿ ಬೀಜ ಮಾರಾಟ ಮಾಡಿ ರೈತರ ಅನ್ನ ಕಸಿದವರ ಮೇಲೆ ಉಗ್ರ ಕ್ರಮ ಜರುಗಿಸಬೇಕೆಂದು ಗಂಟಲು ಹರಿದುಕೊಂಡ. ತಪ್ಪಿದಲ್ಲಿ ತಮ್ಮ ಸಂಘಟನೆ ವತಿಯಿಂದ ವಿಧಾನಸೌಧದ ಎದುರು ಹರತಾಳ ನಡೆಸುವದಾಗಿ ಎಚ್ಚರಿಸಿದ.

"ವಾತಾವರಣ ಅಷ್ಟು ಬರೋಬರಿಯಿಲ್ಲ, ಎರಡು ದಿವ್ಸ ಅಂಗಡಿ ಕಡೆ ಹೋಗೋದು ಬ್ಯಾಡಾ" ಅಂತ ಬಾಲಾಜಿ ಕೇಂದ್ರದ ಶಟರ್ ಎತ್ತಲಿಲ್ಲ. ಮನೆಯಲ್ಲಿ ಕೂತು ಗೋಡೆ ನೋಡಿ ನೋಡಿ ತಲೆ ಚಿಟ್ಟುಹಿಡಿಯಿತು.

ಬೀಜದ ಅವ್ಯವಹಾರದ ವಿರುದ್ಧ ಪ್ರತಿಭಟನೆ ನಡೆಸಲು ರೈತ ಹೋರಾಟ ಸಮಿತಿ ತಯಾರಿ ನಡೆಸಿತ್ತು. ಆರೋಪ, ಪ್ರತ್ಯಾರೋಪ, ಹೇಳಿಕೆ, ಪ್ರತಿಹೇಳಿಕೆ, ಬಾಣ ಬಿರುಸುಗಳಂತೆ ರಂಜನೆ ನೀಡಿದವು.

ಜಿಲ್ಲಾ ಉಸ್ತುವಾರಿ ಮಂತ್ರಿಗಳು ರೈತ ನಾಯಕ ಕೃಷ್ಣೇಗೌಡನಿಗೆ ಬಂದು ಕಾಣಲು ಸೂಚಿಸಿದರು. ಬೆಂಗಳೂರಿನಲ್ಲಿನ ತನ್ನ ಮನೆಯ ಹತ್ತಿರವೇ ಇರುವ ಸಚಿವರ ನಿವಾಸಕ್ಕೆ ಫೈಲು ಹಿಡಿದು ಹೋದ. ವಿನ್ಸೆಂಟೊ ಕಂಪನಿಯ ದೊಡ್ಡ ಅಧಿಕಾರಿ ಅದಾಗಲೇ ಬಂದು ಸಚಿವರ ಮುಂದೆ ಕುಳಿತಿದ್ದ. ಐದಾರು ನಿಮಿಷ ಚರ್ಚೆಯಾಯಿತು. ವೆಂಕಟೇಶರೆಡ್ಡಿ ತಮ್ಮ ದೂರದ ಸಂಬಂಧಿಯಾಗಿದ್ದು, ಪ್ರತಿಭಟನೆ ಹಿಂತೆಗೆದುಕೊಳ್ಳಲು ಮಂತ್ರಿಗಳು ಹೇಳಿದರು. ಬೆಳೆ ನಷ್ಟವಾದ ರೈತರಿಗೆ ಎಕರೆಗೆ ಐನೂರು ರೂಪಾಯಿಯಂತೆ ಪರಿಹಾರ ಕೊಡಿಸುವ ಆಶ್ವಾಸನೆ ಕೊಟ್ಟರು. ಕೃಷ್ಣೇಗೌಡ ಕೈಯೊಳಗಿನ ಫೈಲನ್ನು ಮೇಜಿನ ಮೇಲಿಟ್ಟು, "ಐದಾರು ಟ್ರಾನ್ಸಫರ್ ಕೇಸು ಇದ್ವು ಸರ್, ತಾವು ಮನಸ್ಸು ಮಾಡ್ಬೇಕು" ಎಂದು ಹಲ್ಲು ಗಿಂಜಿದ.

"ಮಾಡ್ಕೊಡೋಣ ಬಿಡ್ರೀ, ನಿಮಗೆ ಇಲ್ಲಾ ಅನ್ನಿಕ್ಕಾಗುತ್ತಾ ?" ಎನ್ನುತ್ತ ಬಾಯಿಗೆ ಕೈ ಅಡ್ಡ ತಂದು ಆಕಳಿಸಿದರು. ಮಂತ್ರಿಗಳು ಬಹಳಷ್ಟು ದಣಿದಿದ್ದು ಅವರಿಗೆ ವಿಶ್ರಾಂತಿಯ ಅವಶ್ಯಕತೆಯಿದೆ ಎಂದು ಕೃಷ್ಣೇಗೌಡ ಅಲ್ಲಿಂದ ಎದ್ದ. ಪಕ್ಕದ ಕೋಣೆಯಲ್ಲಿ ಕಂಪನಿ ಅಧಿಕಾರಿ ಮತ್ತು ಕೃಷ್ಣೇಗೌಡರ ಮಧ್ಯೆ ಪ್ರತ್ಯೇಕ ಮಾತುಕತೆಯಾಯಿತು. ಅರಳಿದ ಮುಖಗಳು ಹೊರಬಂದು ಬೇರೆ ಬೇರೆ ದಾರಿ ಹಿಡಿದವು.

ದುಡ್ಡು, ಶ್ರಮ ಹಾಕಿ ಒಂದು ಸೀಜ಼ನ್ನನ್ನೇ ಕಳೆದುಕೊಂಡು ಕಂಗಾಲಾಗಿದ್ದ ರೈತರು ಎಕರೆಗೆ ಐನೂರು ಪರಿಹಾರ ಕೊಡುವ ಸುದ್ದಿ ಕೇಳಿ, ಹೆಡೆ ತೆಗೆದು ಎದ್ದು ನಿಂತರು. ನೂರಾರು ಜನರು ಬಾಲಾಜಿ ಕೇಂದ್ರಕ್ಕೆ ದೌಡಾಯಿಸಿ ತಮಗೆ ತಿಳಿದ ಎಲ್ಲ ಬೈಗುಳಗಳನ್ನು ಕಾರಿಕೊಂಡರು. ಕೃಷ್ಣೇಗೌಡ ಕೈಗೆ ಸಿಕ್ಕರೆ ಸಿಗಿದು ತೋರಣ ಕಟ್ಟುವುದಾಗಿ ಪ್ರತಿಜ್ಞೆಗೈದರು. ಗುಂಪಿನೊಳಗಿಂದ ಒಂದೆರಡು ಕಲ್ಲುಗಳು ರೊಂಯ್ ಎಂದು ತೂರಿಬಂದಾಗ ಆಳುಕಾಳು ಚೆಲ್ಲಾಪಿಲ್ಲಿಯಾದರು. ಮಾಲೀಕರನ್ನು ಹೊರಗೆಳೆದು ಒಗೆದು ಬೀಜದ ಪಾಕೀಟುಗಳನ್ನು ಹರಿದು ರಸ್ತೆಗೆ ತೂರಿದರು. ಸಿಕ್ಕಸಿಕ್ಕ ಸಾಮಾನುಗಳನ್ನು ಅವರವರ ಶಕ್ತ್ಯಾನುಸಾರ ಛಿದ್ರಗೊಳಿಸಿದರು. ಒಂದಿಬ್ಬರು ಉದ್ರಿಲೆಕ್ಕ ಬರೆಯುವ ಖಾತೆಕಿರ್ದಿ ಪುಸ್ತಕಗಳನ್ನು ಗುಡ್ಡೆ ಹಾಕಿ ಕೊಳ್ಳಿಯಿಟ್ಟರು. ಬೆಂಕಿಯ ಸುತ್ತ ತಿರುಗುತ್ತ ಲಬಲಬ ಹೊಯ್ಕೊಂಡು ಹೋಳಿ ಹುಣ್ಣಿಮೆ ಮಾಡಿದರು.

ಮಾರುತಿ ಗಲ್ಲಿಯಲ್ಲಿನ ರೆಡ್ಡಿಯವರ ಭವ್ಯ ಬಂಗಲೆ ಭಣಗುಡುತ್ತಿತ್ತು. ತಮ್ಮ ಅಗತ್ಯಕ್ಕನುಗುಣವಾಗಿ ನಿರ್ಬೀಜೀಕರಣಗೊಳಿಸುವ ಸಂಪ್ರದಾಯದ ಸಂಸ್ಥಾನಿಕರು ಅಮಾಯಕ ರೈತರಿಗೆ ಮೊಳಕೆ ಹಾಯದ ಬೀಜ ನೀಡಿ ಅವರನ್ನೂ ನಿರ್ಬೀಜೀಕರಣ ಗೊಳಿಸಿದ್ದರು. ಈಗ ತಮ್ಮಲ್ಲಿಯೇ ಫಲವತ್ತಾದ ನೆಲವಿದೆ. ಆದರೆ ವಂಶಾವಳಿಯನ್ನು ಬಿತ್ತಿ ಬೆಳೆಯುವ ಫಲವಂತ ಬೀಜವಿಲ್ಲ. ಅದೇ ಐಬು ಸೊಸೆಯಲ್ಲಿದ್ದರೆ ಇಷ್ಟೊತ್ತಿಗೆ ಮತ್ತೊಂದು ಶುಭಕಾರ್ಯ ಹಮ್ಮಿಕೊಳ್ಳುತ್ತಿದ್ದರೊ ಏನೊ ?

ಅದುವರೆಗೂ ಬಾಯ್ಬಿಡದಿದ್ದ ಸರಿತಾ ಎಂಬ ಸೊಸೆ ಒಂದು ದಿನ ಸೂಟ್‌ಕೇಸಿನೊಂದಿಗೆ ತಯಾರಾಗಿ ನಿಂತಳು. ಎತ್ತ ಕಡೆ ಹೊರಟಿರಬಹುದು ಎಂಬ ಮಾವನ ಪ್ರಶ್ನಾರ್ಥಕ ದೃಷ್ಟಿಯನ್ನು ನೇರವಾಗಿ ಎದುರಿಸಿದಳು.

"ಬೆಂಗ್ಳೂರಿನಾಗ ನನ್ನ ಗೆಳತಿ ಅನಾಥಾಶ್ರಮ ನಡಸ್ತಾಳು. ನನ್ನ ಕತೀಯಲ್ಲಾ ಹೇಳ್ಕೊಂಡೀನಿ. ಅಲ್ಲಿ ಬಂದು ನಿಂಗ ಬೇಕಾದ್ದ ಮಗೂನ ಆರಿಸಿಕೊಂಡು ಹೋಗು ಅಂದಾಳು" ಎನ್ನುತ್ತ ಸೂಟ್‌ಕೇಸನ್ನು ಎತ್ತಿದಳು.

"ಹಂಗಂದ್ರ ನಂದೊಂದು ಮಾತು ಕೇಳು, ತರೋದಿದ್ರ ಒಂದು ಒಳ್ಳೆ ಗಂಡು ಕೂಸನ್ನು ತೊಗೊಂಡು ಬಾ."

"ಇಲ್ಲಾ ನಾನು ಹೆಣ್ಣು ಮಗೂನ್ನ ತೊಗೊಂಡು ಬರ್ತೇನಿ."

ನಂತರ ವೆಂಕಟೇಶರೆಡ್ಡಿ ಚಪ್ಪಲಿಯನ್ನು ಮೆಟ್ಟದೆ ಅವಳಿಗಿಂತ ಮೊದಲು ಹೊರಬಿದ್ದ. ಸುಧೀರ ಹೆಂಡತಿಯನ್ನು ಹಿಂಬಾಲಿಸಿದ.

**ಚನ್ನಪ್ಪ ಅಂಗಡಿ ಬಮ್ಮನಹಳ್ಳಿ**
ಕೃಷಿ ಅಧಿಕಾರಿ, 'ಕಾಯಕ', ೧೪ಎ/೮೫, ಕುಮಾರೇಶ್ವರನಗರ
ಬೆಳಗಾವಿ ರಸ್ತೆ, ಧಾರವಾಡ – ೫೮೦ ೦೦೮




## ಎಂದಿಗೂ ಸಲ್ಲುವ ಮಾರ್ಕ್ಸ್

ಡಾ॥ ಜಿ. ರಾಮಕೃಷ್ಣ

**ಪುಟ : ೧೩೬** **ಬೆಲೆ : ರೂ. ೬೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಜಗತ್ತಿನ ಶ್ರಮಜೀವಿಗಳೆಲ್ಲರ ಬದುಕು ಬಂಡವಾಳಶಾಹಿಗಳ ಕೈಯಲ್ಲಿ ನಲುಗಿ ಹೋಗಿದ್ದಂತಹ ಕಾಲಘಟ್ಟದಲ್ಲಿ ಕಾರ್ಲ್‌ಮಾರ್ಕ್ಸ್ ಕಾರ್ಮಿಕರಿಗಾಗಿ ಚಿಂತಿಸಿ ಹೋರಾಟಕ್ಕೆ ಕರೆ ನೀಡಿದ್ದರಿಂದ ವ್ಯವಸ್ಥೆಯಲ್ಲಿ ಭಾರಿ ಪಲ್ಲಟವಾಗಿದ್ದಂತೂ ನಿಜ. ಇಂದಿಗೂ ಬಂಡವಾಳಶಾಹಿ – ಸಾಮ್ರಾಜ್ಯವಾದಿಗಳು ಮಾರ್ಕ್ಸ್‌ವಾದವೆಂದರೆ ಬೆದರುಕಣ್ಣುಗಳಿಂದಲೇ ನೋಡುತ್ತಿದ್ದಾರೆ. ಲೋಕದ ಕಾರ್ಮಿಕರೆಲ್ಲ ಒಂದಾಗಿ ಹೋರಾಡಿದರೆ ಮಾತ್ರ ಶೋಷಕರ ದಬ್ಬಾಳಿಕೆ ನಿಂತೀತು. ಇಂದು ಬಂಡವಾಳಶಾಹಿ ಸರ್ವಾಧಿಕಾರಿ ಧೋರಣೆಯ ಸರಕಾರಗಳು ಪ್ರಜಾಪ್ರಭುತ್ವದ ದಾರಿಯಾಗಿಯೇ ಆರಿಸಿ ಬಂದು ಕಾರ್ಮಿಕ ವಿರೋಧಿ ನೀತಿ ಅನುಸರಿಸಿ, ಹೋರಾಟಗಳಿಗೇ ಕಡಿವಾಣ ಹಾಕುತ್ತಿದ್ದಾರೆ. ದೇಶದ ಬಂಡವಾಳವಾದಿಗಳು ಸಾಕಾಗದೆ ಜಾಗತಿಕ ಬಂಡವಳಿಗರನ್ನು ವ್ಯಾಪಾರಕ್ಕಾಗಿ ದೇಶಕ್ಕೆ ಆಹ್ವಾನಿಸುವ ಈ ದಿನಗಳಲ್ಲೂ ನಮಗೆ ಮಾರ್ಕ್ಸ್ – ಮಾರ್ಕ್ಸ್‌ವಾದ ನೆನಪಾಗುತ್ತದೆ. ಕಾರ್ಮಿಕರಷ್ಟೇ ಅಲ್ಲ. ಇಂದು ಶ್ರೀಸಾಮಾನ್ಯನೂ ಕಂಗಾಲಾಗಿದ್ದಾನೆ. ಇಂದು ಹಲವು ಆರ್ಥಿಕ ತಜ್ಞರು, ಬುದ್ಧಿಜೀವಿಗಳು ಮಾರ್ಕ್ಸ್‌ವಾದದ ಕಡೆಗೆ ವಿಶ್ಲೇಷಣಾತ್ಮಕ ನೋಟ ಬೀರಿ ಅಲ್ಲಿನ ಸಾರ್ವಕಾಲಿಕ ಸತ್ಯಗಳನ್ನು ಅರ್ಥೈಸತೊಡಗಿದ್ದಾರೆ. ಎಲ್ಲಿ ಸಾಮ್ರಾಜ್ಯವಾದ ವಿಜೃಂಭಿಸತೊಡಗಿತೋ ಅಲ್ಲಿ ಮಾರ್ಕ್ಸ್‌ನ ವಿಚಾರಗಳು ಪ್ರಸ್ತುತವೆನಿಸುತ್ತವೆ. ಸಮಾಜವಾದದ ಅಗತ್ಯ, ಶೋಷಣೆಗೆ ಇದಿರಾಗಿ ಹೋರಾಟ – ಚಳವಳಿ ಇವೆಲ್ಲ ಸವೆದುಹೋಗುವ ಮೌಲ್ಯಗಳಲ್ಲವೆಂದೂ ಎಂದಿಗೂ ಸಲ್ಲುವ ಸತ್ಯಗಳೆಂದೂ ಪ್ರತಿಪಾದಿಸಿದವರು ಡಾ॥ ಜಿ. ರಾಮಕೃಷ್ಣ. ಕಮ್ಯುನಿಸಂ – ಮಾರ್ಕ್ಸ್‌ವಾದ ರಷ್ಯದಲ್ಲೇ ಪತನವಾಯ್ತೆಂದು ಹುಯಿಲಿಡುವವರಿಗೆ ಒಂದು ಸೂಕ್ತ ಪುಸ್ತಕ.*

## ಅಭಿವ್ಯಕ್ತಿ ಸ್ವಾತಂತ್ರ್ಯ ವಿವಿಧ ಆಯಾಮಗಳು




*ಸಂ. : ಡಾ॥ ಎಚ್. ಎಸ್. ಅನುಪಮಾ, ಬಸೂ*

**ಪುಟ : ೧೫೨**

**ಬೆಲೆ : ರೂ. ೧೨೦**

**ಲಡಾಯಿ ಪ್ರಕಾಶನ**

# ೨೧, ಪ್ರಸಾದ್ ಹಾಸ್ಟೆಲ್
ಗದಗ – ೫೮೨ ೧೦೧

*ಸ್ಪಷ್ಟ ಮಾತುಗಳಲ್ಲಿ ತನಗನಿಸಿದ್ದನ್ನು ಹೇಳುವ ಸ್ವಾತಂತ್ರ್ಯವೇ ಅಭಿವ್ಯಕ್ತಿ ಸ್ವಾತಂತ್ರ್ಯ. ಹಲವು ಸಂದರ್ಭಗಳಲ್ಲಿ ಇದನ್ನು ನಿರಂತರವಾಗಿ ಹತ್ತಿಕ್ಕಲಾಗಿದ್ದರೆ ಮತ್ತೊಂದು ಕಡೆ ಇದು ಬೇಕಾಬಿಟ್ಟಿಯಾಗಿ ಎಲ್ಲೆ ಮೀರಿ ಬಳಕೆಯಾಗುತ್ತಿದೆ. ಹೆಚ್ಚಾಗಿ ಸಾಹಿತ್ಯ, ಭಾಷಣಗಳಿಗೆ ಅನ್ವಯ. ಇಂಥ ಮಾಧ್ಯಮಗಳಲ್ಲಿ ಬಹು ಜಾಗ್ರತೆಯಾಗಿ ಇದನ್ನು ವ್ಯಕ್ತಪಡಿಸಬೇಕಲ್ಲದೆ ಹೇಳುವ ಹಕ್ಕಿದೆ ಎಂದ ಮಾತ್ರಕ್ಕೆ ಏನು ಬೇಕಾದರೂ ಹೇಳಿದಾಗ ಅದು ಸ್ವೇಚ್ಛೆಯ ಮಟ್ಟಕ್ಕೆ ಹೋಗುತ್ತದೆ. ನಾವು ಹೇಳಿದ್ದನ್ನು ಒಪ್ಪುವ–ಬಿಡುವ ಹಕ್ಕು ಎಲ್ಲರಿಗೂ ಇದ್ದೇ ಇರುತ್ತದೆ. ಇಂದು ತನಗನಿಸಿದ್ದು ಸರಿಯೇ ತಪ್ಪೇ ಎಂಬ ವಿವೇಚನೆ ಇಲ್ಲದೆ ತಾನುಂಟೋ ಮೂರು ಲೋಕವುಂಟೋ ಎಂಬಂತೆ ಅಭಿಪ್ರಾಯ ಮಂಡನೆ ಸಾಮಾನ್ಯ. ಇದು ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಗೌರವ ತರುವ ನಡವಳಿಕೆ ಅಲ್ಲ. ಅನಿಸಿಕೆ ಯಾವತ್ತೂ ಸರ್ವಮಾನ್ಯವಾಗಬೇಕೆಂದೇನೂ ಇಲ್ಲ! ವಿಧವಿಧವಾದ ಚಿಂತನೆಗಳಿರುವಲ್ಲಿ ಅಭಿಪ್ರಾಯಭೇದ ಸಹಜ. ಬರಹಗಾರನಿಗೆ ಇರುವ ಸ್ವಾತಂತ್ರ್ಯದ ಬಗ್ಗೆ ವಿಶೇಷವಾಗಿ ಇಲ್ಲಿನ ಲೇಖನಗಳು ದನಿ ಎತ್ತಿವೆ. ಇವು ಅಭಿವ್ಯಕ್ತಿ ಸ್ವಾತಂತ್ರ್ಯದ ಬಗೆಗಿರುವ ಅಭಿಪ್ರಾಯಗಳಷ್ಟೇ ಆಗಿದ್ದು ಸಂದರ್ಭೋಚಿತವಾಗಿ ಬರೆಯಲ್ಪಟ್ಟಿವೆ. ಹೆಚ್ಚಿನ ಬರಹಗಳು ಇಂದು ಸಾಹಿತ್ಯ ಕೃತಿಗಳ ಬಗ್ಗೆ ಎದ್ದಿರುವ ಗೊಂದಲಗಳ ಕಡೆಗೆ ಬೊಟ್ಟು ಮಾಡಿವೆ. ತಮ್ಮ ಅನಿಸಿಕೆಗಳನ್ನು ಹಂಚಿಕೊಂಡ ಇಲ್ಲಿನ ಲೇಖಕರು ಪ್ರಜ್ಞಾವಂತ ಬರಹಗಾರರೆಂಬುದು ಸ್ಪಷ್ಟ. ಅಭಿಪ್ರಾಯ ವ್ಯಕ್ತಪಡಿಸ ಬಹುದೇ ಹೊರತು ಹೇರುವ ಸ್ವಾತಂತ್ರ್ಯವಿರುವುದಿಲ್ಲ.*

## ಮಹಿಳಾ ಚಿಂತನೆಯ ವಿಭಿನ್ನ ನೆಲೆಗಳು




ಪಾರ್ವತಿ ಜಿ. ಐತಾಳ್

**ಪುಟ : ೧೭೪ + iv** **ಬೆಲೆ : ರೂ. ೧೧೦**

**ಶ್ರೀನಿವಾಸ ಪುಸ್ತಕ ಪ್ರಕಾಶನ,** ನಂ. ೧೬೪/ಎ, ಮೊದಲನೇ ಮಹಡಿ, ಎಂ.ಆರ್.ಎನ್. ಬಿಲ್ಡಿಂಗ್, ಕನಕಪುರ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು – ೫೬೦ ೦೦೪

*ಇದುವರೆಗೂ ಮನೆಯ ನಾಲ್ಕು ಗೋಡೆಗಳೊಳಗೆ ಬಂಧಿಯಾಗಿದ್ದ ಸ್ತ್ರೀ ಎಚ್ಚೆತ್ತು ಶೋಷಣೆಯ ವಿರುದ್ಧ ಪ್ರತಿಭಟಿಸಿ ನಿಂತಾಗಿನ ಕಾಲದಲ್ಲಿ ಅದಕ್ಕೆ ಸಂಬಂಧಿಸಿದ ಸಾಹಿತ್ಯ ಸೃಷ್ಟಿಯಾಗತೊಡಗಿತು. ಮೊದಮೊದಲು ಅಂಬೆಗಾಲಿಕ್ಕುವಂತೆ ಪ್ರಾರಂಭವಾದ ಇದು ದಿನಗಳೆದಂತೆ ಪ್ರೌಢತೆಯತ್ತ ಸಾಗತೊಡಗಿ ಇಂದು ಸಮಾನತೆಯತ್ತ ದಾಪುಗಾಲಿಟ್ಟು ಮುನ್ನಡೆಯುತ್ತಿದೆ. ಮಹಿಳಾ ಚಿಂತನೆಗೆ ತಾತ್ವಿಕ ನೆಲೆಗಟ್ಟು ದೊರೆತು ಸಹೃದಯ ಪುರುಷರ ಬೆಂಬಲವೂ ಸಿಗತೊಡಗಿ ಆಕೆ ನಿರ್ಭೀತ ವಾತಾವರಣದಲ್ಲಿ ಉಸಿರಾಡುವಂತಾಯಿತು. ಇಂದು ಆಕೆ ಎಲ್ಲ ಕ್ಷೇತ್ರಗಳಲ್ಲಿ ತನ್ನನ್ನು ಗುರುತಿಸಿಕೊಂಡಿದ್ದಾಳೆ. ಈ ಸಂಬಂಧ ಒಂದು ಪಕ್ಷಿನೋಟದಂತಿರುವ ಈ ಬರಹಗಳು ಖ್ಯಾತ ಲೇಖಕಿ ಎಂದು ಗುರುತಿಸಲ್ಪಟ್ಟ ಡಾ॥ ಪಾರ್ವತಿ ಜಿ. ಐತಾಳ್ ಅವರಿಂದ ಇಲ್ಲಿ ಮೂಡಿ ಬಂದಿವೆ. ಇತ್ತೀಚಿನ ಎರಡು ನೂರು ವರ್ಷಗಳಿಂದೀಚೆಗೆ ಕನ್ನಡದಲ್ಲಿ ಮಹಿಳೆಯರಿಂದ ರಚಿಸಲ್ಪಟ್ಟ ಸಾಹಿತ್ಯವನ್ನು ಓದಿದಾಗ ನಮಗೆ ಸಿಗುವ ಚಿತ್ರಣದ ಆಧಾರದಿಂದ ಈ ಬರಹಗಳು ವಿಶ್ಲೇಷಣೆ ನಡೆಸಿವೆ. ಇಂದಿನ ಮಹಿಳೆಗೆ ನಿಜವಾದ ಸ್ವಾತಂತ್ರ್ಯ ಸಿಕ್ಕಿ ಆಕೆ ಸಮಸ್ಯೆಗಳಿಂದ ಪಾರಾಗಿದ್ದಾಳೆಯೇ ಎಂಬ ಅಂಶವನ್ನೂ ಸಹ ಚರ್ಚಿಸಿವೆ. ಹೀಗೆ ಮಹಿಳಾ ಚಿಂತನೆ ಪ್ರಾರಂಭವಾಗಿ ಯಾವ ಯಾವ ಘಟ್ಟಗಳಲ್ಲಿ ಎಲ್ಲೆಲ್ಲಿ ತಿರುವು ಪಡೆದು ಮುಂದೆ ಸಾಗಿ ಇದೀಗ ಯಾವ ಘಟ್ಟ ತಲುಪಿದೆ? ಓದಿ ನೋಡಿ!*

## ಮಕ್ಕಳ ಪ್ರತಿಭೆಯನ್ನು ಗುರುತಿಸಿ, ಬೆಳೆಸಿ

ಗಿರಿಮನೆ ಶ್ಯಾಮರಾವ್

**ಪುಟ : ೧೦೦** **ಬೆಲೆ : ರೂ. ೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧




*ಮಕ್ಕಳಲ್ಲಿನ ಪ್ರತಿಭೆಯನ್ನು ಗುರುತಿಸಿ ಯೋಗ್ಯಶಿಕ್ಷಣ ನೀಡಿ ಅರಳಿಸಬೇಕಾದ್ದು ಪಾಲಕರ ಮತ್ತು ಶಿಕ್ಷಕರ ಜವಾಬ್ದಾರಿಯೆಂದು ಈ ಕೃತಿಯಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಎಷ್ಟೋ ಕಡೆ ಪ್ರತಿಭೆ ಇರುತ್ತದೆ; ಅವಕಾಶಗಳು ಸಿಗದೆ ಹೋದಾಗ, ಯಾರ ಗಮನಕ್ಕೂ ಬಾರದೆ ಇದ್ದಾಗ ಅಂಥ ಮಕ್ಕಳು ಬೆಳಗಬೇಕಾದಷ್ಟು ಬೆಳಕನ್ನು ನೀಡಲಾರವು. ಆತನ ಪ್ರತಿಭೆ ಸ್ವಂತಕ್ಕಷ್ಟೇ ಅಲ್ಲದೆ ಸಮಾಜದಲ್ಲಿನ ಇತರರಿಗೂ ಪ್ರಯೋಜನ ಸಿಗುವಷ್ಟಿರಬಹುದು. ಮಕ್ಕಳು ಪ್ರಶ್ನೆಗಳನ್ನು ಕೇಳಿದಾಗಲೆಲ್ಲ "ಸುಮ್ಮನಿರು, ಜಾಸ್ತಿ ಮಾತಾಡ್ಬೇಡ" ಎಂದು ಗದರುವುದನ್ನು ನಾವು ತುಂಬ ಕಡೆ ಕೇಳಿದ್ದೇವೆ. ಇದರಿಂದ ವಿಕಾಸವಾಗುತ್ತಿರುವ ಮಗುವಿನ ಪ್ರತಿಭೆ ಅಲ್ಲಿಯೇ ಮುರುಟಿಹೋಗಬಹುದೆಂಬುದನ್ನು ಅರ್ಥೈಸಿಕೊಳ್ಳಬೇಕಲ್ಲವೇ? ತಮ್ಮ ಮಕ್ಕಳನ್ನು ಜೋಪಾನ ಮಾಡುವ ನೆಪದಲ್ಲಿ ಇತರರೊಂದಿಗೆ ಬೆರೆಯಲು ಬಿಡದಿರುವುದೂ ಕೂಡ ಅಕ್ಷಮ್ಯವೇ. ಬೆಳೆಯ ಸಿರಿ ಮೊಳಕೆಯಲ್ಲೆಂಬಂತೆ ಮಕ್ಕಳು ತಮ್ಮ ಆಸಕ್ತಿಯ ಕ್ಷೇತ್ರ ಯಾವುದೆಂದು ಎಳವೆಯಲ್ಲೇ ನಮ್ಮ ಗಮನ ಸೆಳೆಯುತ್ತಾರೆ. ನಾವು ಅದನ್ನು ಕಡೆಗಣಿಸಿ ಬೇರೊಂದು ದಾರಿಗೆ ಎಳೆದರೆ ನಮ್ಮ ನಿರೀಕ್ಷೆಗೆ ತಕ್ಕಂತೆ ಅವರು ಬೆಳೆಯಲಾರರು ಎಂಬುದು ಇಂದಿನ ಪಾಲಕರು ಅರಿತುಕೊಳ್ಳಬೇಕಾದ ಸತ್ಯವಾಗಿದೆ. ಕೃತಿಯುದ್ದಕ್ಕೂ ಅನೇಕ ಕಿವಿಮಾತು, ಹಿತನುಡಿಗಳು ಹೇರಳವಾಗಿವೆ. ಕೆಲವು ಸತ್ಯ ಘಟನೆಗಳನ್ನು ನಿರೂಪಿಸಿ ಎಚ್ಚರಿಕೆಯನ್ನು ನೀಡಿದ್ದಾರೆ ಲೇಖಕ ಶ್ರೀ ಗಿರಿಮನೆ ಶ್ಯಾಮರಾವ್.*

– **ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು – ೨೨*

**ಶಶಿಕಾಂತ ಯಡಹಳ್ಳಿ**

# 'ವೇದಿಕೆ'ಯಿಂದ ವಿದಾಯ ಹೇಳಿದ 'ಸಿಂಹ'ರವರಿಗೆ ರಂಗನಮನ

ಆಘಾತಗಳು ಬಂದರೆ ಒಂದರ ಹಿಂದೆ ಒಂದು ಬರುತ್ತವೆ. ಈ ವರ್ಷದ ಫೆಬ್ರವರಿ ತಿಂಗಳು ನಿಜಕ್ಕೂ ಆಘಾತಕಾರಿಯಾಗಿದೆ. ಮೂರು ಅಮೂಲ್ಯ ರಂಗಜೀವಗಳು ಮರೆಯಾಗಿವೆ. ಫೆಬ್ರವರಿ ೧೧ರಂದು ಬೆಳಕು ತಜ್ಞ ಪರೇಶಕುಮಾರ ಇದ್ದಕ್ಕಿದ್ದಂತೆ ಕಾಲವಶರಾದರು. ಫೆಬ್ರವರಿ ೨೧ರಂದು ರಂಗಸಂಘಟಕ ಗೋವಾದತ್ತು ನೇಪಥ್ಯಕ್ಕೆ ಸೇರಿದರು. ಇನ್ನೇನು ಈ ಕರಾಳ ಫೆಬ್ರವರಿ ತಿಂಗಳು ಮುಗಿಯಿತು ಅನ್ನುವುದರೊಳಗೆ ಆ ತಿಂಗಳ ಕೊಟ್ಟಕೊನೆಯ ದಿನ ಫೆಬ್ರವರಿ ೨೮ರಂದು ಕನ್ನಡ ರಂಗಭೂಮಿಯ ಅದ್ಭುತ ಪ್ರತಿಭಾವಂತ ನಟ ಸಿ. ಆರ್. ಸಿಂಹರವರನ್ನೇ ಕಾಲವೆನ್ನುವುದು ಆಹುತಿ ತೆಗೆದುಕೊಂಡಿತು.

ಸಿಂಹರವರ ರಂಗಬದುಕಿನ ಒಂದು ನೋಟವನ್ನು ಈ ಸಮಯದಲ್ಲಿ ನೆನಪಿಸಿಕೊಳ್ಳಲೇಬೇಕು. ಸಿ. ಆರ್. ಸಿಂಹ ಆಗ ಬಸವನಗುಡಿಯ ನ್ಯಾಷನಲ್ ಕಾಲೇಜಿನ ವಿದ್ಯಾರ್ಥಿ. ಈ ಕಾಲೇಜು ಕೇವಲ ಶುಷ್ಕ ಪಾಠಗಳಿಗೆ ಮಾತ್ರ ಸೀಮಿತವಾಗಿರಲಿಲ್ಲ. ಇಲ್ಲಿ ಸಾಂಸ್ಕೃತಿಕ ವಾತಾವರಣವೇ ಅನಾವರಣಗೊಂಡಿತ್ತು. ಈ ಕಾಲೇಜಿನಲ್ಲಿ ಸಾಂಸ್ಕೃತಿಕ ಚಟುವಟಿಕೆಗಳಿಗೋಸ್ಕರವೇ 'ನ್ಯಾಷನಲ್ ಕಾಲೇಜ್ ಹಿಸ್ಟ್ರಿಯಾನಿಕ್ಸ್ ಕ್ಲಬ್'ಅನ್ನು ಸ್ಥಾಪಿಸಲಾಗಿತ್ತು. ಈ ಕ್ಲಬ್‌ನ ಸಕ್ರಿಯ ಸದಸ್ಯರಾಗಿದ್ದ ಸಿಂಹರವರು ಬಹದ್ದೂರ ಗಂಡ, ಮನವೆಂಬ ಮರ್ಕಟ ಮುಂತಾದ ನಾಟಕಗಳಲ್ಲಿ ಅಭಿನಯಿಸಿದ್ದರು. ಕಾಲೇಜಿನಲ್ಲಿ ನಾಟಕ ಚಟುವಟಿಕೆಗಳು ನಿರಂತರವಾಗಿದ್ದವು. ತದನಂತರ ರಂಗಭೂಮಿ ಮತ್ತು ಸಿನೆಮಾಗಳಲ್ಲಿ ಹೆಸರು ಮಾಡಿರುವ ಅನೇಕ ಪ್ರತಿಭಾವಂತರು ತಯಾರಾಗಿದ್ದೇ ಈ ನ್ಯಾಷನಲ್ ಕಾಲೇಜಿನಲ್ಲಿ. ಅಂತಹ ಸಾಂಸ್ಕೃತಿಕ ವಾತಾವರಣದಲ್ಲಿ ಬೆಳೆದವರು ಸಿ. ಆರ್. ಸಿಂಹ. ನ್ಯಾಷನಲ್ ಕಾಲೇಜಿನಲ್ಲಿ ವಿಜ್ಞಾನದ ಪದವಿ ಪಡೆದು ನಂತರ ಎಂಜಿನಿಯರಿಂಗ್ ಸಹ ಮಾಡಿದರು.

ಯಾವುದೋ ಸರಕಾರಿ ಡಿಪಾರ್ಟ್‌ಮೆಂಟಿನಲ್ಲಿ ಎಂಜಿನಿಯರ್ ಆಗಿ ಸಿಂಹ ಸುಖವಾಗಿರಬಹುದಾಗಿತ್ತು. ಆಗ ನೌಕರಿಯೂ ಸುಲಭದಲ್ಲಿ ದಕ್ಕುತ್ತಿತ್ತು. ಆದರೆ ಸಿಂಹರವರು ಹೋಗಿ ಸೇರಿದ್ದು ವಾರ್ತಾ ಇಲಾಖೆಯ ಸಂಗೀತ ಮತ್ತು ನಾಟಕ ವಿಭಾಗದ ಕಲಾವಿದ ನೌಕರಿಗೆ. ಯಾಕೆಂದರೆ ಅಲ್ಲಿ ನಾಟಕಕ್ಕೆ ಹೆಚ್ಚು ಅವಕಾಶವಿದೆ ಎಂದು ಸಿಂಹ ತಿಳಿದಿದ್ದರು. ಆದರೆ ಯಾವಾಗ ಅಲ್ಲಿ ಅಭಿನಯಕ್ಕಿಂತ ಆಡಳಿತವೇ ಮುಖ್ಯ ಎಂದು ಅರಿವಾಯಿತೋ ಆ ನೌಕರಿಗೆ ಗುಡ್ ಬೈ ಹೇಳಿ ನೇರವಾಗಿ ರಂಗಭೂಮಿಗೆ ಬಂದರು. ಸಿಂಹರವರ ಅಜ್ಜ 'ವಿಶ್ವವ್ಯವಸ್ಥೆ' ಎನ್ನುವ ನಾಟಕ ಬರೆದಿದ್ದರು. ಆ ನಾಟಕದಲ್ಲಿ ವಿಷ್ಣು ಪಾತ್ರದಲ್ಲಿ ಸಿಂಹ ಅಭಿನಯಿಸಿದರೆ ಅವರ ತಮ್ಮ ಈಶ್ವರನ ಪಾತ್ರ ಮಾಡಿದರು.

ಆಗ 'ಬೆಂಗಳೂರು ಲಿಟಲ್ ಥಿಯೇಟರ್' (ಬಿ.ಎಲ್.ಟಿ) ಎನ್ನುವ ರಂಗತಂಡ ಸಕ್ರಿಯವಾಗಿತ್ತು. ೧೯೬೦ರಿಂದ ಸಿಂಹರವರು ಈ ತಂಡದ ಸದಸ್ಯರಾದರು. ರಂಗದಿಗ್ಗಜರಾದ ಬಿ. ಚಂದ್ರಶೇಖರ್, ನಾಣಿ ಹಾಗೂ ವಿಮಲಾ ರಂಗಾಚಾರ್ ಈ ತಂಡದ ಸ್ಥಾಪಕರು. ಬಿ.ಎಲ್.ಟಿ. ರಂಗತಂಡದ ನಾಟಕಗಳಲ್ಲಿ ಸಿಂಹರವರು ಪ್ರಮುಖ ಪಾತ್ರಧಾರಿಯಾಗಿದ್ದರು. ಸೂರ್ಯ ಶಿಕಾರಿ, ಮ್ಯಾನ್ ಆಫ್ ಡೆಸ್ಟಿನಿ, ದಿ. ಆಯಡ್ ಕಪಲ್, ದಿ ಝೂ ಸ್ಟೋರಿ... ಮುಂತಾದ ನಾಟಕಗಳಲ್ಲಿ ಸಿಂಹರವರು ತಮ್ಮ ವಿಶಿಷ್ಟ ಅಭಿನಯದಿಂದ ಎಲ್ಲರ ಗಮನ ಸೆಳೆದಿದ್ದರು. ಅದರಲ್ಲೂ ಶಿಸ್ತಿನ ಸಿಪಾಯಿಯಾದ ಬಿ. ಸಿ. ಅವರಿಗೆ ಸಿಂಹ ಅಚ್ಚುಮೆಚ್ಚಿನ ನಟರಾಗಿದ್ದರು.

ಗಿರೀಶ್ ಕಾರ್ನಾಡರು ಆಗತಾನೆ 'ತುಘಲಕ್' ನಾಟಕ ರಚಿಸಿದ್ದರು. ಬಿ. ಚಂದ್ರಶೇಖರ್‌ರವರು 'ಕನ್ನಡ ಸಾಹಿತ್ಯ ಕಲಾ ಸಂಘ' ರಂಗತಂಡಕ್ಕೆ 'ತುಘಲಕ್' ನಾಟಕವನ್ನು ನಿರ್ದೇಶಿಸಿದರು. ಸಿಂಹರವರು 'ತುಘಲಕ್' ಪಾತ್ರ ಅಭಿನಯಿಸಿದರು. ೧೯೬೫ರಲ್ಲಿ ತುಘಲಕ್ ಮೊದಲ ಬಾರಿ ಪ್ರದರ್ಶನಗೊಂಡು ಇತಿಹಾಸವನ್ನೇ



ಸಿ. ಆರ್. ಸಿಂಹರವರಿಗೆ ಮೂವರು ಮಹಾನ್ ವ್ಯಕ್ತಿಗಳ ಬಗ್ಗೆ ತುಂಬಾ ಮೋಹವಿತ್ತು. ಒಬ್ಬರು ಕೈಲಾಸಂ. ಅವರ ಬದುಕು ಬರಹಗಳನ್ನಿಟ್ಟುಕೊಂಡು 'ಟಿಪಿಕಲ್ ಟಿ. ಪಿ. ಕೈಲಾಸಂ' ಏಕವ್ಯಕ್ತಿ ಪ್ರಯೋಗದ ಮೂಲಕ ತಮ್ಮ ಕೈಲಾಸಂ ಮೇಲಿನ ಪ್ರೀತಿಯನ್ನು ತೋರಿಸಿಕೊಟ್ಟರು. ಇನ್ನೊಬ್ಬರು ಗಿರೀಶ ಕಾರ್ನಾಡ. ಯಾಕೆಂದರೆ ಕಾರ್ನಾಡರ 'ತುಘಲಕ್' ನಾಟಕದಿಂದಲೇ ಸಿಂಹ ರಂಗಭೂಮಿಯಲ್ಲಿ ಒಂದು ಐಡೆಂಟಿಟಿ ಪಡೆದು ಹೆಸರಾಗಿದ್ದರು. ಹಾಗೂ ಕಾರ್ನಾಡರು ತಮ್ಮ 'ಸಂಸ್ಕಾರ' ಸಿನೆಮಾದಲ್ಲಿ ಸಿಂಹರವರಿಗೆ ಮೊದಲ ಬಾರಿಗೆ ಚಲನಚಿತ್ರದಲ್ಲಿ ನಟಿಸಲು ಅವಕಾಶವನ್ನು ಕೊಟ್ಟಿದ್ದರು. ಆದ್ದರಿಂದ ಕಾರ್ನಾಡರ ಬದುಕು ಬರಹಗಳ ಕುರಿತು 'ಕಾರ್ನಾಡ ಕಂಪನಿ' ಎನ್ನುವ ನಾಟಕವೊಂದನ್ನು 'ತಮ್ಮ ವೇದಿಕೆ' ತಂಡದಿಂದ ನಿರ್ಮಿಸಿ, ತಮ್ಮ ಕುಟುಂಬ ಪರಿವಾರ ಸಮೇತ ಅಭಿನಯಿಸಿ ಕಾರ್ನಾಡರಿಗೆ ರಂಗಕ್ರಿಯೆಯ ಮೂಲಕ ಕೃತಜ್ಞತೆಗಳನ್ನು ಸಲ್ಲಿಸಿದ್ದರು.



*ಸಿ. ಆರ್. ಸಿಂಹರವರ ಕುಟುಂಬ*

ಸೃಷ್ಟಿಸಿತು. ಈ ನಾಟಕದ ಮೊದಲ ಪ್ರದರ್ಶನ ಮುಗಿದ ಬಳಿಕ ರಂಗಭೂಮಿಯಲ್ಲಿ ಸ್ಟಾರ್ ನಟನೊಬ್ಬ ಹುಟ್ಟಿಕೊಂಡ. ಅವರೇ ಸಿಂಹ. ಇವತ್ತಿನವರೆಗೂ ಅವರನ್ನು ಮೀರಿಸುವ ತುಘಲಕ್ ಪಾತ್ರಧಾರಿ ಮತ್ತಾರೂ ಬಂದಿಲ್ಲ. ತುಘಲಕ್ ಪಾತ್ರ ಸಿಂಹ ರವರಿಗೆ ಅಪಾರ ಹೆಸರನ್ನು ತಂದುಕೊಟ್ಟಿತು. ಇಡೀ ತುಘಲಕ್ ನಾಟಕವೇ ಸಿಂಹಮಯ ವಾಗಿತ್ತು. ಅದರಿಂದಾಗಿ ಆ ನಾಟಕದ ಮೇಲೆ ಸಿಂಹರವರಿಗೆ ಅದಮ್ಯ ಮೋಹ.

ಬರುಬರುತ್ತಾ 'ಕನ್ನಡ ಸಾಹಿತ್ಯ ಕಲಾ ಸಂಘ' ದುರ್ಬಲಗೊಂಡಿತು. ನಂತರ ಕೆಲವು ರಂಗಕರ್ಮಿಗಳು 'ತಮ್ಮದೇ ರಂಗತಂಡವೊಂದನ್ನು ಹುಟ್ಟುಹಾಕೋಣ' ಎಂದುಕೊಂಡಾಗ ಅಸ್ತಿತ್ವಕ್ಕೆ ಬಂದಿದ್ದೇ 'ನಟರಂಗ'. ಸಿಂಹ, ಲೋಕೇಶ್, ಕಪ್ಪಣ್ಣ, ವೆಂಕಟರಾವ್, ಗುರುರಾಜ್, ಶ್ರೀನಿವಾಸ, ಪರೇಶಕುಮಾರ ಮುಂತಾದವರು ಸೇರಿ ಈ ರಂಗತಂಡವನ್ನು ೧೯೭೨ರಲ್ಲಿ ಹುಟ್ಟುಹಾಕಿದರು. ನಟರಂಗದ ಮೊದಲ ನಾಟಕವಾಗಿ ಮಾಸ್ತಿಯವರ 'ಕಾಕನಕೋಟೆ' ನಾಟಕ ನಿರ್ಮಾಣವಾಯಿತು. ನಟ ಲೋಕೇಶ್ ಈ ನಾಟಕದಲ್ಲಿ ಪ್ರಮುಖ ಪಾತ್ರ ವಹಿಸಿ ಹೆಸರುವಾಸಿಯಾದರು.

ಸಿಂಹ ಅವರ ನಿರ್ದೇಶನದ 'ತುಘಲಕ್' ಪ್ರದರ್ಶನ ನಿಲ್ಲಲೇ ಇಲ್ಲ. 'ಸಿಂಹ ಎಂದರೆ ತುಘಲಕ್', 'ತುಘಲಕ್ ಎಂದರೆ ಸಿಂಹ' ಎನ್ನುವ ಹಾಗೇ ರಂಗಭೂಮಿಯಲ್ಲಿ ಹೆಸರಾದರು. ಇಪ್ಪತ್ತು ವರ್ಷಗಳ ಕಾಲ ವಿಜೃಂಭಿಸಿದ ಸಿಂಹರವರ ನಿರ್ದೇಶನ ಹಾಗೂ ಅಭಿನಯದ 'ತುಘಲಕ್' ಇನ್ನೂರಕ್ಕೂ ಹೆಚ್ಚು ಪ್ರದರ್ಶನಗಳನ್ನು ಕಂಡಿತು.

ಕಾರ್ನಾಡರ 'ತಲೆದಂಡ', ಮಾಸ್ತಿಯವರ 'ಕಾಕನಕೋಟೆ', ಲಂಕೇಶರ 'ಸಂಕ್ರಾಂತಿ', ಉತ್ಪಲ್ ದತ್‌ರವರ 'ಸೂರ್ಯಶಿಕಾರಿ', ಶೂದ್ರಕ ಕವಿಯ 'ಮಚ್ಛಕಟಿಕ' ಹೀಗೆ ಹಲವಾರು ನಾಟಕಗಳನ್ನು ನಟರಂಗಕ್ಕೆ ಸಿಂಹರವರು ನಿರ್ದೇಶಿಸಿದ್ದರು. ಬೆಕೆಟ್‌ನ 'ವೇಟಿಂಗ್ ಫಾರ್ ಗಾಡೋ', ಶೇಕ್ಸ್‌ಪಿಯರ್‌ನ 'ಮಿಡ್ ಸಮರ್ ನೈಟ್ಸ್ ಡ್ರೀಮ್' ಹಾಗೂ 'ಒಥೆಲೋ', ಬ್ರೆಕ್ಟ್‌ನ 'ಕಕೇಶಿಯನ್ ಚಾಕ್ ಸರ್ಕಲ್'... ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿ, ನಿರ್ದೇಶಿಸಿ ನಟಿಸಿದ್ದರು. ನೀಲ್ ಸಿಮೋನ್‌ರವರ 'ಕಮ್ ಬ್ಲೋ ಯುವರ್ ಹಾರ್ನ್' ಎನ್ನುವ ನಾಟಕವನ್ನು 'ಮೀಸೆ ಬಂದೋರು' ಎನ್ನುವ ಹೆಸರಲ್ಲಿ ಸಿಂಹ ಕನ್ನಡಕ್ಕೆ ಅನುವಾದಿಸಿದರು. ಪೀಟರ್ ಶಫೇರ್ಡ್‌ರವರ 'ಅಮ್ಯೆಡೂಸ್' ನಾಟಕವನ್ನು 'ಭೈರವಿ' ಹೆಸರಲ್ಲಿ ಕನ್ನಡಕ್ಕೆ ತಂದರು. ಕುವೆಂಪುರವರ ಬದುಕು, ಸಾಹಿತ್ಯ, ದೃಷ್ಟಿಕೋನಗಳನ್ನು ಅಧ್ಯಯನ ಮಾಡಿ 'ರಸಋಷಿ' ನಾಟಕ ರಚಿಸಿದರು. ಹಾಗೂ ತಾವು ಅನುವಾದಿಸಿದ ಹಾಗೂ ರಚಿಸಿದ ಎಲ್ಲಾ ನಾಟಕಗಳನ್ನೂ ಸಿಂಹ ಅವರೇ ನಿರ್ದೇಶಿಸಿದರು ಹಾಗೂ ಅಭಿನಯಿಸಿದರು.

ಏನೇ ಆದರೂ ತುಘಲಕ್ ಸಿಂಹ ಅವರನ್ನು ಬಿಟ್ಟರೂ ಸಿಂಹ ತುಘಲಕ್‌ನನ್ನು ಬಿಡಲಿಲ್ಲ. ಆನಂತರ ಸಿಂಹ ಮಾಡಿದ ಹಲವಾರು ನಾಟಕಗಳ ವಿಭಿನ್ನ ಪಾತ್ರಗಳಲ್ಲೂ ತುಘಲಕ್‌ನ ಛಾಯೆ ಕಾಣಬಹುದಾಗಿದೆ. ಒಂದು ದಶಕದ ಕಾಲ 'ನಟರಂಗ'ದ ನಾಟಕಗಳಲ್ಲಿ ಸಿಂಹ ಅಭಿನಯಿಸಿದರು. ಬರಬರುತ್ತಾ 'ನಟರಂಗ'ದಲ್ಲಿ ಆಂತರಿಕ ಭಿನ್ನಾಭಿಪ್ರಾಯ ಹೆಚ್ಚಾಯಿತು. ಸಿಂಹ ಹಾಗೂ ಲೋಕೇಶ್ ಅವರಲ್ಲಿ ಪ್ರಮುಖ ಪಾತ್ರದ ಕುರಿತು ಮೇಲಾಟ ಶುರುವಾಯಿತು. ಕಪ್ಪಣ್ಣನವರ ರಂಗಸಂಘಟನೆಯಲ್ಲಾದ ಆರ್ಥಿಕ ಸಮಸ್ಯೆಗಳಿಂದ ನಟರಂಗದ ಅನೇಕರು ಬೇಸರಗೊಂಡಿದ್ದರು. ಇದರಿಂದಾಗಿ ಹಲವರು 'ನಟರಂಗ'ಕ್ಕೆ ಬೆನ್ನು ತಿರುಗಿಸಿ ಹೊರನಡೆದರು. ಇದೆಲ್ಲದರಿಂದ ಸಿಂಹ ತುಂಬಾ ಬೇಸರಗೊಂಡಿದ್ದರು. ಕೊನೆಗೆ ಸಿಂಹರವರೂ ನಟರಂಗಕ್ಕೆ ಗುಡ್ ಬೈ ಹೇಳಿದರು. ಕೊನೆಗೆ ಕಪ್ಪಣ್ಣ ಒಬ್ಬರೇ 'ನಟರಂಗ'ದಲ್ಲಿ ಹಾಳೂರಿಗೆ ಉಳಿದವನೊಬ್ಬನೇ ಗೌಡ ಎನ್ನುವ ರೀತಿಯಲ್ಲಿ ಮುಂದುವರಿದರು.

ಅದೊಂದು ದಿನ, "ಬೇರೆ ರಂಗತಂಡದಲ್ಲಿ ಯಾಕೆ ನಾನು ಅಭಿನಯಿಸಬೇಕು. ನನ್ನದೇ ರಂಗತಂಡವನ್ನು ಯಾಕೆ ಕಟ್ಟಬಾರದು" ಎನ್ನುವ ಮಹತ್ವಾಕಾಂಕ್ಷೆ ಬಂದದ್ದೇ ತಡ ಸಿಂಹ ೧೯೮೩ರಲ್ಲಿ ತಮ್ಮದೇ ಆದ 'ವೇದಿಕೆ' ರಂಗತಂಡವನ್ನು ಹುಟ್ಟುಹಾಕಿದರು. ಈ ಹೊಸ ತಂಡಕ್ಕೆ ನಾಟಕವನ್ನು ನಿರ್ಮಿಸಬೇಕಿತ್ತು. ಆದರೆ ಕಲಾವಿದರ ಕೊರತೆ ಇತ್ತು. ಆಗೊಂದು ದಿನ ಸಿಂಹರವರಿಗೆ 'ಇಡೀ ಒಂದು ನಾಟಕವನ್ನು ತಾವೊಬ್ಬರೆ ನಟಿಸಬೇಕು, ತಮ್ಮ ಅಭಿನಯ ಸಾಮರ್ಥ್ಯಕ್ಕೆ ಸವಾಲಾಗುವಂತಹ ಪಾತ್ರವನ್ನು ನಿಭಾಯಿಸಿ ತೋರಿಸಬೇಕು' ಎನ್ನುವ ಆಸೆಯಾಯಿತು. ಯಾವ ಪಾತ್ರ ಮಾಡಬೇಕು ಎಂದುಕೊಂಡಾಗ ನೆನಪಾಗಿದ್ದೇ ಪ್ರಹಸನ ಪಿತಾಮಹ ಕೈಲಾಸಂ. ಸಿಂಹರವರಿಗೆ ನಾಟಕಕಾರ ಕೈಲಾಸಂ ಎಂದರೆ ಬಲು ಮೋಹ. ಎರಡು ವರ್ಷಗಳ ಕಾಲ ಟಿ. ಎನ್. ನರಸಿಂಹನ್‌ರವರ ಹಿಂದೆ ಬಿದ್ದು 'ಟಿಪಿಕಲ್ ಟಿ. ಪಿ. ಕೈಲಾಸಂ' ಎನ್ನುವ ಹೆಸರಲ್ಲಿ ಏಕವ್ಯಕ್ತಿ ನಾಟಕವನ್ನು ಬರೆಸಿದರು. ೧೯೮೩ರ ನವೆಂಬರ್‌ನಲ್ಲಿ 'ನಯನ' ಸಭಾಂಗಣದಲ್ಲಿ ಮೊದಲ ಬಾರಿಗೆ ಸಿಂಹರವರ ಈ ಏಕವ್ಯಕ್ತಿ ಪ್ರದರ್ಶನ ಪ್ರಯೋಗಗೊಂಡಿತು. ಇದು ಸಿಂಹರವರ 'ವೇದಿಕೆ' ರಂಗತಂಡದ ಮೊದಲ ನಾಟಕ ಇದು. ಅಂದಿನಿಂದ ೧೯೯೧ರವರೆಗೆ ನೂರು ಪ್ರದರ್ಶನವನ್ನು ಕಂಡಿತು. ಆನಂತರವೂ ೨೦೧೧ರವರೆಗೆ ಎಣಿಕೆಗಳನ್ನು ಮೀರಿ ಈ ನಾಟಕ ಪ್ರದರ್ಶನಗೊಂಡಿದೆ. ತುಘಲಕ್ ನಂತರ ಅವರ ಸಂಪೂರ್ಣ ಅಭಿನಯ ಪ್ರತಿಭೆ ಈ ಏಕವ್ಯಕ್ತಿ ಪ್ರಯೋಗದಲ್ಲಿ ಅನಾವರಣಗೊಂಡಿದೆ. ಈ ನಾಟಕ ನಮ್ಮ ದೇಶದಲ್ಲಿ ಮಾತ್ರವಲ್ಲ ನ್ಯೂಯಾರ್ಕ್, ವಾಷಿಂಗ್‌ಟನ್, ಸ್ಯಾನ್‌ಫ್ರಾನ್ಸಿಸ್ಕೋ, ಕೆನಡಾ ಸೇರಿದಂತೆ ಜಗತ್ತಿನ ಹದಿನೈದು ದೇಶಗಳಲ್ಲಿ ಪ್ರದರ್ಶನಗೊಂಡಿದೆ. ಕನ್ನಡದ ಕೈಲಾಸಂರವರ ಬದುಕು ಬರಹಗಳ ಕುರಿತು ನಾಟಕವಾಡಿ ದೇಶ ವಿದೇಶಗಳಿಗೆ ಕೈಲಾಸಂರವರನ್ನು ಪರಿಚಯಿಸಿದ ಕೀರ್ತಿ ಸಿ. ಆರ್. ಸಿಂಹರವರದ್ದು.

ಕನ್ನಡ ರಂಗಭೂಮಿಯಲ್ಲಿ ಏಕವ್ಯಕ್ತಿ ಪ್ರಯೋಗಗಳ ಬೆಳವಣಿಗೆಗೆ ಪ್ರಮುಖ ಪ್ರೇರಕ ಶಕ್ತಿಯಾಗಿರುವುದು ಸಿಂಹರವರ 'ಟಿಪಿಕಲ್ ಟಿ. ಪಿ. ಕೈಲಾಸಂ' ನಾಟಕದ ಯಶಸ್ಸು. ಇದಕ್ಕಿಂತ ಹಿಂದೆ ಈ ಏಕವ್ಯಕ್ತಿ ರಂಗಪ್ರಕಾರ ಕನ್ನಡದಲ್ಲಿ ಇರಲಿಲ್ಲ ಎಂದಲ್ಲ, ಆದರೆ ಏಕವ್ಯಕ್ತಿ ರಂಗಪ್ರಕಾರಕ್ಕೆ ವಿಸ್ತೃತ ರೂಪವನ್ನು ಕೊಟ್ಟು ರಾಜ್ಯ-ದೇಶ-ವಿದೇಶಗಳಲ್ಲಿ ಪ್ರದರ್ಶನಗೊಂಡು ಜನಮನ್ನಣೆ ಗಳಿಸಿದ್ದು ಸಿಂಹರವರ '... ಕೈಲಾಸಂ' ನಾಟಕ. ಈ ಪ್ರಯೋಗದ ಯಶಸ್ಸು ಹಾಗೂ ಸುಲಭವಾಗಿ ಪ್ರದರ್ಶಿಸಬಹುದಾದ ಸಾಧ್ಯತೆಗಳು ಏಕವ್ಯಕ್ತಿ ಪ್ರಕಾರದ ಮುಂದುವರಿಕೆಗೆ ಕಾರಣವಾದವು ಎಂಬುದು ವಾಸ್ತವ ಸಂಗತಿ. ಹೀಗಾಗಿ ಈ ಏಕವ್ಯಕ್ತಿ ಪ್ರಯೋಗಗಳ ಪ್ರೇರಕ ವ್ಯಕ್ತಿಯಾಗಿ ಸಿಂಹ ಮುಂಚೂಣಿಯಲ್ಲಿದ್ದರು.

'ವೇದಿಕೆ' ರಂಗತಂಡದ ನಾಟಕಗಳಲ್ಲಿ ತಮ್ಮ ಇಡೀ ಕುಟುಂಬವನ್ನೇ ಸಿಂಹರವರು ತೊಡಗಿಸಿಕೊಂಡರು. 'ವೇದಿಕೆ'ಯೊಂದು ಸಿಂಹ ಪರಿವಾರದ ನಾಟಕ ತಂಡ ಎಂದು ಹೆಸರಾಯಿತು. ತಮ್ಮ ಪತ್ನಿ ಶಾರದಾಮಣಿ, ಪುತ್ರ ಋತ್ವಿಕ್ ಸಿಂಹ,



ಸೊಸೆ ಜೆಸ್ಲಿನ್‌ರವರನ್ನೂ ಸಹ ತಮ್ಮ ನಾಟಕದಲ್ಲಿ ಪಾತ್ರವಾಗಿಸಿದರು. ತಮ್ಮ ಮನೆ 'ಗುಹೆ'ಯ ಆವರಣದಲ್ಲಿ ಒಂದು ಪುಟ್ಟ ಆಪ್ತ ರಂಗ ಮಂದಿರವನ್ನೇ ಕಟ್ಟಿಕೊಂಡರು. ಸತತವಾಗಿ ಎರಡು ವರ್ಷಗಳ ಕಾಲ ಪ್ರತಿ ಶನಿವಾರ ಮತ್ತು ಭಾನುವಾರ ಬೆಂಗಳೂರಿನ ಜಯನಗರದ ಎಚ್. ಎನ್. ಕಲಾಕ್ಷೇತ್ರದಲ್ಲಿ 'ರಂಗಮಾಲಿಕೆ' ಹೆಸರಲ್ಲಿ ನಾಟಕಗಳನ್ನು ಪ್ರದರ್ಶಿಸಿದರು. ಮೀಸೆ ಬಂದೋರು, ರಸಋಷಿ, ಮದುವೆ ಮದುವೆ, ಕೋಲ್ಮಿಂಚು, ಅಗ್ನಿ ಮತ್ತು ಮಳೆ, ಹಾವು ಏಣಿ, ಮ್ಯಾಕ್‌ಬೆತ್, ಕರ್ಣ, ಭೈರವಿ ಮುಂತಾದ ನಾಟಕಗಳು 'ವೇದಿಕೆ' ರಂಗತಂಡದಿಂದ ಪ್ರದರ್ಶನಗೊಂಡವು. ಬಹುಶಃ ಆಧುನಿಕ ರಂಗಭೂಮಿಯಲ್ಲಿ ಎ. ಎಸ್. ಮೂರ್ತಿಯವರ ಕುಟುಂಬವನ್ನು ಬಿಟ್ಟರೆ ಇಡೀ ಕುಟುಂಬವೇ ನಾಟಕದಲ್ಲಿ ತೊಡಗಿಕೊಂಡಿದ್ದು ಸಿಂಹರವರ ಪರಿವಾರವೇ. ಇದು ಸಿಂಹರವರು ರಂಗಭೂಮಿಯ ಮೇಲಿಟ್ಟಿರುವ ಪ್ರೀತಿಯ ಪ್ರತೀಕ. ಬಂಗಾಳಿಯ ಪ್ರಸಿದ್ಧ ಸಿನೆಮಾ ನಿರ್ದೇಶಕ ಋತ್ವಿಕ್ ಘಟಕ್‌ರವರ ಹೆಸರನ್ನು ತಮ್ಮ ಮಗನಿಗೆ ಇಟ್ಟಿದ್ದು ಸಿಂಹರವರ ಸಿನೆಮಾ ಪ್ರೀತಿ ಎಂತಹುದಾಗಿತ್ತು ಎನ್ನುವುದಕ್ಕೆ ಸಾಕ್ಷಿ.



ಸಿ. ಆರ್. ಸಿಂಹರವರಿಗೆ ಮೂವರು ಮಹಾನ್ ವ್ಯಕ್ತಿಗಳ ಬಗ್ಗೆ ತುಂಬಾ ಮೋಹವಿತ್ತು. ಒಬ್ಬರು ಕೈಲಾಸಂ. ಅವರ ಬದುಕು ಬರಹಗಳನ್ನಿಟ್ಟುಕೊಂಡು 'ಟಿಪಿಕಲ್ ಟಿ. ಪಿ. ಕೈಲಾಸಂ' ಏಕವ್ಯಕ್ತಿ ಪ್ರಯೋಗದ ಮೂಲಕ ತಮ್ಮ ಕೈಲಾಸಂ ಮೇಲಿನ ಪ್ರೀತಿಯನ್ನು ತೋರಿಸಿಕೊಟ್ಟರು. ಇನ್ನೊಬ್ಬರು ಗಿರೀಶ ಕಾರ್ನಾಡ. ಯಾಕೆಂದರೆ ಕಾರ್ನಾಡರ 'ತುಘಲಕ್' ನಾಟಕದಿಂದಲೇ ಸಿಂಹ ರಂಗಭೂಮಿಯಲ್ಲಿ ಒಂದು ಐಡೆಂಟಿಟಿ ಪಡೆದು ಹೆಸರಾಗಿದ್ದರು. ಹಾಗೂ ಕಾರ್ನಾಡರು ತಮ್ಮ 'ಸಂಸ್ಕಾರ' ಸಿನೆಮಾದಲ್ಲಿ ಸಿಂಹರವರಿಗೆ ಮೊದಲ ಬಾರಿಗೆ ಚಲನಚಿತ್ರದಲ್ಲಿ ನಟಿಸಲು ಅವಕಾಶವನ್ನು ಕೊಟ್ಟಿದ್ದರು. ಆದ್ದರಿಂದ ಕಾರ್ನಾಡರ ಬದುಕು ಬರಹಗಳ ಕುರಿತು 'ಕಾರ್ನಾಡ ಕಂಪನಿ' ಎನ್ನುವ ನಾಟಕವೊಂದನ್ನು 'ತಮ್ಮ ವೇದಿಕೆ' ತಂಡದಿಂದ ನಿರ್ಮಿಸಿ, ತಮ್ಮ ಕುಟುಂಬ ಪರಿವಾರ ಸಮೇತ ಅಭಿನಯಿಸಿ ಕಾರ್ನಾಡರಿಗೆ ರಂಗಕ್ರಿಯೆಯ ಮೂಲಕ ಕೃತಜ್ಞತೆಗಳನ್ನು ಸಲ್ಲಿಸಿದ್ದರು. ಸಿಂಹರವರನ್ನು ಪ್ರಭಾವಿಸಿದ ಮತ್ತೊಬ್ಬರು ಕುವೆಂಪು. ಕುವೆಂಪುರವರ ಬದುಕು ಹಾಗೂ ಬರಹಗಳನ್ನಾಧರಿಸಿದ 'ರಸಋಷಿ ಕುವೆಂಪು' ನಾಟಕವನ್ನು ನಿರ್ಮಿಸಿ, ಕುವೆಂಪು ಪಾತ್ರವನ್ನು ಸ್ವತಃ ಅಭಿನಯಿಸಿ ಆ ಮಹಾನ್ ಲೇಖಕನಿಗೆ ರಂಗಗೌರವವನ್ನು ಸಿಂಹ ಅರ್ಪಿಸಿದರು. ಆ ನಂತರ ಸಿಂಹರವರ ಮಗ ಋತ್ವಿಕ್ ಈ ನಾಟಕವನ್ನೇ ಸಿನೆಮಾ ಮಾಡಿ ನಿರ್ದೇಶಿಸಿದರು. ಸಿಂಹರವರೇ ಕುವೆಂಪು ಪಾತ್ರ ಅಭಿನಯಿಸಿದರು.

ನಾಟಕವೆಂದರೆ ಉದ್ಯಮವಲ್ಲ, ಇದರಲ್ಲಿ ನಿರೀಕ್ಷಿಸಿದಷ್ಟು ಆದಾಯವಿಲ್ಲ ಎಂಬುದರ ಅರಿವಿದ್ದ ಸಿಂಹ ಸಿನೆಮಾಗಳಲ್ಲಿ ನಟಿಸಲು ಆರಂಭಿಸಿದರು. ಅವರ ಮೊದಲ ಸಿನೆಮಾ ೧೯೭೨ರಲ್ಲಿ ಬಂದ 'ಸಂಸ್ಕಾರ'. ನಂತರ ಬರ, ಅನುರೂಪ, ಸಂಕಲ್ಪ, ಚಿತೆಗೂ ಚಿಂತೆ ಮುಂತಾದ ಸಿನೆಮಾಗಳಲ್ಲಿ ಅಭಿನಯಿಸಿದರು. ಕಲಾತ್ಮಕ ಚಿತ್ರಗಳ ಜೊತೆಗೆ ಕಮರ್ಷಿಯಲ್ ಚಿತ್ರಗಳಲ್ಲೂ ಸಹ ನಟಿಸುತ್ತಿದ್ದರು. ನೀ ತಂದ ಕಾಣಿಕೆ, ಇಂದಿನ ರಾಮಾಯಣ, ರಾಮಪುರದ ರಾವಣ, ನೀ ಬರೆದ ಕಾದಂಬರಿ, ಹೊಸ ನೀರು, ದಿಗ್ವಿಜಯ, ಬೇಟೆ, ಗಡಿಬಿಡಿ ಕೃಷ್ಣ, ಬಾಳೊಂದು ಭಾವಗೀತೆ... ಹೀಗೆ ನೂರೈವತ್ತಕ್ಕೂ ಹೆಚ್ಚು ಸಿನೆಮಾಗಳಲ್ಲಿ ಅಭಿನಯಿಸಿ ಚಲನಚಿತ್ರ ರಂಗಕ್ಕೂ ತಮ್ಮ ಅಭಿನಯದ ಕೊಡುಗೆಯನ್ನು ಸಿಂಹರವರು ವಿಸ್ತರಿಸಿದರು. ಜೊತೆಗೆ ಕಾಕನಕೋಟೆ, ಶಿಕಾರಿ, ಅಶ್ವಮೇಧ, ಸಿಂಹಾಸನ, ಅಂಗೈಯಲ್ಲಿ ಅಪ್ಸರೆ... ಹೀಗೆ ಒಟ್ಟು ಐದು ಸಿನೆಮಾಗಳನ್ನೂ ಸಹ ನಿರ್ದೇಶಿಸಿದ್ದಾರೆ. ಕಿರುತೆರೆಯಲ್ಲಿ ಕೂಡ ಹಲವಾರು ಧಾರಾವಾಹಿಗಳಲ್ಲಿ ನಟಿಸಿದ್ದಾರೆ. ಅದರಲ್ಲಿ ಪ್ರಮುಖವಾದವು ಕೆಲವು. ವೈದ್ಯೋ ನಾರಾಯಣೋ ಹರಿ, ಪ್ರತಿಧ್ವನಿ, ನಾವೆಲ್ಲರೂ ಒಂದೇ, ನೀತಿಚಕ್ರ... ಮುಂತಾದ ಟಿ.ವಿ. ಸೀರಿಯಲ್ಲುಗಳಲ್ಲಿ ಅಭಿನಯಿಸಿದ್ದಾರೆ. ಮಾಲ್ಗುಡಿ ಡೇಸ್, ಗೊರೂರು ಇನ್ ಅಮೇರಿಕ, ಸಾರಾ ಜಹಾ ಹಮಾರಾ, ಘರ್ ಜಮಾಯಿ, ಸಂಸ್ಮರಣ್... ಮುಂತಾದ ಹಿಂದಿ ಧಾರಾವಾಹಿಗಳಲ್ಲೂ ಸಹ ಸಿಂಹರವರು ನಟಿಸಿದ್ದಾರೆ. 'ರ್‍ಯಾಗ್ ಪಿಕರ್ಸ್' ಎನ್ನುವ ಬಿಬಿಸಿಯ ಇಂಗ್ಲಿಷ್ ಟೆಲಿ ಧಾರಾವಾಹಿಯಲ್ಲೂ ಅಭಿನಯಿಸಿದ್ದಾರೆ.

'ಉಸಿರಿಗಾಗಿ ನಾಟಕ, ಹೆಸರಿಗಾಗಿ ಸಿನೆಮಾ, ಬದುಕಿಗಾಗಿ ಧಾರಾವಾಹಿ' ಎಂದು ಸಿಂಹ ಹೇಳುತ್ತಿದ್ದರು. ಹೀಗಾಗಿ ಈ ಮೂರು ದೃಶ್ಯ ಮಾಧ್ಯಮಗಳಲ್ಲಿ ಸಿಂಹ ತಮ್ಮ ಪ್ರತಿಭೆಯನ್ನು ಮೆರೆದಿದ್ದರು. ಜೊತೆಗೆ 'ವಿಜಯ ಕರ್ನಾಟಕ' ಪತ್ರಿಕೆಯಲ್ಲಿ 'ನಿಮ್ಮ ಸಿಮ್ಮ' ಎನ್ನುವ ಅಂಕಣವನ್ನೂ ಬರೆದು ತಮ್ಮ ನೆನಪುಗಳನ್ನು ಹಾಗೂ ಅನುಭವಗಳನ್ನು ದಾಖಲಿಸಿದ್ದರು. ೧೯೮೬ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ, ೨೦೦೦ದಲ್ಲಿ ರಂಗಭೂಮಿ ಕೊಡುಗೆಗಾಗಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ೨೦೦೪ರಲ್ಲಿ ಕೇಂದ್ರ ಸರಕಾರದ 'ಸಂಗೀತ ಮತ್ತು ನಾಟಕ ಅಕಾಡೆಮಿ ಪ್ರಶಸ್ತಿ, ೧೯೭೮ರಲ್ಲಿ ಕಾಕನಕೋಟೆ ಸಿನೆಮಾದ ಅತ್ಯುತ್ತಮ ನಿರ್ದೇಶನಕ್ಕಾಗಿ ರಾಜ್ಯ ಪ್ರಶಸ್ತಿ, ೧೯೯೩ರಲ್ಲಿ ಶಂಕರೇಗೌಡ ರಂಗಮಂದಿರ ಪ್ರಶಸ್ತಿ... ಹೀಗೆ ಹಲವಾರು ಗೌರವ ಮತ್ತು ಪ್ರಶಸ್ತಿಗಳು ಸಿಂಹರವರಿಗೆ ಸಂದಿವೆ.

ಫೆಬ್ರವರಿ ೨೮, ಸಿಂಹರವರ ಮಗಳು ಅಖಿಲಾರವರ ಜನ್ಮದಿನ. ಆದರೆ ಈ ವರ್ಷ ಜನ್ಮದಿನದ ಸಂಭ್ರಮಕ್ಕೆ ಬದಲು ಅವರ ಮನೆಯನ್ನು ತುಂಬಿದ್ದು ಸೂತಕ. ಏನೇ ಆಗಲಿ ಇಂತಹ ಅಭಿಜಾತ ನಟನಿಗೆ ಇಂತಹ ನಿಷ್ಕೃಷ್ಟ ಸಾವು ಬರಬಾರದಿತ್ತು. ಮೈಯೆಲ್ಲಾ ಕ್ಯಾನ್ಸರ್ ಹಬ್ಬಬಾರದಿತ್ತು. ಕಳೆದ ಒಂದೂವರೆ ವರ್ಷದಿಂದ ಪ್ರಾಸ್ಟ್ರೇಟ್ ಕ್ಯಾನ್ಸರ್ ಸಿಂಹರವರನ್ನು ಹೈರಾಣಾಗಿಸಿತ್ತು. ಮೂರು ದಿನಕ್ಕೊಮ್ಮೆ ಡಯಾಲಿಸಿಸ್‌ಗೆ ಒಳಗಾಗಬೇಕಿತ್ತು. ಕೊನೆಕೊನೆಗೆ ಕ್ಯಾನ್ಸರ್ ಮೂಳೆ ಮೂಳೆಗೂ ಪಸರಿಸಿ ನೋವಿನ ನರಕವನ್ನೇ ಸೃಷ್ಟಿಸಿತ್ತು. ಈ ನಗುಮುಖದ ನಟ ಅದು ಹ್ಯಾಗೆ ಈ ನೋವನ್ನು ಸಹಿಸಿಕೊಂಡರೋ ? ಅವರು ಬದುಕುಳಿಯುವ ಕ್ಷೀಣ ಆಸೆಯನ್ನೂ ಸಹ ವೈದ್ಯರು, ಕುಟುಂಬದವರು ಕೈಬಿಟ್ಟಿದ್ದರು. ಬದುಕುವ ಅವಕಾಶವೇ ಇಲ್ಲವೆಂದಾಗ ಯಾವ ಆಸ್ಪತ್ರೆಯವರೂ ಸಿಂಹರವರನ್ನು ಸೇರಿಸಿಕೊಳ್ಳಲಿಲ್ಲ. ಮನೆಯಲ್ಲಿ ೨೪ ಗಂಟೆಗಳ ಕಾಲ ಆರೈಕೆ ಮಾಡಲು ಸಾಧ್ಯವೇ ಇರಲಿಲ್ಲ. ಕೊನೆಗೆ ಫೆಬ್ರವರಿ ೨೨ರಂದು ಕೊನೆಗಾಲದವರ ಸೇವೆಗಾಗಿಯೇ ಇರುವ 'ಸೇವಾಕ್ಷೇತ್ರ ಆಸ್ಪತ್ರೆ'ಗೆ ಅನಿವಾರ್ಯವಾಗಿ ಸಿಂಹರವರನ್ನು ದಾಖಲಿಸಲಾಗಿತ್ತು. ಎಲ್ಲರೂ ಅವರ ಸಾವಿನ ಕ್ಷಣಕ್ಕಾಗಿ ಕಾದಂತಿತ್ತು.

ಯಾಕೆಂದರೆ ಇಷ್ಟೊಂದು ವೇದನೆಪಡುವುದಕ್ಕಿಂತಲೂ ಈ ಎಲ್ಲಾ ನರಕಸದೃಶ ನೋವಿನಿಂದ ಸಿಂಹ ಮುಕ್ತರಾಗಬೇಕೆಂಬುದು ಎಲ್ಲರ ಆಶಯವಾಗಿತ್ತು. 'ಒಳ್ಳೆಯ ದಿನದಂದು ಸಾವು ಬರಲಿ' ಎಂಬುದು ಹಲವರ ನಿರೀಕ್ಷೆಯಾಗಿತ್ತು. ಅವರ ನಿರೀಕ್ಷೆಯನ್ನು ಸಾವು ನಿರಾಸೆಗೊಳಿಸಲಿಲ್ಲ. ಅಂದು ಫೆ. ೨೮, ಮಹಾಶಿವರಾತ್ರಿ. ಇಂತಹ ದಿನದಂದು ಮಧ್ಯಾಹ್ನ ಮೂರು ಗಂಟೆಗೆ ಸಿಂಹ ಕಾಲನ ಕತ್ತಲೆ ಗುಹೆಗೆ ಖಾಯಂ ಆಗಿ ಸೇರಿಹೋಯಿತು. ಆದರೆ... ಸಾವು ಯಾರನ್ನೂ ಬಿಟ್ಟಿಲ್ಲ. ಬಿಡುವುದೂ ಇಲ್ಲ. ಆದರೆ ಸಾವು ಬರುವುದೇ ಆದರೆ ಬರಲಿ, ಆದರೆ ಅದು ಸುಗಮವಾಗಿರಲಿ. ಈ ನಿಟ್ಟಿನಲ್ಲಿ ಪರೇಶ್ ಹಾಗೂ ಗೋವಾದತ್ತು ಸುಖದ ಸಾವು ಕಂಡರು. ಆದರೆ ಸಿಂಹರವರಿಗೆ ಆ ಭಾಗ್ಯ ಇರಲಿಲ್ಲ. ಆದರೆ ಸಾವಿನ ನಂತರ ಸಿಂಹರವರಿಗೆ ಸಿಕ್ಕ ಗೌರವ ಹಾಗೂ ಜನಸ್ಪಂದನೆ ಅದ್ಭುತವಾಗಿತ್ತು.

**ಶಶಿಕಾಂತ ಯಡಹಳ್ಳಿ**
ನಂ. ೧೩೧, 'ಪ್ರಗತಿ ನಿವಾಸ', ರಾಮ ದೇವಸ್ಥಾನದ ರಸ್ತೆ
ದೊಮ್ಮಲೂರು, ಬೆಂಗಳೂರು – ೫೬೦ ೦೭೧

# ನೈಜೀರಿಯ : ಭಯೋತ್ಪಾದಕರ ಅಟ್ಟಹಾಸ



ಆಫ್ರಿಕ ಖಂಡದ ಮಧ್ಯಭಾಗದಲ್ಲಿರುವ ನೈಜೀರಿಯ ಅಪಾರವಾದ ತೈಲಸಂಪತ್ತಿನಿಂದ ಕೂಡಿರುವ ದೇಶ. ಬಹುಜನಾಂಗೀಯ, ಅತಿ ಹೆಚ್ಚು ಜನಸಾಂದ್ರತೆ ಹೊಂದಿರುವ ಈ ದೇಶದ ಉತ್ತರ ಭಾಗದಲ್ಲಿ ಮುಸಲ್ಮಾನರು ಅಧಿಕ ಸಂಖ್ಯೆಯಲ್ಲಿದ್ದರೆ ದಕ್ಷಿಣ ಭಾಗದಲ್ಲಿ ಕ್ರೈಸ್ತ ಧರ್ಮೀಯರು ಹೆಚ್ಚಾಗಿದ್ದಾರೆ. ಬ್ರಿಟಿಷ್ ವಸಾಹತುಶಾಹಿಗಳಿಂದ ೧೯೬೦ರಲ್ಲಿ ಸ್ವಾತಂತ್ರ್ಯ ಪಡೆದುಕೊಂಡಾಗಿನಿಂದ ನೈಜೀರಿಯ ಒಂದಲ್ಲ ಒಂದು ದುರಂತವನ್ನು ಎದುರಿಸುತ್ತಿದೆ. ದೇಶದ ಪೂರ್ವ ಭಾಗ ಬಯಾಫ್ರಾ ಸ್ವತಂತ್ರ ಗಣರಾಜ್ಯವೆಂದು ಕರೆದುಕೊಂಡಿದ್ದರಿಂದ ೧೯೭೦ರವರೆಗೆ ದೇಶದಲ್ಲಿ ಅಸ್ಥಿರತೆ, ಅಂತರ್ಯುದ್ಧದ ಭೀಕರತೆ, ಆನಂತರ ಸರ್ವಾಧಿಕಾರ ಮತ್ತು ಸೇವಾಡಳಿತ. ಈಗ ದೇಶ ಭಯೋತ್ಪಾದನೆಯ ಸುಳಿಯಲ್ಲಿ ಸಿಕ್ಕಿಕೊಂಡಿದೆ.



ಇಸ್ಲಾಮಿಕ್ ಉಗ್ರಗಾಮಿ ಸಂಘಟನೆ ಅಲ್‌ಖೈದಾದೊಂದಿಗೆ ನಂಟು ಹೊಂದಿರುವ 'ಬೋಕೊ ಹರಮ್' ತಂಡ ನೈಜೀರಿಯದಲ್ಲಿ ಹಿಂಸಾಚಾರದ ಅಟ್ಟಹಾಸ ನಡೆಸಿದೆ. ಇತ್ತೀಚೆಗೆ ದೇಶದ ಈಶಾನ್ಯ ಭಾಗದಲ್ಲಿ ಈ ತಂಡ ನಡೆಸಿದ ದೌರ್ಜನ್ಯದಲ್ಲಿ ನೂರಾರು ಮಂದಿ ಸಾವಿಗೀಡಾಗಿದ್ದಾರೆ. ಇದರ ಜೊತೆ ೩೦೦ಕ್ಕೂ ಹೆಚ್ಚು ಶಾಲಾ ಬಾಲಕಿಯರನ್ನು ಅಪಹರಿಸಿ ಒತ್ತೆಯಾಳುಗಳನ್ನಾಗಿ ಇರಿಸಿಕೊಂಡಿದ್ದಾರೆ. ಇವರ ಪೈಕಿ ಹೆಚ್ಚಿನವರು ಕ್ರೈಸ್ತ ಧರ್ಮೀಯರು. ಇವರನ್ನು ಇಸ್ಲಾಂಗೆ ಪರಿವರ್ತನೆ ಮಾಡುವ ಹುನ್ನಾರ. ತಮ್ಮ ಸಂಘಟನೆಯ ಕಾರ್ಯಕರ್ತರನ್ನು ಸರಕಾರ ಬಿಡುಗಡೆ ಮಾಡುವವರೆಗೆ ಬಾಲಕಿಯರನ್ನು ಬಿಡುಗಡೆ ಮಾಡುವುದಿಲ್ಲ ಎಂದು ಘೋಷಿಸಿದ್ದಾರೆ. ಒತ್ತೆಯಾಳುಗಳ ಬಿಡುಗಡೆಗಾಗಿ ಪ್ರಯತ್ನ ನಡೆಯುತ್ತಿದೆ.

ಕಳೆದ ಐದಾರು ವರ್ಷಗಳಿಂದ ಬೋಕೊ ಹರಮ್ ಸರಕಾರದ ವಿರುದ್ಧವಾಗಿ ದಾಳಿಗಳನ್ನು ನಡೆಸುತ್ತಲೇ ಬಂದಿದೆ. ಈ ಮೂಲಭೂತವಾದಿ ಸಂಸ್ಥೆ ಪಾಶ್ಚಾತ್ಯ ಸಂಸ್ಕೃತಿ ಹಾಗೂ ವಿದ್ಯಾಭ್ಯಾಸಕ್ಕೆ ವಿರೋಧವಾಗಿ ಷರಿಯತ್ ನಿಯಮದ ಪರಿಪಾಲನೆಗೆ ಅದು ಹೆಚ್ಚು ಒತ್ತು ನೀಡುತ್ತಿದೆ. ಹಾವ್ರಸ ಭಾಷೆಯ ಪದ ಬೋಕೊ ಹರಮ್ ಎಂದರೆ 'ಎಲ್ಲ ಪಾಶ್ಚಾತ್ಯ ಜ್ಞಾನದ ನಿಷೇಧ' ಎಂದು. ಈ ತಂಡದ ಹಿಂಸಾಚಾರಕ್ಕೆ ಈ ವರ್ಷಾರಂಭದಿಂದ ೧೫೦೦ ಮಂದಿ ಹತರಾಗಿದ್ದಾರೆಂದು ಅಂದಾಜು. ಕ್ರಿಶ್ಚಿಯನ್ನರಿಗಿಂತ ಹೆಚ್ಚು ಮಂದಿ ಮುಸಲ್ಮಾನರೇ ಈ ತಂಡದ ಹಿಂಸಾಚಾರಗಳಿಗೆ ಬಲಿಯಾಗಿದ್ದಾರೆ. ಮುಸಲ್ಮಾನರು ಅಧಿಕವಾಗಿರುವ ಉತ್ತರ ಮತ್ತು ಕ್ರೈಸ್ತರು ಹೆಚ್ಚಾಗಿರುವ ದಕ್ಷಿಣದ ನಡುವೆ ಘರ್ಷಣೆಗಳನ್ನು ಪ್ರಚೋದಿಸುವುದು ಬೋಕೊ ಹರಮ್‌ನ ಉದ್ದೇಶಗಳಲ್ಲಿ ಒಂದು. ಕೋಮುಸಾಮರಸ್ಯ ಕಾಪಾಡಿಕೊಂಡು ಬರಲು ನೈಜೀರಿಯದಲ್ಲಿ ಸರದಿಯಂತೆ ಉತ್ತರ ಮತ್ತು ದಕ್ಷಿಣ ಭಾಗಗಳಿಗೆ ಅಧ್ಯಕ್ಷ ಸ್ಥಾನಕ್ಕೆ ಪ್ರಾತಿನಿಧ್ಯ ನೀಡುವ ಪರಂಪರೆ ಬೆಳೆದುಬಂದಿದೆ. ಅದರ ಪ್ರಕಾರ ನೈಜೀರಿಯದ ಹಾಲಿ ಅಧ್ಯಕ್ಷ ಗುಡಲಕ್ ಜೋನಾಥನ್.

ಮಾನವ ಹಕ್ಕುಗಳ ಪರಿವೀಕ್ಷಣೆ ಮಾಡುವ ತಂಡದ ಪ್ರಕಾರ ನೈಜೀರಿಯದಲ್ಲಿ ಸಂಭವಿಸಿರುವ ಜನಾಂಗೀಯ ಹಾಗೂ ಧಾರ್ಮಿಕ ಘರ್ಷಣೆಗಳಲ್ಲಿ ೨೦೧೦ರಿಂದೀಚೆಗೆ ೩೦೦೦ಕ್ಕೂ ಹೆಚ್ಚು ಮಂದಿ ಸಾವಿಗೀಡಾಗಿದ್ದಾರೆ. ೧೯೬೭ರಿಂದ ೧೯೭೦ರವರೆಗೆ ನಡೆದ ಅಂತರ್ಯುದ್ಧದಲ್ಲಿ ಒಂದು ಮಿಲಿಯಕ್ಕೂ ಹೆಚ್ಚು ಜನ ಹತರಾದರೆಂದು ಅಂದಾಜು. ಒಂದು ಕಾಲಘಟ್ಟದಲ್ಲಿ ಅಲಿಪ್ತ ಚಳವಳಿಯಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದ ನೈಜೀರಿಯ ಇಂದು ಹಿಂಸಾಚಾರದ ಬೀಡಾಗಿರುವುದು ದುರಂತ. ಈ ವರ್ಷದ ಪ್ರಾರಂಭದಿಂದ ದೇಶದಲ್ಲಿ ಅತಿ ಹೆಚ್ಚು ಭಯೋತ್ಪಾದನಾ ಕೃತ್ಯಗಳು ನಡೆದಿದ್ದು ನೂರಾರು ಮಂದಿ ಸಾವಿಗೀಡಾಗಿದ್ದಾರೆ. ಈಗ ಮುಖ್ಯವಾಗಿರುವ ಪ್ರಶ್ನೆ ಅಪಹೃತಗೊಂಡು ಒತ್ತೆ ಇರುವ ಅಮಾಯಕ ಶಾಲಾ ಬಾಲಕಿಯರನ್ನು ಸುರಕ್ಷಿತವಾಗಿ ಕರೆತರುವುದು.

ಅಮೆರಿಕದ ಭದ್ರತಾ ಏಜನ್ಸಿಗಳು ಪರಿಸ್ಥಿತಿಯನ್ನು ತೀವ್ರವಾಗಿ ಗಮನಿಸುತ್ತಿವೆ. ಅಧ್ಯಕ್ಷ ಬರಾಕ್ ಒಬಾಮಾ ಬೋಕೊ ಹರಮ್ ಸಂಘಟನೆಯನ್ನು ಭಯೋತ್ಪಾದಕ ಎಂದು ಕರೆದಿದ್ದಾರೆ. ಅದರ ನಾಯಕನನ್ನು ಸೆರೆಹಿಡಿಯಲು, ಇಲ್ಲವೆ ಮುಗಿಸಿಬಿಡಲು ಅಮೆರಿಕ ಈಗಾಗಲೇ ಪರಿಣತರ ತಂಡವನ್ನು ರವಾನಿಸಿದೆ. ಸೇನೆಯನ್ನು ರವಾನಿಸಲು ತುದಿಗಾಲಮೇಲೆ ನಿಂತಿದೆ. ನೈಜೀರಿಯ ಆಫ್ರಿಕ ಖಂಡದಲ್ಲಿ ಆಯಕಟ್ಟಿನ ಪ್ರದೇಶದಲ್ಲಿರುವುದಲ್ಲದೆ, ತೈಲಸಂಪತ್ತನ್ನೂ ಹೊಂದಿರುವುದರಿಂದ ಮೊದಲಿನಿಂದಲೂ ಅಮೆರಿಕಕ್ಕೆ ಅದರ ಮೇಲೆ ಆಸಕ್ತಿ. ನೈಜೀರಿಯದಲ್ಲಿ ಸೈನಿಕ ನೆಲೆ ಸ್ಥಾಪಿಸಲು ಅಮೆರಿಕ ಈ ಮೊದಲೇ ಪ್ರಯತ್ನಿಸಿತ್ತು. ಆದರೆ ನೈಜೀರಿಯ ಅದಕ್ಕೆ ಸಮ್ಮತಿಸಲಿಲ್ಲ. ಈಗಲೂ ಪಾಶ್ಚಾತ್ಯ ರಾಷ್ಟ್ರಗಳು ನೈಜೀರಿಯದ ನೆರವಿಗೆ ಬರಲು ಸಿದ್ಧವಾಗಿವೆ. ಆದರೆ ನೈಜೀರಿಯದ ಅಧ್ಯಕ್ಷ ಜೋನಾಥನ್ ಇದುವರೆಗೆ ಅದಕ್ಕೆ ಸಮ್ಮತಿಸಿಲ್ಲ. ಪರಿಸ್ಥಿತಿ ಗಂಭೀರವಾಗಿದೆ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಪಾರಸೀ–ಸಂಸ್ಕೃತ ಮಣಿಪ್ರವಾಳದ ಖಾನಖಾನೋಪಾಖ್ಯಾನ

**ಮ**ಣಿಪ್ರವಾಳ : ನಮ್ಮ ಹಿಂದಿನ ದೇಶೀಸಾಹಿತ್ಯದಲ್ಲಿ ಸಂಸ್ಕೃತದೊಂದಿಗೆ ಸ್ಥಳೀಯ ಭಾಷೆಯನ್ನು ಬೆರೆಸಿ ಛಂದೋಬದ್ಧವಾದ ಪದ್ಯಗಳನ್ನು ರಚಿಸುವ ಒಂದು ಪರಿಪಾಠವನ್ನು ಕಾಣುತ್ತೇವೆ. ಹೀಗೆ ಸಂಸ್ಕೃತದೊಂದಿಗೆ ದೇಶೀಭಾಷೆಯನ್ನು ಬೆರೆಸಿದ ಭಾಷಾಶೈಲಿಗೆ "ಮಣಿಪ್ರವಾಳ" (ರತ್ನ ಮತ್ತು ಹವಳಗಳ ಮಿಶ್ರಣ) ಎಂದು ಹೆಸರು. ಈ ಪದ್ಧತಿಯು ಹೆಚ್ಚಾಗಿ ಬಳಕೆಯಲ್ಲಿ ಇದ್ದಿದ್ದು ಮಲಯಾಳ ಭಾಷೆಯಲ್ಲಿ. ಸಂಸ್ಕೃತ ಕನ್ನಡ ಭಾಷೆಗಳ ಮಣಿಪ್ರವಾಳ ರಚನೆಗೆ ಶತಾಯುಷಿ ಪ್ರೊ॥ ಜಿ. ವೆಂಕಟಸುಬ್ಬಯ್ಯನವರು ಪಂಪಭಾರತದಿಂದ ಒಂದು ಉದಾಹರಣೆಯನ್ನು ಕೊಡುತ್ತಾರೆ : **"ಕಃ ಕೇನಾರ್ಥೀ ಕೋ ದರಿದ್ರಃ ಎನುತುಮನಿತುಮಂ ಧರ್ಮಜಂ ಸೂರೆಗೊಟ್ಟಂ"** (ಪಂಪಭಾರತ, ೬–೪೦).

ಇಲ್ಲಿ, **"ಕಃ ಕೇನಾರ್ಥೀ ಕೋ ದರಿದ್ರಃ"** (ಯಾರಿಂದ ಏನು ಯಾಚನೆಗೊಂಡಿದೆ ? ಯಾರು ದರಿದ್ರನು ?) ಎಂಬ ಭಾಗವು ಸಂಸ್ಕೃತದಲ್ಲಿದ್ದು ಉಳಿದದ್ದು ಹಳೆಗನ್ನಡದಲ್ಲಿದೆ. ಉತ್ತರ ಭಾರತದ ಪ್ರಾದೇಶಿಕ ಭಾಷೆಗಳ ನುಡಿಗಟ್ಟುಗಳನ್ನು ಸಂಸ್ಕೃತದೊಂದಿಗೆ ಬೆರೆಸಿ ಛಂದೋಬದ್ಧವಾಗಿ ರಚಿಸಿದ ಎಷ್ಟೋ ಸಾಹಿತ್ಯ ಕೃತಿಗಳಿವೆ. ಇಂತಹ ರಚನೆಗಳನ್ನು ಅವರು 'ಮಣಿಪ್ರವಾಳ' ಎಂದು ಹೆಸರಿಸದಿದ್ದರೂ ಆ ಪರಿಪಾಠ ಬಹಳಷ್ಟಿದೆ. ನಮಗೆ ಸ್ವಲ್ಪಮಟ್ಟಿಗೆ ಮೋಜಿನದಾಗಿ ಕಾಣುವುದು ಮಡಿವಂತ ಭಾಷೆ ಸಂಸ್ಕೃತದೊಂದಿಗೆ ಉರ್ದು/ಅರಬ್ಬೀ/ಪಾರಸೀ ಭಾಷೆಗಳ ಪದಗಳನ್ನು ಮಿಶ್ರಿಸಿದಾಗ ! ಕೆಲವೊಮ್ಮೆ ಅನ್ಯಭಾಷಾ ಪದಗಳ ಪ್ರಯೋಗಗಳು ಸಂಸ್ಕೃತದೊಂದಿಗೆ ಹೊಂದಿಕೊಂಡು ಅವೂ ಕೂಡ ಸಂಸ್ಕೃತ ಪದಗಳೇ ಇರಬಹುದೆಂಬ ಭ್ರಮೆಯನ್ನು ಉಂಟುಮಾಡಿ ಸಂಸ್ಕೃತ ಪಂಡಿತರನ್ನೂ ತಬ್ಬಿಬ್ಬಾಗಿಸುವುದುಂಟು. ಒಂದು ಉದಾಹರಣೆಯನ್ನು ನೋಡಿ :

**ಆಂಜನೇಯಃ ಅಶೋಕವನೇ ಸೀತಾಮಪ್ರೋಚ್ಯ ವಚನಮೇಕಮಾಹ ।**

– ಅಂದರೆ, ಆಂಜನೇಯನು ಅಶೋಕವನದಲ್ಲಿ ಸೀತೆಯನ್ನು ಸಮೀಪಿಸಿ ಮಾತನೊಂದನ್ನು ಹೇಳಿದನು. ಇಲ್ಲಿ 'ಅಪ್ರೋಚ್' ಎಂಬ ಆಂಗ್ಲ ಪದವನ್ನು "ಅಪ್ರೋಚ್ಯ" ಎಂದು ಸಂಸ್ಕೃತೀಕರಿಸಿ ಬಳಸಲಾಗಿದೆ !

ಡಾ॥ ಎಸ್. ಬಾಲಚಂದ್ರರಾವ್

### ಖಾನಖಾನಾಂಕಿತ ಅಬ್ದ್ ಅಲ್–ರಹೀಮ್ ಖಾನ್

ಮೊಘಲ್ ದೊರೆ ಅಕ್ಬರ್‌ನ ಆಸ್ಥಾನದಲ್ಲಿ ಅಬ್ದ್ ಅಲ್–ರಹೀಮ್ ಖಾನ್ ಎಂಬ ಘನತೆವೆತ್ತ ವ್ಯಕ್ತಿಯಿದ್ದ. ಆತನು ಸಂಸ್ಕೃತ ಮತ್ತು ಪರ್ಶಿಯನ್ ಎರಡು ಭಾಷೆಗಳಲ್ಲೂ ಪ್ರಕಾಂಡ ಪಂಡಿತನಷ್ಟೇ ಅಲ್ಲದೆ ಸ್ವತಃ ಜನಪ್ರಿಯ ಕವಿಯೂ ಆಗಿದ್ದ. ಈತನ ಪಾಂಡಿತ್ಯ ಹಾಗೂ ಕವಿತಾ ಸಾಮರ್ಥ್ಯವನ್ನು ಗುರುತಿಸಿ ಅಕ್ಬರ್ ಚಕ್ರವರ್ತಿ ಅಬ್ದ್ ಅಲ್ ರಹೀಮ್ ಖಾನ್‌ನಿಗೆ 'ಖಾನ್–ಇ–ಖಾನಾನ್' ಎಂಬ ವಿಶಿಷ್ಟವಾದ ಬಿರುದನ್ನು ನೀಡಿದ್ದನು.

ಈ ಖಾನಖಾನಾಂಕಿತ ಅಬ್ದ್ ಅಲ್ ರಹೀಮ್ ಖಾನನು ಶುದ್ಧ ಸಂಸ್ಕೃತದಲ್ಲಿ ಮತ್ತು ಹಿಂದಿಯಲ್ಲಿ ಮಾತ್ರವಲ್ಲದೆ ಸಂಸ್ಕೃತ–ಹಿಂದಿ ಮತ್ತು ಸಂಸ್ಕೃತ–ಪಾರಸೀ ಮಣಿಪ್ರವಾಳ ಭಾಷಾಶೈಲಿಗಳಲ್ಲೂ ಕಾವ್ಯಗಳನ್ನು ರಚಿಸಿದ್ದಾನೆ. ಅಷ್ಟೇ ಅಲ್ಲದೆ, ಫಲಜ್ಯೋತಿಷಕ್ಕೆ ಸಂಬಂಧಿಸಿದಂತೆ ಪಾರಸೀ–ಸಂಸ್ಕೃತ ಮಿಶ್ರಭಾಷಾ ಕೃತಿಯೊಂದನ್ನೂ ರಚಿಸಿದ್ದಾನೆ. ಆ ಕೃತಿಯ ಹೆಸರು 'ಖೇಟಕೌತುಕಮ್'.

### 'ಖೇಟಕೌತುಕಮ್'

ಇಲ್ಲಿ 'ಖೇಟ' (ಖೇ+ಅಟ) ಅಂದರೆ ಆಕಾಶದಲ್ಲಿ ಚಲಿಸುವ ಕಾಯಗಳು. ಇವುಗಳಲ್ಲಿ ಗ್ರಹಗಳೂ ಸೇರಿಕೊಳ್ಳುತ್ತವೆ. ಇನ್ನು 'ಕೌತುಕಂ' ಎಂಬುದನ್ನು ಅಚ್ಚರಿ ಅಥವಾ ಕುತೂಹಲ ಎಂಬರ್ಥದಲ್ಲಿ ಬಳಸಲಾಗಿದೆ.

ಈ ಸ್ವಾರಸ್ಯಕರವಾದ ಪುಸ್ತಿಕೆಯು ಆರಂಭವಾಗುವುದು ಕೆಳಕಂಡ ಮಂಗಳ ಶ್ಲೋಕದೊಂದಿಗೆ :

**ಯತ್ಪದಪಂಕಜರೇಣೋಃ ಪ್ರಸಾದಮಾಸಾದ್ಯ ಸರ್ವಭುವನೇಷು ।**
**ಪ್ರಣಮಾಮಿ ಇಷ್ಟಸುಮೂರ್ತಿಂ ತಾಮಹಮ್ ಅಮರಾಃ ಪ್ರಭುತ್ವಮಪಿ ಯಾನ್ತಿ ॥**

ಯಾವ ಇಷ್ಟದೇವತೆಯ ಚರಣಕಮಲದ ಧೂಳಿಯ ಕೃಪೆಯಿಂದ ದೇವತೆಗಳು ಸಮಸ್ತಲೋಕಗಳ ಪ್ರಭುತ್ವವನ್ನು ಪಡೆಯುತ್ತಾರೋ ಅಂತಹ ಇಷ್ಟದೇವತೆಯ ಸುಂದರ ಮೂರ್ತಿಯನ್ನು ನಮಸ್ಕರಿಸುತ್ತೇನೆ.

ಹಾಗೆಯೇ ಮುಂದುವರಿದು ಗ್ರಂಥಕರ್ತನಾದ ಖಾನಖಾನಾ ನಬ್ಬಾಬ (ಅಬ್ದ್ ಅಲ್–ರಹೀಮ್) ಹೇಳುತ್ತಾನೆ :

नब्बाब खानखानाकृतं

**खेटकौतुकम्**

'भावबोधिनी' हिन्दीटीकासहितम्

टीकाकार :-

पं० दीनानाथ भोक्ता ज्योतिषाचार्यः

**ಫಾರಸೀಯಪದಮಿಶ್ರಿತ ಗ್ರಂಥಾಃ ಖಲು ಪಂಡಿತೈಃ ಕೃತಾಃ ಪೂರ್ವೈಃ ।**
**ಸಂಪ್ರಾಪ್ಯ ತತ್ಪದಪಥಂ ಕರವಾಣಿ ಖೇಟಕೌತುಕಂ ಪದ್ಯೈಃ ॥**

ಪಾರಸೀಮಿಶ್ರಿತ (ಸಂಸ್ಕೃತ) ಗ್ರಂಥಗಳು ಹಿಂದಿನ ಪಂಡಿತರಿಂದ ರಚಿಸಲ್ಪಟ್ಟಿವೆಯಷ್ಟೆ. ಅಂಥವರ ಕಾಲುದಾರಿಯನ್ನು ಪಡೆದುಕೊಂಡು ನಾನು (ಖಾನಖಾನಾ ಸಾಹೇಬನು) ಪದ್ಯಗಳಲ್ಲಿ 'ಖೇಟಕೌತುಕ'ವನ್ನು ರಚಿಸುತ್ತಿದ್ದೇನೆ.

ಈ ಹಿಂದೆಯೇ ಹೇಳಿದಂತೆ 'ಖೇಟಕೌತುಕ' ಎಂಬುದು ಒಂದು ಫಲಜ್ಯೋತಿಷದ ಹೊತ್ತಿಗೆಯಾಗಿದ್ದು, ಅದರಲ್ಲಿ ವ್ಯಕ್ತಿಗಳ ಜಾತಕಗಳಲ್ಲಿ ಸೂರ್ಯಾದಿ ಆಕಾಶಕಾಯಗಳು ಲಗ್ನದಿಂದ ಆರಂಭಿಸಿ ೧೨ ಭಾವ(ಮನೆ)ಗಳಲ್ಲಿ ಇದ್ದರೆ, ಅವುಗಳ 'ಫಲ'ಗಳನ್ನು ಹೇಳಿದೆ. ಫಲಜ್ಯೋತಿಷವನ್ನು ನಾವು ವೈಜ್ಞಾನಿಕವಾಗಿ ಅಲ್ಲಗಳೆದರೂ ಈ ಪಾರಸೀ – ಸಂಸ್ಕೃತ ಮಿಶ್ರಣದ ಶ್ಲೋಕಗಳಲ್ಲಿರುವ ಮೋಜನ್ನು ಸವಿಯಬಹುದಷ್ಟೇ ! ಕೆಲವು ಉದಾಹರಣೆಗಳು :

೧. **ಯದಾ ಚಶ್ಮಖಾನೇ ಭವೇದ್ ಆಫತಾಬಃ ತದಾ ಜ್ಞಾನಹೀನೋ ಗುಸ್ಸರ್ವ ಮುದ್ದಾಮ್ । ಸದಾ ತಂಗದಿಲ್...॥**

ಯಾವಾಗ ಎರಡನೇ ಮನೆಯಲ್ಲಿ ಸೂರ್ಯನು (ಆಫತಾವ್) ಇರುತ್ತಾನೋ ಆಗ ಆ ವ್ಯಕ್ತಿಯು ಮೂರ್ಖ ಹಾಗೂ ಕೋಪಿಷ್ಠ (ಗುಸ್ಸರ್ವ) ನಾಗಿರುತ್ತಾನೆ. ಈ ಶ್ಲೋಕದಲ್ಲಿ 'ಚಶ್ಮಖಾನ' ಎಂದರೆ 'ಕುರುಡತನದ ಮನೆ' ಎಂದರ್ಥ. ಜಾತಕದಲ್ಲಿ ಲಗ್ನದಿಂದ ಎರಡನೇ ಮನೆಯನ್ನು 'ಕುರುಡುತನ'ದ ಭಾವವೆಂದೂ ಹಾಗೆಯೇ ಐಶ್ವರ್ಯದ ಮನೆ (ಧನಸ್ಥಾನ) ಎಂದೂ ಜ್ಯೋತಿಷಿಗಳು ಪರಿಗಣಿಸುತ್ತಾರೆ.

೨. **...ಭವತಿ ಯದಿ ಜಲಾದುಲ್ಲಕ್ಕೋ ಬಖ್ತಖಾನೇ... ಪರಯುವತಿರತಃ ಸ್ಯಾತ್... ॥**

ಒಂದು ವೇಳೆ ಕುಜನು (ಜಲಾದುಲ್ಲಕ್ಕ) ಒಂಬತ್ತನೇ ಮನೆಯಲ್ಲಿ (ಬಖ್ತಖಾನ) ಇದ್ದರೆ, ಪರಯುವತಿಯಲ್ಲಿ (ಕಾಮ) ಮೋಹಿತನಾಗಿರುತ್ತಾನೆ...

೩. **ಯದಿ ಭವತಿ ಮಿರೀಖೋ ಲಗ್ನಗಃ ಖಿಷ್ಮನಾಕ್ ಸ್ಯಾದ್ ರುಧಿರ–ಪ್ರಭವ–ರೋಗೈಃ ಪೀಡಿತೋ ಮುಫ್ಲಿಸಶ್ಚ । ...ವಿಯೋಗೀ ದಾರಪುತ್ರೈರ್ ಹಮೇಶಃ ॥**

ಒಂದು ವೇಳೆ ಕುಜನು (ಮಿರೀಖ್) ಲಗ್ನದಲ್ಲಿದ್ದರೆ ಜನಸಮುದಾಯ ದೊಂದಿಗೆ ಜಗಳಗಂಟನಾಗುತ್ತಾನೆ. ರಕ್ತದೋಷಗಳಿಂದ ಉಂಟಾಗುವ ರೋಗಗಳಿಂದ



**ಅಂದು ನೀವೇ ಹೇಳಿದ್ದು... ! ಕೊಡ್ತಿರೋ... ತೆಗಿತಿರೋ... ? ಹೇಳಿಲ್ಲ !**

ಪೀಡಿತನಾಗುತ್ತಾನೆ... ಯಾವಾಗಲೂ (ಹಮೇಶ) ಹೆಂಡತಿ ಮಕ್ಕಳಿಂದ ಬೇರ್ಪಟ್ಟು ಇರುತ್ತಾನೆ.

ಹೀಗೆ ಜಗಳಗಂಟನಾಗಿ, ರಕ್ತಸಂಬಂಧಿ ಕಾಯಿಲೆಗಳಿಂದ ಬಳಲುತ್ತ ಹೆಂಡತಿ ಮಕ್ಕಳಿಂದಲೂ ಪರಿತ್ಯಕ್ತನಾಗುವಂತಹ ದುರಂತದ ಕಣಿಗಳೇ ನಮ್ಮ ಫಲಜ್ಯೋತಿಷಿಗಳ ಖಜಾನೆಯಲ್ಲಿ ತುಂಬಿದೆಯೇ ಎಂದು ನೀವು ಕೇಳಿದರೆ ಅದಕ್ಕೆ ಉತ್ತರ, "ಇಲ್ಲ ಇಲ್ಲ ! ಎಲ್ಲಾದರೂ ಉಂಟೆ ? ರಾಜಯೋಗಗಳನ್ನೇ ನಾವು ಹೆಚ್ಚು ಹೆಚ್ಚಾಗಿ ಬಡಬಡಾಯಿಸದಿದ್ದರೆ, ನಮಗೆ ಆದಾಯವಾದರೂ ಎಲ್ಲಿಯದು ?" ಎಂದು ತಕ್ಷಣ ನಿಮಗೆ ಬಹಳ ಆಶಾದಾಯಕವಾಗಿ 'ಒಳ್ಳೆಯ ಗ್ರಹ'ವಾದ ಗುರುವನ್ನು ಒಂದು 'ಅನುಕೂಲ'ವಾದ ಮನೆಗೇ ತಳ್ಳಿ ಖಾನಖಾನಾ ಸಾಹೇಬರು ಅಪ್ಪಣೆ ಕೊಡುತ್ತಾರೆ :

**೪. ಮುಶ್ತರೀ ಯದಿ ಭವೇದ್ ಖಲು ತಾಲೇ**
**ಸಾಹೇಬಃ ಖುಶದಿಲೋ ಮನುಜಃ ಸ್ಯಾತ್ ।**
**ಆಮಿಲಃ ಪುರುಸಖೂನ್ ಸಿರದಾರಃ ಫಾರಸೋ ಹಿ**
**ಅಕವೀರೋ ಮಹಮೂಬಃ ॥**

(ಲಗ್ನದಲ್ಲಿ) ಗುರು (ಬೃಹಸ್ಪತಿ, ಮುಶ್ತರೀ) ಇದ್ದರೆ ಓರ್ವ ಅಧಿಪತಿಯಾಗಿಯೂ (ಸಾಹೀಬ್), ಸಂತೋಷಚಿತ್ತನಾಗಿಯೂ (ಖುಶ್‌ದಿಲ್), ಕ್ರಿಯಾಶೀಲ (ಆಮೀಲ್)ನಾಗಿಯೂ, ವಾಗ್ಮಿ (ಪುರುಸಖೂನ್) ಆಗಿದ್ದು, ಚತುರ ಅಶ್ವಾರೂಢನಾಗಿಯೂ (ಫಾರಸ್) ಅಕ್ಬರನಂತೆ (ಅಕವೀರಃ) ವೈಭವಯುಕ್ತನಾಗಿರುತ್ತಾನೆ.

ಈ ಮೇಲಿನ 'ಭವಿಷ್ಯ'ವನ್ನು ಓದಿದಾಗ ಖಾನಖಾನಾ ಸಾಹೇಬನ ಆಶ್ರಯದಾತನಾದ ಅಕ್ಬರ್ ದೊರೆಯ ಜಾತಕದಲ್ಲೇ ಗುರುಗ್ರಹವು ಲಗ್ನದಲ್ಲಿರಬೇಕು ಅನ್ನಿಸುವುದಿಲ್ಲವೇ ? ಈ ಅಂಶವನ್ನು ನಮ್ಮ ಅಭಿನವ ವರಾಹಮಿಹಿರರು (ಅಥವಾ ಅವರ ಸಂತಾನದವರು) ದೃಢಪಡಿಸಬೇಕು !

**೫. ಯದಾ ಚಶ್ಮಖೋರಾ ಭವೇದ್ ಹಫ್ತಖಾನೇ ಶಶೀ ದೋಸ್ತಖಾನೇ ಮಿರಿಖೋ ಅಥ ನಕ್ರೇ ।**
**ಸುರತ್–ಕಮಾಲೋ ನರೋ ದೀನದಾರೋ ಗನೀಮಪ್ರಹಂತಾ ಜಹಾನಪ್ರಚಂಡಃ ॥**

यदा चशमखोरा भवेद् हफ्तखाने
शशी दोस्तखाने मिरीखोऽथ नक्रे ।
सुरत्कमालो नरो दीनदारो
गनीमप्रहन्ता जहानप्रचण्डः ॥23॥

– ಯಾವಾಗ ಶುಕ್ರನು (ಚಶ್ಮಖೋರಾ) ಸಪ್ತಮಸ್ಥಾನ (ಹಫ್ತಖಾನ)ದಲ್ಲಿದ್ದು, ಚಂದ್ರನು ಚತುರ್ಥಸ್ಥಾನ (ದೋಸ್ತಖಾನ)ದಲ್ಲಿಯೂ, ಕುಜ (ಮಿರೀಖ)ನು ಮಕರರಾಶಿಯಲ್ಲಿಯೂ ಇದ್ದರೆ, ಅಂತಹ ವ್ಯಕ್ತಿಯು ಬಹಳ ಆಕರ್ಷಕವಾಗಿಯೂ, ಸೌಂದರ್ಯವುಳ್ಳವನೂ (ಸುರತ್–ಕಮಾಲ್), ಪರೋಪಕಾರಿಯೂ, ದಯಾಳುವೂ, ಶತ್ರುವಿನಾಶಕನೂ ಆಗಿದ್ದು ಪ್ರಖ್ಯಾತಿಯನ್ನು ಪಡೆಯುವನು.

ಇಷ್ಟೆಲ್ಲಾ ಓದಿದ ಮೇಲೆ, ಅಕ್ಬರನ ಜಾತಕವನ್ನು ಬರೆಯುವುದು ಬಹಳ ಕಷ್ಟವೇನಲ್ಲ !

ಈ ಮೇಲಿನ ಶ್ಲೋಕದಲ್ಲಿ ***ಚಶ್ಮಖೋರ***ನೆಂದರೆ ಅಂಧನಾದ ಗ್ರಹ (ಒಕ್ಕಣ್ಣ ಶುಕ್ರಾಚಾರ್ಯ). ಹಾಗೆಯೇ 'ಹಫ್ತಖಾನ' ಎಂದರೆ ಏಳನೇ ಮನೆ. ಏಳನೇ ಮನೆಯು 'ಕಳತ್ರಸ್ಥಾನ'ವಾಗಿದ್ದು ಹೆಂಡತಿ, ಪ್ರೇಮ, ಕಾಮ ಮುಂತಾದವುಗಳನ್ನು ಸೂಚಿಸುತ್ತವೆಯಂತೆ. ನಮ್ಮ ದೇಶದ ಜನಪ್ರಿಯ ಆಂಗ್ಲಭಾಷೆಯ ಲೇಖಕ ಆರ್. ಕೆ. ನಾರಾಯಣ್ ಅವರ 'ಸೆವೆನ್ತ್ ಹೌಸ್' ಎಂಬ ಸಣ್ಣಕತೆಯನ್ನು ಜ್ಞಾಪಿಸಿಕೊಳ್ಳಿ. ಅಲ್ಲಿ ತನ್ನ ಹೆಂಡತಿಯನ್ನು ಕಳೆದುಕೊಂಡ ದುರಂತ ನಾಯಕನ ಜಾತಕದಲ್ಲಿ ಕಳತ್ರಸ್ಥಾನದಲ್ಲಿ ಸ್ಥಾಪಿತನಾದವನು ಕುಜ. ಇದಕ್ಕೆ ಖಾನಖಾನಾ ಸಾಹೇಬರ ಕಣಿ : "ಏಳನೇ ಮನೆಯಲ್ಲಿ ಕುಜನಿದ್ದರೆ, ವ್ಯಕ್ತಿಯು ಅಲ್ಪ ಸ್ತ್ರೀಸೌಖ್ಯವನ್ನು ಹೊಂದುತ್ತಾನೆ..."! **ಹಫ್ತ** ಎಂಬ ಪದವು ಸಂಸ್ಕೃತದ 'ಸಪ್ತ' ಎಂಬ ಪದದ ತದ್ಭವವಾಗಿದೆ. ಯಾವ ಭಾಷೆಯಿಂದ ಯಾವಭಾಷೆಗೆ 'ತದ್ಭವ'ವಾಗಿದೆ ಎಂಬುದು ಭಾಷಾವಿಜ್ಞಾನಿಗಳಲ್ಲಿ ಬಹುಶಃ ಒಂದು ವಿವಾದವಾಗಿರಬಹುದು!

ಇನ್ನು 'ಹಫ್ತ' ಎಂಬ ಪದ ನಮ್ಮ ರಾಜ್ಯದಲ್ಲಿ ಇತ್ತೀಚಿನ ವರ್ಷಗಳಲ್ಲಂತೂ ಜನಜನಿತವಾಗಿದೆ. ಸಣ್ಣಪುಟ್ಟ ಮಾರಾಟಗಾರರಿಂದ ಪೊಲೀಸರು ಮತ್ತು ಸ್ಥಳೀಯ ಗೂಂಡಾಗಳು 'ಹಫ್ತ' ವಸೂಲು ಮಾಡುವುದು 'ಮಾಮೂಲಿ'ಯಾಗಿದೆ ! ವಾರಕ್ಕೆ ಇಷ್ಟು ಎಂಬ ಲೆಕ್ಕ.

'ಖೇಟಕೌತುಕ'ದ ಈ ಮೇಲೆ ಉಲ್ಲೇಖಿಸಿದ ಶ್ಲೋಕದ ಒಂದು ಭಾಗವಾದ **"ಯದಾ ಚಶ್ಮಖೋರಾ ಭವೇದ್ ಹಫ್ತಖಾನೇ..."** ಎಂಬುದನ್ನು ತೆಗೆದುಕೊಂಡು ಅಷ್ಟಾವಧಾನಿ–ಶತಾವಧಾನಿಗಳು 'ಸಮಸ್ಯಾಪೂರಣ' ಮಾಡುವಂತೆ ಮುಂದುವರೆದು **'ಬೀಬೀ ಭಾರ್ಯಾ ಭವಿಷ್ಯತಿ ಮೇ'** ಎಂದು ಶುಕ್ರನ portfolioಗೆ ಪ್ರೋತ್ಸಾಹವನ್ನು ನೀಡಬಹುದು. ಈ ಕೊನೆಯ ಭಾಗದ (ಸಮಸ್ಯಾಪೂರಣದ) ಅರ್ಥ : "ಬೀಬಿ ನನ್ನ ಭಾರ್ಯೆಯಾಗುವಳು" ಅಥವಾ "ನನ್ನ ಭಾರ್ಯೆಯು ಬೀಬಿಯಾಗುವಳು" !

## ಕೃಷ್ಣಭಕ್ತ ಖಾನಖಾನಾ

ಖಾನ–ಇ–ಖಾನಾನ್ ಬಿರುದಾಂಕಿತ ಅಬ್ದ್–ಅಲ್–ರಹೀಮ್ ಖಾನನು ಓರ್ವ ಕೃಷ್ಣಭಕ್ತನೂ ಆಗಿದ್ದು ಶುದ್ಧ ಸಂಸ್ಕೃತದಲ್ಲಿ, ಹಿಂದಿಯಲ್ಲಿ ಹಾಗೂ ಮಿಶ್ರಭಾಷೆಗಳಲ್ಲಿ ಬಹಳಷ್ಟು ಕವಿತೆಗಳನ್ನು ರಚಿಸಿದ್ದು, ಅವುಗಳಲ್ಲಿ ಕೆಲವು ಈಗಲೂ ಜನಪ್ರಿಯವಾಗಿವೆ. ಆತನ ಒಂದು ಸಂಸ್ಕೃತ ಶ್ಲೋಕದ ಅರ್ಥವು ಹೀಗಿದೆ :

"ಭಗವಂತ, ನಿನ್ನ ವಾಸಸ್ಥಾನವು ರತ್ನಗಳ ಆಗರವಾಗಿದೆ (ಸಮುದ್ರವೇ ಆಗಿದೆ), (ಐಶ್ವರ್ಯ ದೇವತೆಯಾದ) ಲಕ್ಷ್ಮಿಯೇ ನಿನ್ನ ಭಾರ್ಯೆ, ಸಕಲ ಲೋಕಗಳಿಗೂ ನೀನೇ ಅಧಿಪತಿಯಾಗಿದ್ದು ನಿನ್ನಲ್ಲಿ ಮೌಲ್ಯಯುತವಾದ ಎಲ್ಲವೂ ಇದೆ. ಹೀಗಿರುವಾಗ ನಾನು ಏನು ತಾನೇ ಕೊಡಲು ಸಾಧ್ಯ ? ಹೌದು, ನಿನ್ನ ಹೃದಯವನ್ನು ರಾಧೆಯು ಕದ್ದುಬಿಟ್ಟಿದ್ದಾಳೆ. ಅಂದರೆ, ನಿನ್ನಲ್ಲಿ ಹೃದಯದ ಜಾಗವು ಖಾಲಿಯಾಗಿದೆ. ಆದ್ದರಿಂದ ನನ್ನ ಹೃದಯವನ್ನೇ ನಿನಗೆ (ಭಕ್ತಿಯಿಂದ) ನೀಡುತ್ತೇನೆ. (**ರತ್ನಾಕರೋಸ್ತಿ ಸದನಂ ಗೃಹಿಣೀ ಚ ಪದ್ಮಾ...**).

ಕೋಮುಸೌಹಾರ್ದಕ್ಕೆ ಪೋಷಕವಾಗಿರುವ ಒಂದು ಶ್ಲೋಕವನ್ನು ಗಣಿತಜ್ಞ–ಮಿತ್ರರಾದ ಡಾ॥ ಸಿ. ಎಸ್. ಅರವಿಂದ ಅವರು ಉಲ್ಲೇಖಿಸಿದ್ದಾರೆ :

**ಅಲ್ಲಾದೇವೋ ದೇವಪೂಜಾ ನಮಾಜ ಖಾಜಿ ವಿದ್ವಾನ್ ಪಂಡಿತಸ್ತತ್ರ ಮುಲ್ಲಾ ।**
**ಪುರಾಣಃ ಕುರಾಣಃ ಕಿತಾಬಂಚ ಶಾಸ್ತ್ರಂ ಭಾಷಾಭೇದೋ ನೈವ ಶಾಸ್ತ್ರೇಷು ಭೇದಃ ॥**

ಈ ಉಲ್ಲೇಖಿತ ಶ್ಲೋಕದಲ್ಲಿ ಸಣ್ಣಪುಟ್ಟ ವ್ಯಾಕರಣ ದೋಷಗಳಿದ್ದರೂ ಅದರ ಅರ್ಥವು ಬಹಳ ಮಹತ್ವದ್ದಾಗಿದೆ, ಮಹಾತ್ಮ ಗಾಂಧಿಯವರ "ಈಶ್ವರ ಅಲ್ಲಾ ತೇರೇ ನಾಮ್" ಮಾತನ್ನು ಪ್ರತಿಧ್ವನಿಸುತ್ತದೆ.

ಒಟ್ಟಿನಲ್ಲಿ ಮಧ್ಯಕಾಲೀನ ಭಾರತದಲ್ಲಿ ಸಂಸ್ಕೃತವೂ ಸೇರಿದಂತೆ ಭಾರತೀಯ ಭಾಷೆಗಳೊಂದಿಗೆ ಪಾರಸೀ ಮತ್ತು ಅರಬ್ಬೀ ಭಾಷೆಗಳೂ ಸಾಹಿತ್ಯದಲ್ಲಿ ಹಾಗೂ ಕೆಲವು ಶಾಸ್ತ್ರಕೃತಿಗಳಲ್ಲಿ ಸಮರ್ಪಕವಾಗಿ ಮಿಲನಗೊಂಡಿರುವುದನ್ನು ಕಾಣುತ್ತೇವೆ.

**ಡಾ॥ ಎಸ್. ಬಾಲಚಂದ್ರರಾವ್**
ಗೌ॥ ನಿರ್ದೇಶಕರು, ಭಾರತೀಯ ವಿದ್ಯಾಭವನ
ಬೆಂಗಳೂರು – ೫೬೦ ೦೦೧

# ಮಾರ್ಕ್ಸ್‌ವಾದದ ಪ್ರಸ್ತುತತೆ ಕುರಿತಾದ ವೈಚಾರಿಕ ಕೃತಿ

ಬಂಡವಾಳಶಾಹಿ – ಸಮಾಜವಾದಿ ವ್ಯವಸ್ಥೆಗಳ ಅಂತರ ತಿಳಿಯಬೇಕಾದರೆ ಕಾರ್ಲ್ ಮಾರ್ಕ್ಸ್ ಬರೆದ ಸಾಹಿತ್ಯವನ್ನೆಲ್ಲ ಓದಿ ಅರ್ಥೈಸಬೇಕು. ಎಲ್ಲೆಲ್ಲಿ ಕ್ರೂರ ಸಾಮ್ರಾಜ್ಯವಾದಿ – ಬಂಡವಳಿಗರ ಶೋಷಣೆಯ ಜಗತ್ತು ತೆರೆದುಕೊಳ್ಳುತ್ತದೋ ಅಲ್ಲೆಲ್ಲ ಕಾರ್ಲ್ ಮಾರ್ಕ್ಸ್ ಹಾಗೂ ಆತನ ಸಿದ್ಧಾಂತದ ತಿರುಳು ನಮಗೆ ಅವಶ್ಯವೆಂದು ಅನಿಸುತ್ತದೆ. ಅದಕ್ಕೆ ಕಾಲ ದೇಶಗಳ ಭೇದವಿಲ್ಲ. ಇಂದಿನ ಜಾಗತೀಕರಣ ಪ್ರಕ್ರಿಯೆಗಳು ಪ್ರಾರಂಭವಾಗಿ ಶೋಷಣೆಯು ರಾಷ್ಟ್ರ – ರಾಷ್ಟ್ರಗಳ ಮಟ್ಟಕ್ಕೆ ಬೆಳೆದು ನಿಂತಿದೆ. ಶ್ರಮಿಕರಿಗಾಗಿ ಜೀವನವನ್ನೇ ತೇಯ್ದು ಜಾಗತಿಕವಾಗಿ ಹೋರಾಡಲು ಕರೆಯಿತ್ತವನು ಮಾರ್ಕ್ಸ್. ಜಗತ್ತಿನೆಲ್ಲೆಡೆ ಇರುವ ಮಾರ್ಕ್ಸ್‌ವಾದವನ್ನು ಮೌಲಿಕವಾಗಿ ಅಂಗೀಕರಿಸಿದ ಟೆರಿ ಈಗಲ್‌ಟನ್ ಮುಂತಾದ ಚಿಂತಕರನೇಕರ ಹಲವಾರು ಪುಸ್ತಕಗಳನ್ನು ಅವಲೋಕಿಸುತ್ತ 'ಅಂಥದೇನಿದೆ ಮಾರ್ಕ್ಸ್‌ವಾದದಲ್ಲಿ?' ಎಂಬ ಕುತೂಹಲದ ಅಧ್ಯಯನದಿಂದಾಗಿ ಡಾ॥ ಜಿ. ರಾಮಕೃಷ್ಣ ಅವರಿಂದ ಪ್ರತಿಪಾದನೆಯ ರೂಪದಲ್ಲಿ ಈ ಕೃತಿ ಮೂಡಿಬಂದಿದೆ. ಮಾರ್ಕ್ಸ್ ಮತ್ತು ಆತನ ಬರಹಗಳಲ್ಲೇನಿದೆ ? ಸಮಾಜದಲ್ಲಿ ಮೌಲ್ಯಗಳು ಕುಸಿದಾಗ ಅವನ ಚಿಂತನೆಗಳು ಎಲ್ಲ ಕಾಲಕ್ಕೂ ಸಾರ್ವಕಾಲಿಕವೆಂದು ಸಾರುವ ಅತ್ಯಮೂಲ್ಯ ಕೃತಿಯಿದು.

ಎಂದಿಗೂ ಸಲ್ಲುವ ಮಾರ್ಕ್ಸ್





ಡಾ॥ ಜಿ. ರಾಮಕೃಷ್ಣ

₹ 90

ಮೂರು ವರ್ಷದ 'ಹೊಸತು' ಚಂದಾದಾರರಿಗೆ 20% ಸೋಡಿ.
ಇತರರಿಗೆ 10% ಸೋಡಿ.
ಅಂಚೆ/ಕೊರಿಯರ್ ವೆಚ್ಚ ರೂ. 40/– ಪ್ರತ್ಯೇಕ

ಆನ್‌ಲೈನ್ ಮೂಲಕವೂ ಲಭ್ಯ



Shop Online @ www.navakarnataka.com

ಹಣವನ್ನು ಡಿ.ಡಿ., ಎಂ.ಒ. ಮೂಲಕ ಕಳಿಸಿ ಅಥವಾ ನಮ್ಮ ಪುಸ್ತಕ ಮಳಿಗೆಗೆ ಭೇಟಿ ನೀಡಿ



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ ಬೆಂಗಳೂರು – 560 001. ಫೋನ್ : 30578022, 22203580 ಫ್ಯಾಕ್ಸ್ : 30578023
e-mail : navakarnataka@gmail.com http://navakarnataka.blogspot.in

ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಗುಲ್ಬರ್ಗಾ ✆ 224302

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil
© All rights reserved. Reproduction in whole or in part without permission is prohibited.

**HOSATHU** Kannada Monthly / JUNE 2014 / ₹ 15
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)


# ಗೋಲ್ಡನ್ ಗ್ಲೋ ಹೊಸ ಸಂತೂರ್‌ನದ್ದು

## ನಿಮಗಿದು ಸಿಕ್ಕಿದೆಯ?

ಸಂತೂರ್ ಈವಾಗ ಹೊಸ ಪರಿಮಳ ಮತ್ತು ಹೊಸ ಆಕಾರದೊಂದಿಗೆ ಬಂದಿದೆ, ಮತ್ತು ಸಂವರ್ಧಿತ ಸ್ನಾನದ ಅನುಭವ. ಇದು ವಿಶ್ವಾಸಾರ್ಹ ಪ್ರಾಕೃತಿಕ ಸಾರಗಳಾದ, ಸ್ಯಾಂಡಲ್ ಮತ್ತು ಟರ್ಮರಿಕ್‌ನಿಂದ ಸಮೃದ್ಧವಾಗಿದೆ, ಇವು ತ್ವಚೆಯ ಆಳದ ವರೆಗೆ ಸೇರಿ ನಿಮಗೆ ನೀಡುತ್ತೆ ದೀರ್ಘಕಾಲ ಬಾಳಿಕೆಯ ಚಿನ್ನದ ಕಾಂತಿ ತ್ವಚೆಯನ್ನು ಸುಂದರ ಹಾಗೂ ತಾರುಣ್ಯಪೂರ್ಣವಾಗಿರಿಸಲು ಲಕ್ಷಾಂತರ ಮಹಿಳೆಯರು ಹೊಸ ಸಂತೂರ್‌ನ್ನು ಆರಿಸಿಕೊಂಡಿರೋದರಲ್ಲಿ ಆಶ್ಚರ್ಯವೇನಿಲ್ಲ.




DRAFTFCB + ULKA 250993

ಹೊಸ ಸಂತೂರ್ ಟ್ರೈಮಾಡಿ
ಪಡೆಯಿರಿ ದೀರ್ಘಕಾಲ ಬಾಳಿಕೆಯ ಚಿನ್ನದ ಕಾಂತಿ

ನಿಮ್ಮ ಮೊಬೈಲ್ ಫೋನ್ browser ನಲ್ಲಿ www.2dscan.com ಗೆಹೋಗಿ ಫ್ರೀ ಸ್ಕ್ಯಾನಿಂಗ್ app.ನ್ನು ಡೌನ್‌ಲೋಡ್ ಮಾಡಿ.ನಿಮ್ಮ ಮೊಬೈಲ್ ಕ್ಯಾಮೆರಾವನ್ನು ಗ್ರಾಫಿಕ್ ಮೇಲೆ ಪಾಯಿಂಟ್ ಮಾಡಿ ಸಂತೂರ್ ಆ್ಯಡ್ಸ್‌ನ್ನು ನೋಡಿ.



ತಾರುಣ್ಯಪೂರ್ಣ ತ್ವಚೆಯ ರಹಸ್ಯ

SANTOOR

Like our page at www.facebook.com/SantoorLounge